# ಮಹಾಭಾರತ

[ಆದಿಪರ್ವ]

ಆಸ್ಥಾನ ವಿದ್ವಾನ್

ಬೆಳ್ಳಾವೆ ನರಹರಿಶಾಸ್ತ್ರಿ





ಪಿ. ಟಿ. ಐ. ಬುಕ್ ಡಿಪೊ

ಎಜುಕೇಷನಲ್ ಪಬ್ಲಿಷರ್ಸ್ – ಬೆಂಗಳೂರು ನಗರ

೧೯೫೧

# ಮುನ್ನುಡಿ

ಐದನೆಯ ವೇದವೆಂದು ಜಗದ್ವಿಖ್ಯಾತವಾಗಿರುವ ಶ್ರೀಮನ್ಮಹಾಭಾರತದಲ್ಲಿ, ಪ್ರತಿಯೊಬ್ಬರೂ ತಿಳಿಯಬೇಕಾದ ಅನೇಕ ಧರ್ಮನೀತಿ ತತ್ವಗಳು ಗರ್ಭಿತವಾಗಿರುವುವಲ್ಲದೆ, ಈ ಚರಿತ್ರವು ಅನೇಕ ಉಪಕಥೆಗಳನ್ನೊಳಗೊಂಡು, ಓದುಗರಿಗೆ ಕನ್ನಡಿಯಂತೆ ತಮ್ಮ ತಮ್ಮ ದೋಷಗಳನ್ನು ತಮಗೇ ಪ್ರತ್ಯಕ್ಷಗೊಳಿಸಿ, ಅವರನ್ನು ಮುಂದೆ ಆಯಾ ದೋಷಗಳಿಗೆ ಒಳಗಾಗದಂತೆ ಮಾಡುತ್ತದೆ. ಇದರಲ್ಲಿ ಧರ್ಮನೀತಿ ದೈವಭಕ್ತಿಭರಿತರಾದ ಪಾಂಡವರಿಗೂ, ಅಧರ್ಮ ದುರಾಶಾಭರಿತರಾದ ಕೌರವರಿಗೂ ನಡೆದ ಮಹಾಭಾರತಯುದ್ಧವೇ ಮುಖ್ಯ ವಿಷಯವಾಗಿ, ನಿಜವಾದ ದೈವಭಕ್ತಿಯುಳ್ಳವರಿಗೆ ಎಂತಹ ಕಷ್ಟಾಪಾಯಗಳೊದಗಿದರೂ ಅವೆಲ್ಲವೂ ದೈವಕೃಪೆಯಿಂದ ಪರಿಹಾರವಾಗಿ, ಅವರು ಸುಖಸಂತೋಷ ಸೌಭಾಗ್ಯಗಳನ್ನು ಪಡೆಯುವರೆಂಬುದು ವ್ಯಕ್ತವಾಗುವುದು. ಮುಖ್ಯವಾಗಿ ಇದರ ಭೀಷ್ಮಪರ್ವದಲ್ಲಿ, ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಿಸಿರುವ ಭಗವದ್ಗೀತೆಯು ಜಗತ್ತಿನ ನಾನಾ ಭಾಗಗಳಿಗೂ ತನ್ನ ಪ್ರಕಾಶವನ್ನು ವಿಸ್ತರಿಸಿ, ಅನೇಕರನ್ನು ಜ್ಞಾನಿಗಳನ್ನಾಗಿ ಮಾಡಿರುವುದನ್ನು ಹೊಸದಾಗಿ ಹೇಳಬೇಕಾಗಿಲ್ಲ ಜ್ಞಾನಾರ್ಜನೆಯಿಂದ ಐಹಿಕಾಮುಷ್ಮಿಕ ಸುಖಗಳನ್ನು ಬಯಸುವವರಿಗೆ ಅವಶ್ಯವಾದ ಸಕಲ ಸದ್ವಿಷಯಗಳೂ ಆ ಗೀತೆಯಲ್ಲಿ ಅಡಕವಾಗಿ, ಅದು ಜಗತ್ತಿಗೆ ಭಗವಂತನ ವರಪ್ರಸಾದವಾಗಿದೆ.

ದ್ರೌಪದಿಯೊಬ್ಬಳು ಪಂಚಪಾಂಡವರಿಗೆ ಪತ್ನಿಯಾಗಿದ್ದಳೆಂಬ ವಿಚಾರದಲ್ಲಿ, ಅನೇಕರು ನಾನಾ ವಿಧವಾದ ಅಭಿಪ್ರಾಯಗಳನ್ನು ಸೂಚಿಸಿ, ಕಥೆಯನ್ನು ಕೀಳ್ಗೈಯುತ್ತಿರುವರು. ಅದಕ್ಕೆ, ಮಹಾಭಾರತದ ತತ್ವಾಂಶವು ಅಂತಹವರಿಗೆ ಅರ್ಥವಾಗದಿರುವುದೇ ಮುಖ್ಯ ಕಾರಣವೆನ್ನಬೇಕು. ಮನುಷ್ಯನ ಪಂಚೇಂದ್ರಿಯಗಳೂ ಮನಸ್ಸೊಂದನ್ನು ಅನುಸರಿಸಿ ಹೊಂದಿಕೊಂಡು ದಾರಿತಪ್ಪದಂತೆ ಪ್ರವರ್ತಿಸುತ್ತಲೂ, ಆತನು ಸದಾ ದೈವವನ್ನೇ

ನಂಬಿ, ಬಂದ ಕಷ್ಟಗಳೆಲ್ಲವನ್ನೂ ಶಾಂತಿಯಿಂದ ಎದುರಿಸುತ್ತಿದ್ದಲ್ಲಿ, ದೇವರು ಮೆಚ್ಚಿ, ಅಂಥವನನ್ನು ನಾನಾ ವಿಧವಾದ ವಿಪತ್ತುಗಳಿಂದ ತಪ್ಪಿಸಿ, ಕಡೆಗೆ ಪ್ರಸನ್ನನಾಗಿ ಇಷ್ಟಾರ್ಥಗಳನ್ನು ಕರುಣಿಸಿ ಅವರಿಗೆ ಕೀರ್ತಿಯ ನ್ನುಂಟುಮಾಡುವನೆಂಬ ತತ್ವವು ಪಂಚಪಾಂಡವರು ಮತ್ತು ದ್ರೌಪದಿ ಇವರ ಕಥೆಯಿಂದ ಸ್ಪಷ್ಟವಾಗಿ ಕಾಣುತ್ತಿರುವುದು. ಈ ತತ್ವವನ್ನೇ ಭಾರತಕಥೆಯು ಜನರಿಗೆ ಬೋಧಿಸುತ್ತಿರುವುದೆಂಬುದನ್ನು ಪಾಠಕರು ಗಮನಿಸಿದರೆ, ಯಾವ ಭಿನ್ನಾಭಿಪ್ರಾಯಕ್ಕೂ ಅವಕಾಶವಿರುವುದಿಲ್ಲ. ಮತ್ತು ಒಂದೇ ಇಂದ್ರಪದವಿಯಲ್ಲಿದ್ದ ಐದು ಮಂದಿಯು ಪರಮೇಶ್ವರನ ಆಜ್ಞೆಯಂತೆ ಅವರ ಸಾಮ್ರಾಜ್ಯಲಕ್ಷ್ಮಿಯೊಡನೆ, ಭೂಲೋಕದಲ್ಲಿ ಪಂಚ ಪಾಂಡವರಾಗಿ ಅವತರಿಸಿದರಾದಕಾರಣ, ಆ ಇಂದ್ರಸಾಮ್ರಾಜ್ಯಲಕ್ಷ್ಮೀ ಸ್ವರೂಪಳಾದ ದ್ರೌಪದಿಯು ಪಂಚಪಾಂಡವರನ್ನು ಮದುವೆಯಾದುದ ರಲ್ಲಿ ಲೇಶ ದೋಷವೂ ಇಲ್ಲವೆಂದು, ಮಹಾ ವಿಷ್ಣು ಸ್ವರೂಪರಾದ ವೇದ ವ್ಯಾಸರು ದ್ರೌಪದೀವಿವಾಹಸಂದರ್ಭದಲ್ಲಿ, ಸಂದೇಹಪಟ್ಟ ದ್ರುಪದ ರಾಜನಿಗೆ ಆದಿಪರ್ವದಲ್ಲಿ ಹೇಳಿರುವ ಪಂಚೇಂದ್ರೋಪಾಖ್ಯಾನವು ಆಸ್ತಿಕರಾದ ಸರ್ವರಿಗೂ ಸಂದೇಹವನ್ನು ನಿವರ್ತಿಮಾಡುತ್ತದೆ.

ಅಧರ್ಮಶೀಲರೆನಿಸಿ ಭೂಭಾರಸ್ವರೂಪರಾಗಿದ್ದ ಕೌರವಾದಿ ಗಳನ್ನು ನಿಗ್ರಹಿಸಿ ಧರ್ಮೋದ್ಧಾರಮಾಡಲು, ಲಯಕರ್ತನಾದ ರುದ್ರನು, ತನ್ನ ಈಶ್ವರಾಂಶದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ಎಂಬ ಪಂಚಮುಖಗಳಂಶಗಳಿಂದ ಪಂಚಪಾಂಡವರನ್ನು ಸೃಷ್ಟಿಸಿ, ಭೂಲೋಕದಲ್ಲಿ ಶ್ರೀಕೃಷ್ಣಾವತಾರದಿಂದಿದ್ದ ನಾರಾಯಣನನ್ನು ಅವರ ಸಹಾಯಕನನ್ನಾಗಿ ಮಾಡಿ, ದುಷ್ಟರನ್ನು ಲಯಮಾಡಿಸಿ, ಭೂಭಾರ ನಿವಾರಣೆ ಮಾಡಿ ತನ್ನ ಲಯ ಕರ್ತೃತ್ವವನ್ನು ಸಾರ್ಥಕ ಪಡಿಸಿಕೊಂಡ ನೆಂಬ ತತ್ವವು ಸಹ ಮಹಾಭಾರತ ಕಥೆಯಲ್ಲಿ ಕಂಡುಬರುವುದು.

ಆದಕಾರಣ ವೇದದಂತೆ ಅನೇಕ ನಯ ನೀತಿ ಧರ್ಮ ತತ್ವ ಗಳನ್ನೂ, ಭಕ್ತಿ ಜ್ಞಾನ ವೈರಾಗ್ಯ ತತ್ವಗಳನ್ನೂ ಒಳಗೊಂಡ ನಾನಾ ವಿಧವಾದ ಪುರಾತನ ಕಥೆಗಳಿಂದ ತುಂಬಿ ಅಜ್ಞಾನಿಗಳಿಗೆ ಜ್ಞಾನೋದಯ ವನ್ನುಂಟುಮಾಡುವ ಈ ಮಹಾಭಾರತವನ್ನು ಐದನೆಯ ವೇದವೆಂದು ಹೇಳುವುದು ನ್ಯಾಯವಾಗಿಯೇ ಇರುವುದು. ಇದನ್ನು ಸಮಗ

ವಾಗಿ ಓದಿ ಮನನ ಮಾಡುವುದರಿಂದ, ವೇದಾಧ್ಯಯನ ಮಾಡಿ ಅದರಲ್ಲಿನ ಭಾವಗಳನ್ನು ಗ್ರಹಿಸಿದವರಿಗೆ ಅದ್ಭುತ ಜ್ಞಾನವೇ ಉಂಟಾಗುವುದರಲ್ಲಿ ಸಂದೇಹವಿಲ್ಲ. ವೇದಗಳು ದೇವರ ಮುಖದಿಂದ ಹೊರಟುವೆಂಬದಾಗಿ ಕೇಳಿರುವೆವಷ್ಟೆ! ಅದರಂತೆಯೇ ಭಾರತವೂ ಅಗಾಧವಾದ ಒಂದೂ ಕಾಲು ಲಕ್ಷ ಶ್ಲೋಕಗಳಿಂದ ಕೂಡಿ, ದೈವಾಂಶ ಸಂಭೂತರೆನಿಸಿ ಮಹಾವಿಷ್ಣುಸ್ವರೂಪರಾದ ವೇದವ್ಯಾಸ ಮಹರ್ಷಿಗಳ ಮುಖದಿಂದ ಹೊರಟು 'ವೇದ' ವೆಂಬ ಹೆಸರನ್ನು ಪಡೆದಿರುತ್ತದೆ. ಇದನ್ನು ಪಠನಮಾಡುವುದರಿಂದ ಉಂಟಾಗುವ ಅಮೋಘಫಲವು ಅನುಭವದಿಂದ ಮಾತ್ರವೇ ತಿಳಿಯಬೇಕಲ್ಲದೆ, ಹೇಳಿ ಕೇಳುವುದರಿಂದ ತಿಳಿಯಲಾರದು. ಆದುದರಿಂದ ಆಸ್ತಿಕರಾದ ಸರ್ವರೂ ಮಹಾಭಾರತವೆಂಬ ಪುಣ್ಯಚರಿತ್ರವನ್ನು ಸಮಗ್ರವಾಗಿ ಪಠಿಸಿ ಇಹಪರಾನಂದಗಳನ್ನು ಪಡೆಯಲೆಂದು, ಸರ್ವರಿಗೂ ತಿಳಿಯುವಂತೆ ಲಲಿತವಾದ ಕನ್ನಡದ ವಚನರೂಪದಲ್ಲಿ ಕಥಾಸರಣಿಗೆ ಲೋಪವಿಲ್ಲದಂತೆ ಈ ಉದ್ಗ್ರಂಥವು ರಚಿಸಲ್ಪಟ್ಟಿರುತ್ತದೆ. ಸರ್ವರೂ ಇದನ್ನು ಓದಿ ಪುಣ್ಯಭಾಗಿಗಳಾಗಬೇಕೆಂದು ಕೋರಿದೆ.

ಬೆಂಗಳೂರು ನಗರ,<br>೧-೪-೧೯೫೧.

ಬೆಳ್ಳಾವೆ ನರಹರಿಶಾಸ್ತ್ರಿ.

# ವಿಷಯಾನುಕ್ರಮಣಿಕೆ

# ಶ್ರೀ ಮಹಾಭಾರತ
## ಆದಿಪರ್ವ

---

### ಅಧ್ಯಾಯ ೧
### ಭಾರತಲೇಖನ

ಧರ್ಮನೀತಿ ಬೋಧಕವಾದ **ಮಹಾಭಾರತ** ಪುಣ್ಯ ಚರಿತ್ರವನ್ನು ರಚಿಸಿ ಲೋಕಕ್ಕೆ ಅನುಗ್ರಹಿಸಿದವರು ಪರಾಶರ ಮಹರ್ಷಿಗಳ ಪುತ್ರರಾದ **ವೇದವ್ಯಾಸ** ಮುನಿಗಳು. ಇವರು ಮಹಾಭಾರತ ಗ್ರಂಥವನ್ನು ರಚಿಸಿ ಲೋಕದಲ್ಲಿ ಪ್ರಚಾರಪಡಿಸಬೇಕೆಂದು ಸಂಕಲ್ಪಿಸಿ, ಎಲ್ಲಿ ಹುಡುಕಿದರೂ ತಮಗೆ ತಕ್ಕ ಲೇಖಕನೊಬ್ಬನು ದೊರೆಯಲಿಲ್ಲ. ಇದರಿಂದ ಇವರು ಬ್ರಹ್ಮ ದೇವನನ್ನು ಕುರಿತು ಧ್ಯಾನಮಾಡಲು, ಸರ್ವಜ್ಞನಾದ ಚತುರ್ಮುಖನು ಪ್ರತ್ಯಕ್ಷನಾಗಿ, "ವ್ಯಾಸಮುನೀಂದ್ರಾ, ನನ್ನನ್ನು ಸ್ಮರಿಸಿದ ನಿನ್ನ ಉದ್ದೇಶ ವನ್ನರಿತೆನು. ನೀನು ಗಣಪತಿಯನ್ನು ಪ್ರಾರ್ಥಿಸಿದರೆ, ಆತನ ಕೃಪೆ ಯಿಂದ ನಿನ್ನ ಸಂಕಲ್ಪವು ಕೈಗೂಡುವುದು," ಎಂಬದಾಗಿ ಹೇಳಿ ಅಂತರ್ಧಾನವಾದನು. ಅದರಂತೆ ವೇದವ್ಯಾಸರು ಗಣಪತಿಯನ್ನು ಧ್ಯಾನಿಸಲು, ಆತನು ಪ್ರತ್ಯಕ್ಷನಾದನು. ಆಗ ವ್ಯಾಸರು ಆತನಿಗೆ ನಮ ಸ್ಕರಿಸಿ ಕೈಮುಗಿದು, "ದೇವಾ, ಲೋಕದ ಜನರಿಗೆ ನಯ ನೀತಿ ಧರ್ಮ ಬೋಧಕವಾಗಿರುವಂತೆ ಮಹಾಭಾರತ ಕಥೆಯನ್ನು ವಿಸ್ತಾರವಾಗಿ ರಚಿಸಿ ಪ್ರಚಾರ ಪಡಿಸಬೇಕೆಂಬದಾಗಿ ನನಗೆ ಸಂಕಲ್ಪವುದಿಸಿರುವುದು. ಆದರೆ, ನಾನು ಹೇಳುವಷ್ಟು ವೇಗವಾಗಿ ಗ್ರಂಥವನ್ನು ಬರೆಯಬಲ್ಲ ಲೇಖಕನು ಭೂಲೋಕದಲ್ಲೆಲ್ಲಿಯೂ ದೊರೆಯಲಿಲ್ಲ. ಆದಕಾರಣ, ನೀನು ಕೃಪೆ ಮಾಡಿ ನನ್ನನ್ನು ಅನುಗ್ರಹಿಸಬೇಕು," ಎಂಬದಾಗಿ ಪ್ರಾರ್ಥಿಸಿ ಕೊಂಡನು. ಅದಕ್ಕೆ ಗಣಪತಿಯು ನಕ್ಕು, "ವ್ಯಾಸಮುನಿವರ್ಯಾ, ಗಂಗಾ ಪ್ರವಾಹದಂತೆ ತಡೆಯಿಲ್ಲದೆ ಪ್ರವಹಿಸುವ ನಿನ್ನ ವಾಣಿಯ ವೇಗವ ನ್ನನುಸರಿಸಿ ಬರೆಯಲು ಭೂಲೋಕದ ಮನುಷ್ಯರಿಗೆ ಸಾಧ್ಯವೇ ? ಅದರಿಂದ ನಾನೇ ಬರೆಯುವೆನು. ಆದರೆ, ಅತಿ ವೇಗವಾಗಿ ಓಡುವ ನನ್ನ ಲೇಖನಿಯು ನಿಲ್ಲದಂತೆ ನೀನು ಗ್ರಂಥವನ್ನು ಹೇಳಬೇಕು. ಸ್ವಲ್ಪವಿಳಂಬವಾದರೂ

ಆಕ್ಷಣವೇ ಬರೆವಣಿಗೆಯನ್ನು ನಿಲ್ಲಿಸಿ ನಾನು ನಿನಗೆ ಅಗೋಚರ ನಾಗುವೆನು," ಎಂದನು. ಇದು ಮಹಾ ಕಠಿನ ನಿಬಂಧನೆಯಾದರೂ ಇಂತಹ ಪ್ರಚಂಡ ಲೇಖಕನು ದೊರೆತುದು ತಮ್ಮ ಪುಣ್ಯವೆಂದೆಣಿಸಿ, ವ್ಯಾಸರು ಆತನ ನಿಬಂಧನೆಗೆ ಒಪ್ಪಿದರು. ಗಣಪತಿಯು ಅತಿಶೀಘ್ರ ಲೇಖಕನೆಂತಲೂ, ಆತನ ಲೇಖನವೇಗವನ್ನನುಸರಿಸಿ ಕವಿತೆಯನ್ನು ಹೇಳುವುದು ಸ್ವಲ್ಪ ಕಷ್ಟವೆಂತಲೂ ವ್ಯಾಸರಿಗೆ ಕಂಡುಬಂದುದರಿಂದ, ಅದಕ್ಕೆ ತಕ್ಕಂತೆ ಉಪಾಯವನ್ನಾಲೋಚಿಸಿಕೊಂಡು, ಅವರು ಗಣಪತಿ ಯನ್ನು ಕುರಿತು, "ದೇವಾ, ನಿನ್ನ ನಿಬಂಧನೆಗೆ ನಾನೊಪ್ಪಿರುವೆನು. ಆದರೆ, ನೀನು ಮಾತ್ರ ನನ್ನ ಗ್ರಂಥವನ್ನು ವಿವರವಾಗಿ ಅರ್ಥ ಮಾಡಿಕೊಂಡೇ ಬರೆಯಬೇಕು," ಎಂದು ಪ್ರಾರ್ಥಿಸಿಕೊಂಡರು. ಗಣಪತಿಯು ಅದರಂತೆ ಒಪ್ಪಿಕೊಳ್ಳಲು, ಭಾರತ ಲೇಖನವು ಆರಂಭ ವಾಯಿತು. ವ್ಯಾಸರು ಕವಿತೆಯನ್ನು ಹೇಳುವಾಗ, ಅಲ್ಲಲ್ಲಿ ಗುಟ್ಟಾದ ಭಾವಗಳನ್ನಿಟ್ಟು, ಮೇಲೆ ಬೇರೆ ವಿಧವಾಗಿ ಕಾಣುವಂತೆ ಶ್ಲೋಕಗಳನ್ನು ರಚಿಸಿ ಹೇಳುತ್ತ ಬಂದರು. ಕಥಾಸರಣಿಗೆ ಸರಿಯಾಗಿ ಅವುಗಳ ಅರ್ಥ ವನ್ನು ಹೊಂದಿಸಿಕೊಳ್ಳಲು ಗಣಪತಿಯು ಸ್ವಲ್ಪ ಆಲೋಚನೆ ಮಾಡಲೇ ಬೇಕಾಗುತ್ತ ಬಂತು. ಈ ಆಲೋಚನೆಯ ಸಮಯದಲ್ಲಿ, ವ್ಯಾಸರು ತಮ್ಮ ಮುಂದಿನ ಶ್ಲೋಕಗಳನ್ನು ಕಲ್ಪಿಸಿಕೊಂಡು ಹೇಳುತ್ತ ಬಂದರು. ಹೀಗೆ ಗಣಪತಿಯ ಲೇಖನದ ವೇಗವನ್ನು ಅಲ್ಲಲ್ಲಿ ತಡೆಯಲು, ವ್ಯಾಸ ಮಹರ್ಷಿಗಳು ಹೇಳಿದ ಗೂಢಾರ್ಥದ ಶ್ಲೋಕಗಳಲ್ಲಿದ್ದ ಭಾವಗಳಿಗೆ, "ವ್ಯಾಸಗುಟ್ಟು" ಎಂಬ ಮಾತು ಗಾದೆಯಾಗಿ ಈಗಲೂ ಪ್ರಚಾರದಲ್ಲಿದೆ.

## ಮಹಾಭಾರತ ಕಥನ

ಆ ಕಾಲದಲ್ಲಿ ಈಗಿನಂತೆ ಮುದ್ರಣವಿರಲಿಲ್ಲ. ಆದಕಾರಣ ಪೂರ್ವಿ ಕರು, ಅನೇಕ ವಿಷಯಗಳನ್ನು ಬಾಯಿಪಾಠವಾಗಿ ಕಲಿತು ತಮ್ಮ ಜ್ಞಾಪಕದಲ್ಲಿಟ್ಟುಕೊಂಡಿದ್ದು, ಅವುಗಳನ್ನು ಇತರರಿಗೆ ಹೇಳಿಕೊಡುತ್ತ ಬಂದುದರಿಂದ, ಅವುಗಳು ತಲಾಂತರಗಳಿಂದಲೂ ಲೋಪವಿಲ್ಲದೆ ನಿಂತವು. ಹೀಗೆಯೇ ವೇದವ್ಯಾಸರು ತಾವು ರಚಿಸಿದ ಮಹಾಭಾರತವನ್ನು ಮೊಟ್ಟ ಮೊದಲು ತಮ್ಮ ಮಗನಾದ **ಶುಕಮುನಿಗೆ** ಉಪದೇಶಮಾಡಿದರು.

ಆತನಿಂದ ಇತರರಿಗೆ ಉಪದಿಷ್ಟವಾಗಿ ಭಾರತವು ಲೋಕದಲ್ಲಿ ಪ್ರಚಾರವಾಯಿತು.

ಈ ಭಾರತವನ್ನು ಕೇಳಿದ **ನಾರದ ಮಹರ್ಷಿಯು** ಅದನ್ನು ದೇವತೆಗಳಿಗೆ ವಿವರಿಸಿ ಹೇಳಿದನೆಂತಲೂ, ಶುಕಮುನಿಯು ಗಂಧರ್ವ ಯಕ್ಷ ರಾಕ್ಷಸರುಗಳಿಗೆ ವರ್ಣಿಸಿ ತಿಳಿಸಿದನೆಂತಲೂ ಪ್ರತೀತಿಯಿದೆ. ಅನಂತರ ವ್ಯಾಸಮಹರ್ಷಿಗಳ ಮುಖ್ಯಶಿಷ್ಯನಾದ **ವೈಶಂಪಾಯನ** ಮುನಿಯು, ಈ ಮಹಾಭಾರತ ಕಥೆಯನ್ನು, ಪರೀಕ್ಷಿದ್ರಾಜನ ಪುತ್ರನಾದ **ಜನಮೇಜಯ** ರಾಯನು ಮಾಡಿದ ಒಂದು ಮಹಾಯಾಗದ ಸಮಯದಲ್ಲಿ, ಆತನು ಅಪೇಕ್ಷಿಸಿದಂತೆ ಆತನಿಗೇ ವಿಸ್ತಾರವಾಗಿ ಹೇಳಿದನು, ಎಂಬದಾಗಿ ಸೂತ ಪುರಾಣಿಕನು, ನೈಮಿಶಾರಣ್ಯವಾಸಿಗಳಾದ ಶೌನಕಾದಿಮುನಿಗಳಿಗೆ ಹೇಳಿದನು. ಆಗ ಆಭಾರತ ಕಥೆಯನ್ನು ತಮಗೂ ವಿಸ್ತಾರವಾಗಿ ಹೇಳಬೇಕೆಂಬದಾಗಿ ಆ ಮುನಿಗಳು ಸೂತಮುನೀಂದ್ರನನ್ನು ಪ್ರಾರ್ಥಿಸಿಕೊಂಡರು. ಅದರಂತೆ ಆತನು ಅವರಿಗೆ ಆ ಪುಣ್ಯಚರಿತ್ರವನ್ನು ವಿವರಿಸಿ ಹೇಳುವುದಾಗಿ ಒಪ್ಪಿದ ಕೂಡಲೇ, ನೂರಾರು ಮಂದಿ ತಪೋಧನರು ಬಂದು ಅವರ ಸುತ್ತಲೂ ನೆರೆದರು. ಆಗ ಸೂತಮುನಿಯು, “ಮುನಿವರ್ಯರೇ, ಜನಮೇಜಯರಾಯನು ಮಾಡಿದ ಮಹಾಯಾಗದ ಸಮಯದಲ್ಲಿ ವೈಶಂಪಾಯನ ಮುನೀಂದ್ರನ ಮುಖದಿಂದ ನಾನು ಮಹಾಭಾರತ ಕಥೆಯನ್ನು ಸಮಗ್ರವಾಗಿ ಕೇಳಿದೆನು. ತರುವಾಯು, ತೀರ್ಥಯಾತ್ರೆಗಾಗಿ ಹೊರಟು ಅನೇಕ ಪುಣ್ಯನದಿಗಳಲ್ಲಿ ಸ್ನಾನಮಾಡಿ ಮಹಾಕ್ಷೇತ್ರಗಳನ್ನು ಸಂಚರಿಸಿ, ಮಾರ್ಗದಲ್ಲಿ, ಮಹಾಭಾರತ ಯುದ್ಧವು ನಡೆದ ರಣರಂಗವನ್ನು ನೋಡಿಕೊಂಡು, ನಿಮ್ಮೆಲ್ಲರ ಸಂದರ್ಶನಾರ್ಥವಾಗಿ ಇಲ್ಲಿಗೆ ಬಂದೆನು. ಇನ್ನು ನಾನು ಕೇಳಿರುವ ಮಟ್ಟಿಗೆ ಆ ಮಹಾಭಾರತದ ಕಥೆಯನ್ನು ನಿಮಗೆ ವಿಜ್ಞಾಪಿಸಿಕೊಳ್ಳುವೆನು,” ಎಂಬದಾಗಿ ಪ್ರಾರಂಭಿಸಿ, ಆ ಮಹಾಭಾರತ ಕಥೆಯನ್ನು ಆದಿಯಿಂದ ಅಂತ್ಯದವರೆಗೂ ಉಪಕಥೆಗಳ ಸಹಿತವಾಗಿ ಆ ಮುನಿವರ್ಯರಿಗೆ ಸಂತೋಷವಾಗುವಂತೆ ವಿವರಿಸಿ ಹೇಳಿದನು.

## ಮಹಾಭಾರತ ಸಂಕ್ಷೇಪ ಕಥೆ

ಪ್ರಸಿದ್ಧನಾದ **ಶಂತನು ಚಕ್ರವರ್ತಿಯ**ನಂತರದಲ್ಲಿ, ಆತನ ಮಗನಾದ **ಚಿತ್ರಾಂಗದನೂ,** ಅವನನಂತರ ಅವನ ತಮ್ಮ **ವಿಚಿತ್ರವೀರ್ಯನೂ**

ಹಸ್ತಿನಾವತಿಯಲ್ಲಿ ರಾಜ್ಯಭಾರ ಮಾಡಿದರು. ವಿಚಿತ್ರವೀರ್ಯನಿಗೆ **ಅಂಬಿಕೆ, ಅಂಬಾಲಿಕೆ** ಎಂಬ ಇಬ್ಬರು ಪತ್ನಿಯರಲ್ಲಿ ಕ್ರಮವಾಗಿ **ಧೃತರಾಷ್ಟ್ರ** ಮತ್ತು **ಪಾಂಡುರಾಜ** ಎಂಬ ಇಬ್ಬರು ಪುತ್ರರು ಜನಿಸಿದರು. ಇವರಲ್ಲಿ ಹಿರಿಯುವನಾದ ಧೃತರಾಷ್ಟ್ರನು ಹುಟ್ಟುಕುರುಡನಾಗಿದ್ದುದರಿಂದ, ವಿಚಿತ್ರವೀರ್ಯನನಂತರ ಪಾಂಡುರಾಜನಿಗೆ ರಾಜ್ಯಪಟ್ಟಾಭಿಷೇಕವಾಯಿತು. ಪಾಂಡುರಾಜನು ವಿಹಾರಾರ್ಥಕ್ಕಾಗಿ ಒಂದಾನೊಂದು ದಿನ ಬೇಟೆಗೆಂದು ಅರಣ್ಯಕ್ಕೆ ಹೋದನು. ಮೃಗಯಾವಿಹಾರದಲ್ಲಿದ್ದ ಆತನು, ವಿಲಾಸದಲ್ಲಿದ್ದ ಎರಡು ಗಂಡುಹೆಣ್ಣು ಜಿಂಕೆಗಳಮೇಲೆ ಬಾಣಪ್ರಯೋಗಮಾಡಿದ್ದರಿಂದ ಮರಣಾವಸ್ಥೆಗೀಡಾದ ಆ ಜಿಂಕೆಯೊಂದು ಆತನನ್ನು ಕುರಿತು ಮನುಷ್ಯವಚನದಿಂದ, "ಮಹಾರಾಜಾ, ದಂಪತಿಗಳಾದ ನಾವು ಸುಖಸಂತೋಷಗಳಲ್ಲಿರುವಾಗ ನೀನು ನಿರಪರಾಧಿಗಳಾದ ನಮ್ಮ ಮೇಲೆ ಬಾಣಪ್ರಯೋಗಮಾಡಿ ನಮ್ಮನ್ನು ಮರಣಕ್ಕೀಡುಮಾಡಿದುದರಿಂದ, ನೀನು ನಿನ್ನ ಪತ್ನಿಯಲ್ಲಿ ದಾಂಪತ್ಯ ಸುಖ ಸಂತೋಷದಿಂದಿರುವುದಾದರೆ, ನೀನೂ ನಮ್ಮಂತೆ ಮರಣವನ್ನು ಹೊಂದು," ಎಂಬದಾಗಿ ಶಪಿಸಿತು. ಇದನ್ನು ಕೇಳಿದ ಪಾಂಡುರಾಜನು ತನ್ನ ಅಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು, ಇನ್ನು ಮುಂದೆ ತಾನು ಪತ್ನೀಸುಖವನ್ನಪೇಕ್ಷಿಸದೆ ವಾನಪ್ರಸ್ಥಾಶ್ರಮದಲ್ಲಿರುವೆನೆಂದು ನಿಶ್ಚಯಿಸಿ ನಾರುಡೆಗಳನ್ನುಟ್ಟು ವನವಾಸಕ್ಕೆ ತೆರಳಿದನು. ಆತನ ಧರ್ಮಪತ್ನಿಯರಾದ **ಕುಂತಿ ಮಾದ್ರಿ**ಯರೂ ಸಹ ಆತನಂತೆಯೇ ನಾರುಡೆಗಳನ್ನುಟ್ಟು, ಆತನ ಸೇವೆಗಾಗಿ ಪತಿಯನ್ನೇ ಅನುಸರಿಸಿ ಅರಣ್ಯಕ್ಕೆ ಹೋದರು. ಹೀಗೆ ಮೂವರೂ ಅರಣ್ಯವಾಸ ಮಾಡುತ್ತಿರುವಾಗ, ಕುಂತೀದೇವಿಯು, ಹಿಂದೆ ತನಗೆ ದುರ್ವಾಸಮುನಿವರನು ಉಪದೇಶಿಸಿದ್ದ ಮಂತ್ರವನ್ನು ಪತಿಯಾಜ್ಞೆಯಂತೆ ಪುನಶ್ಚರಣೆಮಾಡಿ, ಯಮ, ವಾಯು, ದೇವೇಂದ್ರರ ಅನುಗ್ರಹದಿಂದ, **ಯುಧಿಷ್ಠಿರ, ಭೀಮಸೇನ,** ಮತ್ತು **ಅರ್ಜುನ**ರೆಂಬ ಮೂವರು ಪುತ್ರರನ್ನು ಪಡೆದಳು. ತರುವಾಯ, ತನಗುಪದಿಷ್ಟವಾಗಿದ್ದ ಮಂತ್ರವನ್ನು ಪಾಂಡುರಾಜನ ಅಪ್ಪಣೆಯಂತೆ, ತನ್ನ ಸವತಿಯಾದ ಮಾದ್ರೀದೇವಿಗೆ ಉಪದೇಶಿಸಲು, ಆಕೆ ಆ ಮಂತ್ರವನ್ನು ಅನುಷ್ಠಾನ ಮಾಡಿ ಅಶ್ವಿನೀದೇವತೆಗಳ ಅನುಗ್ರಹದಿಂದ **ನಕುಲ ಸಹದೇವ**ರೆಂಬ ತೇಜಸ್ವಿಗಳಾದ ಇಬ್ಬರು ಯಮಳ ಪುತ್ರರನ್ನು

ಪಡೆದಳು. ಕೆಲವು ಕಾಲದ ಮೇಲೆ ಒಂದಾನೊಂದು ವಸಂತ ಕಾಲದಲ್ಲಿ ಪಾಂಡುರಾಜನು ಮಾದ್ರೀದೇವಿಯ ವಿಲಾಸದಲ್ಲಿರುವಾಗ ದೈವಾಧೀನ ವಾದನು. ಆಗ ಐವರು ಪುತ್ರರನ್ನೂ ಪಾಲಿಸಬೇಕೆಂಬದಾಗಿ ಕುಂತಿಯನ್ನು ಪ್ರಾರ್ಥಿಸಿ ಮಾದ್ರೀದೇವಿಯು ಪತಿಯ ದೇಹದೊಡನೆ ಸಹಗಮನ ಮಾಡಿದಳು. ಆಗ ಕುಂತೀದೇವಿಯ ಸಹಿತರಾಗಿ ಅನಾಥರಾದ ಪಂಚ ಪಾಂಡವರನ್ನೂ, ಅವರ ಬಾಲ್ಯವು ತೀರುವವರೆಗೂ ಆ ಅರಣ್ಯದ ಮುನಿಗಳೇ ಕಾಪಾಡಿ, ಯುಧಿಷ್ಠಿರನಿಗೆ ಹದಿನಾರು ವರ್ಷಗಳಾದನಂತರ ಅವರೆಲ್ಲರನ್ನೂ ಹಸ್ತಿನಾವತಿಗೆ ಕರೆತಂದು, ಅಲ್ಲಿ ಧೃತರಾಷ್ಟ್ರನ ಬಳಿಯಲ್ಲಿದ್ದ ವೃದ್ಧನಾದ ಭೀಷ್ಮನ ವಶಕ್ಕೆ ಒಪ್ಪಿಸಿದರು. ಭೀಷ್ಮನು ಪಂಚಪಾಂಡವರನ್ನೂ ಅವರ ತಾಯಿಯನ್ನೂ ಪ್ರೀತಿಯಿಂದ ಅರಮನೆಯಲ್ಲಿಯೇ ಇಟ್ಟು ಕೊಂಡು ಕಾಪಾಡುತ್ತ, ಬಾಲಕರ ವಿದ್ಯಾಭ್ಯಾಸಕ್ಕೆ ತಕ್ಕ ಅನುಕೂಲ ಗಳನ್ನೇರ್ಪಡಿಸಿದನು. ಪಾಂಡವರು ವೇದ ವೇದಾಂಗಾದಿಗಳನ್ನೂ ಕ್ಷತ್ರಿಯರಿಗೆ ಬೇಕಾದ ಅಸ್ತ್ರಯುದ್ಧ ಶಸ್ತ್ರಯುದ್ಧ ಮಲ್ಲಯುದ್ಧಾದಿ ಕಲೆ ಗಳನ್ನೂ ಕಲಿತು, ಸರ್ವರೂ ಮೆಚ್ಚುವಂತಹ ಉತ್ತಮವಾದ ನಡೆನುಡಿ ಗಳುಳ್ಳವರಾದರು. ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನ ದುಶ್ಶಾ ಸನ ಮೊದಲಾದ ನೂರುಮಂದಿಗೂ ಈ ಪಂಚಪಾಂಡವರ ಮೇಲೆ ಅಸೂಯೆಯೂ ಮಾತ್ಸರ್ಯವೂ ದಿನ ದಿನಕ್ಕೆ ಅಧಿಕವಾಗುತ್ತ ಬಂದವು. ಇದರಿಂದ ಅವರು ಪಾಂಡವರೈವರಿಗೂ ನಾನಾ ವಿಧವಾದ ಹಿಂಸೆಗಳನ್ನು ಕೊಟ್ಟು ಪೀಡಿಸುತ್ತ ಬಂದರು.

ಇದೆಲ್ಲವನ್ನೂ ನೋಡಿದ ಉಭಯ ಕುಲಪಿತಾಮಹನಾದ ಭೀಷ್ಮನು ಅವರೆಲ್ಲರಿಗೂ ಬುದ್ಧಿಹೇಳಿ ಕಡೆಗೆ ಉಭಯ ಪಕ್ಷಗಳಿಗೂ ಅನುಕೂಲ ವಾದ ಒಂದು ಒಪ್ಪಂದವನ್ನು ಮಾಡಿದನು. ಅದರಂತೆ ಪಾಂಡವರು ಇಂದ್ರಪ್ರಸ್ಥಪುರದಲ್ಲಿಯೂ, ಕೌರವರು ಹಸ್ತಿನಾವತಿಯಲ್ಲಿಯೂ ವಾಸ ಮಾಡಿಕೊಂಡು, ತಮ್ಮ ತಮ್ಮ ರಾಜ್ಯಗಳನ್ನು ಪರಿಪಾಲಿಸುತ್ತ ಸುಖ ದಿಂದಿದ್ದರು. ಹೀಗಿರುವಲ್ಲಿ ದುರ್ಯೋಧನನು, ಕ್ಷತ್ರಿಯರ ಪದ್ಧತಿ ಯೆಂಬ ವ್ಯಾಜದಿಂದ, ತನ್ನ ಮಾವನಾದ ಶಕುನಿಯ ಮೂಲಕ ಮಾಯಾ ದ್ಯೂತವೊಂದನ್ನೇರ್ಪಡಿಸಿ, ವಿದುರನ ಮೂಲಕ ಧರ್ಮರಾಜಾದಿ ಪಾಂಡ ವರನ್ನು ಹಸ್ತಿನಾವತಿಗೆ ಬರಮಾಡಿದನು. ದುರ್ಯೋಧನನೂ ಧರ್ಮ

ರಾಜನೂ ಪಗಡೆಯಾಟದ ದ್ಯೂತವನ್ನಾಡಿದರು. ದುರ್ಯೋಧನನ ಪಕ್ಷವಾಗಿ ಆಡಿದ ಶಕುನಿಯು ಮಾಯಾದ್ಯೂತದಲ್ಲಿ ಧರ್ಮರಾಜನನ್ನು ಸೋಲಿಸಿ, ಆತನ ರಾಜ್ಯ ಕೋಶಾದಿ ಸಕಲೈಶ್ವರ್ಯವನ್ನು ಮಾತ್ರವೇ ಅಲ್ಲದೆ, ಧರ್ಮರಾಜನು ಪಣವಾಗಿಟ್ಟ ಆತನ ಸೋದರರನ್ನೂ ಆತನನ್ನೂ ಪತ್ನಿಯಾದ ಪಾಂಚಾಲಿಯನ್ನೂ ಸಹ, ದುರ್ಯೋಧನನಿಗೆ ಗೆದ್ದು ಕೊಟ್ಟನು. ಕಟ್ಟಕಡೆಗೆ ದ್ರೌಪದಿಯ ಪ್ರಾರ್ಥನೆಯಂತೆ ಧೃತರಾಷ್ಟ್ರನು ಪಾಂಡವರಿಗೆ ಸ್ವಾತಂತ್ರ್ಯವನ್ನೂ ಅವರ ರಾಜ್ಯಕೋಶಾದಿಗಳನ್ನೂ ಹಿಂದಕ್ಕೆ ಕೊಟ್ಟುಕಳುಹಿಸಿಬಿಟ್ಟನು. ಆಗ ದುರ್ಯೋಧನನು ದುಃಖಿತನಾಗಿ ತಂದೆಯ ಬಳಿಗೆ ಬಂದು ಪಾಂಡವರನ್ನು ಪುನರ್ದ್ಯೂತಕ್ಕೆ ಬರಮಾಡಬೇಕೆಂದು ಗೋಳಾಡಿ ಪ್ರೇರಿಸಿದನು. ಅದರಂತೆ, ಮಗನ ಮಾತಿಗೆ ಮನ ಮರುಗಿ ಧೃತರಾಷ್ಟ್ರನು ಪುನಃ ಪಾಂಡವರನ್ನು ಬರಮಾಡಿದನು. ನೂತನವಾಗಿ ಏರ್ಪಟ್ಟಿದ್ದ ನಿಬಂಧನೆಯಂತೆ ಪುನಃ ಪಗಡೆಯಾಟವನ್ನಾಡಲು, ಶಕುನಿಯು ಮೋಸದಿಂದ ಪಾಂಡವರನ್ನು ಸೋಲಿಸಿಬಿಟ್ಟನು. ಆಗ ಪಂಚಪಾಂಡವರೂ ಪತ್ನಿಯೊಡಗೂಡಿ ಹನ್ನೆರಡು ವರ್ಷಗಳ ಕಾಲ ಅರಣ್ಯವಾಸವನ್ನೂ, ಒಂದು ವರ್ಷಕಾಲ ಯಾರಿಗೂ ಗೋಚರವಾಗದಂತೆ ಅಜ್ಞಾತವಾಸವನ್ನೂ ಮಾಡಿ ಹಿಂದಿರುಗಿ ಬಂದರೆ, ಅನಂತರ ಅವರಿಗೆ ಮತ್ತೆ ಅವರ ರಾಜ್ಯ ಕೋಶಾದಿಗಳೆಲ್ಲವನ್ನೂ ದುರ್ಯೋಧನನು ಹಿಂದಕ್ಕೆ ಕೊಟ್ಟುಬಿಡಬೇಕೆಂದು ನಿಶ್ಚಿತವಾಯಿತು. ಇದಕ್ಕೆ ಉಭಯ ಪಕ್ಷದವರೂ ಒಪ್ಪಿದರು. ಇದರಿಂದ ಪಾಂಡವರು ತತ್ಕಾಲಕ್ಕೆ ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಕಾಡಿಗೆ ಹೊರಡಬೇಕಾಯಿತು.

ಹೀಗೆ ಹದಿಮೂರು ವರ್ಷಗಳಕಾಲ ಅರಣ್ಯವಾಸ ಅಜ್ಞಾತವಾಸಗಳನ್ನು ಬಹುಕಷ್ಟದಿಂದ ಅನುಭವಿಸಿ ಹಿಂದಿರುಗಿದ ಪಾಂಡವರಿಗೆ ದುರ್ಯೋಧನನು ಅವರ ಸ್ವತ್ತಿನಲ್ಲಿ ಲೇಶವನ್ನಾದರೂ ಹಿಂದಕ್ಕೆ ಕೊಡಲು ಒಪ್ಪಲಿಲ್ಲ. ಆದಕಾರಣ ಕೌರವ ಪಾಂಡವರಿಗೆ ಕುರುಕ್ಷೇತ್ರದಲ್ಲಿ ಮಹಾಯುದ್ಧವು ನಡೆಯಿತು. ಪಾಂಡವರು, ದುರ್ಯೋಧನಾದಿ ಕೌರವರೆಲ್ಲರನ್ನೂ ವಧಿಸಿ ಕುರುಕುಲದ ಸಾಮ್ರಾಜ್ಯವನ್ನು ಗೆದ್ದುಕೊಂಡರು.

ಇದಾದನಂತರ ಪಾಂಡವರು ಮೂವತ್ತಾರು ವರ್ಷಗಳಕಾಲ ಹಸ್ತಿನಾವತಿಯಲ್ಲಿ ರಾಜ್ಯಭಾರಮಾಡಿದರು. ಅನಂತರ ಅರ್ಜುನನ

ಮೊಮ್ಮಗನಾದ (ಅಭಿಮನ್ಯುವಿನ ಪುತ್ರ) ಪರೀಕ್ಷಿದ್ರಾಜನಿಗೆ ಹಸ್ತಿನಾಪುರದ ರಾಜಪಟ್ಟವನ್ನು ಕಟ್ಟಿ, ಪಾಂಡವರೂ ಪಾಂಚಾಲಿಯೂ ನಾರುಡೆಗಳನ್ನುಟ್ಟು ವಾನಪ್ರಸ್ಥಾಶ್ರಮಕ್ಕೆ ಹೊರಟುಹೋದರು.

ಈ ಮೇಲೆ ಕಂಡ ಸಾರಾಂಶವುಳ್ಳ ಮಹಾಭಾರತ ಕಥೆಯನ್ನು, ಅನೇಕ ಉಪಕಥೆಗಳ ಸಹಿತವಾಗಿ, ಸೂತಮುನಿಯು ಶೌನಕಾದಿ ಮಹರ್ಷಿಗಳಿಗೆ, ಹೃದಯಂಗಮವಾಗಿ ವಿಸ್ತರಿಸಿ ಹೇಳಿ ಅವರನ್ನು ಸಂತೋಷಪಡಿಸಿದನು.

ಈ ಅದ್ಭುತ ಗ್ರಂಥದಲ್ಲಿ ಅನೇಕ ಉಪಕಥೆಗಳೂ ಧರ್ಮನೀತಿಭರಿತ ಸದುಪದೇಶಗಳೂ ಅಡಗಿ, ಇದು ಲೆಕ್ಕವಿಲ್ಲದಷ್ಟು ಮುತ್ತುರತ್ನಗಳನ್ನೊಳಗೊಂಡ ಮಹಾಸಾಗರದಂತೆ ಇದೆ. ಈ ಮಹಾಭಾರತವೂ ಶ್ರೀಮದ್ರಾಮಾಯಣವೂ ನಮ್ಮ ಭರತಖಂಡದ ಧರ್ಮಕ್ಕೂ ಸಂಸ್ಕೃತಿಗೂ ಸಜೀವಗಳಾದ ಚಿಲುಮೆಗಳಂತಿವೆ.

## ಅಧ್ಯಾಯ ೨

## ದೇವವ್ರತ

ಪೂರ್ವಕಾಲದಲ್ಲಿ ಭರತವಂಶದ ಅರಸನಾದ ಪ್ರತೀಪ ಮಹಾರಾಜನು ತನ್ನ ಪುತ್ರನಾದ ಶಂತನುವನ್ನು ಕುರಿತು, ಒಂದಾನೊಂದು ದಿನ, "ಸುಕುಮಾರಾ, ಗಂಗಾನದಿಯ ತೀರದಲ್ಲಿ ನಾನೊಬ್ಬ ಪರಮ ಸೌಂದರ್ಯವತಿಯಾದ ಕನ್ಯೆಯನ್ನು ನೋಡಿ, ಆಕೆಯನ್ನು ಕುರಿತು, 'ಎಲೌ, ಸುಂದರೀ, ನೀನು ನನ್ನ ಕುಮಾರನಿಗೆ ಭಾರ್ಯೆಯಾಗಬೇಕು,' ಎಂದು ಹೇಳಲು, ಆಕೆಯು 'ಹಾಗೆಯೇ ಆಗಲಿ' ಎಂದು ಸಂಮತಿಸಿದಳು. ಅದರಿಂದ, ನೀನು, ನಿನಗೆ ಗೋಚರವಾಗುವ ಆಕೆಯ ಕುಲಗೋತ್ರಗಳೊಂದನ್ನೂ ವಿಚಾರಿಸದೆ, ಆಕೆಯನ್ನು ಪತ್ನಿಯಾಗಿ ಪರಿಗ್ರಹಿಸಿ, ಆಕೆಯ ಇಷ್ಟದಂತೆ ನಡೆಯಬೇಕು." ಎಂಬದಾಗಿ ಹೇಳಿ, ರಾಜ್ಯಭಾರವನ್ನು ಪುತ್ರನಿಗೆ ವಹಿಸಿ ತಾನು ತಪೋವನವನ್ನು ಕುರಿತು ಪ್ರಯಾಣ ಮಾಡಿದನು. ಅನಂತರ ರಾಜನಾದ ಶಂತನು ಒಂದಾನೊಂದುದಿನ ಬೇಟೆಗಾಗಿ ಅರಣ್ಯಕ್ಕೆ ಹೋಗಿ, ಗಂಗಾನದೀತೀರದಲ್ಲಿ ಸಂಚರಿಸುತ್ತಿರುವಾಗ, ಆ ನದಿಯ ಮರಳಿನ ಮೇಲೆ ಅದ್ವಿತೀಯ

ಸೌಂದರ್ಯವತಿಯಾದ ಒಬ್ಬ ಕನ್ಯೆಯು ಗೋಚರವಾದಳು. ಅವಳ ರೂಪದಿಂದ ಭ್ರಾಂತನಾದ ಶಂತನುರಾಜನು ಆಕೆಯನ್ನೇ ಎವೆಯಿಕ್ಕದೆ ನೋಡುತ್ತಿರಲು, ಆ ಸುಂದರಿಯು ಇವನ ಸಮೀಪಕ್ಕೇ ಬಂದಳು. ಆಗ ರಾಜನಿಗೆ ತಂದೆಯ ಮಾತು ಜ್ಞಾಪಕಕ್ಕೆ ಬಂತು. ಆ ಲಾವಣ್ಯವತಿಯಲ್ಲಿ ವಿಶೇಷ ಪ್ರೇಮ ಮೋಹಗಳುಂಟಾದವು. ಅದರಿಂದ ಆಕೆಯನ್ನು ನೋಡಿ, "ಎಲೌ, ರಮಣೀಮಣೀ, ನೀನು ಯಾರಾದರೂ ಸರಿಯೇ, ನನಗೆ ಭಾರ್ಯೆಯಾಗಬೇಕು. ನನ್ನ ರಾಜ್ಯವೂ, ಧನವೂ, ನನ್ನ ಜೀವವೂ, ನನ್ನ ಸರ್ವಸ್ವವೂ ನಿನಗೇ ಸೇರಿದವುಗಳು. ನನ್ನ ಪ್ರಾರ್ಥನೆಯನ್ನು ನೆರವೇರಿಸು," ಎಂಬದಾಗಿ ವಿನಯದಿಂದ ಕೇಳಿಕೊಂಡು ಒತ್ತಾಯಪಡಿಸಿದನು. ಅದಕ್ಕೆ ಆ ತರುಣಿಯು, "ರಾಜೇಂದ್ರಾ, ನಾನು, ನಿನ್ನ ಇಷ್ಟದಂತೆ, ನಿನ್ನ ರಾಜ್ಞಿಯಾಗುವೆನು. ಆದರೆ, ನೀನಾಗಲಿ, ನಿನ್ನವರಾಗಲಿ, ಇತರರಾಗಲಿ ನನ್ನನ್ನು ಕುರಿತು, 'ನೀನು ಯಾರು? ಯಾವ ಕುಲದವಳು?' ಮೊದಲಾಗಿ ನನ್ನ ವೃತ್ತಾಂತವೇನನ್ನೂ ಕೇಳಲಾಗದು. ನಾನು ಮಾಡುವ ಕೆಲಸವು ಒಳ್ಳೆಯದಾಗಲಿ, ಕೆಟ್ಟದಾಗಲಿ, ಅದಕ್ಕೆ ನೀನಾಗಲಿ, ಇತರರಾಗಲಿ ಅಡ್ಡಿ ಬರಲೂಕೂಡದು, ಆಕ್ಷೇಪಿಸಲೂಕೂಡದು. ನೀನು ನನ್ನ ಮೇಲೆ ಯಾವ ಕಾರಣದಿಂದಲೂ ಕೋಪಿಸಿಕೊಳ್ಳಲೂ ಕೂಡದು, ಅಪ್ರಿಯವಾದ ಮಾತುಗಳನ್ನಾಡಕೂಡದು. ಈ ಯಾವ ನಿಬಂಧನೆಯನ್ನು ನೀನು ಉಲ್ಲಂಘಿಸಿ ನಡೆದರೂ, ಆಕ್ಷಣವೇ ನಾನು ನಿನ್ನನ್ನು ಅಗಲಿ ಹೊರಟು ಹೋಗುವೆನು. ಇದಕ್ಕೆ ನಿನಗೆ ಸಂಮತಿಯುಂಟೇ?" ಎಂದು ಕೇಳಿದಳು. ಶಂತನುರಾಜನು ಪ್ರತಿಹೇಳದೆ, "ಹಾಗೆಯೇ ಆಗಲಿ, ನಿನ್ನ ನಿಬಂಧನೆಗಳೆಲ್ಲಕ್ಕೂ ನನ್ನ ಸಂಮತಿಯುಂಟು," ಎಂದು ಭಾಷೆ ಕೊಟ್ಟನು. ಅನಂತರ ಉಭಯರೂ ಒಪ್ಪಿಕೆಯಿಂದ ಪತಿಪತ್ನಿಯರಾದರು. ಆಕೆಯೇ **ಗಂಗಾದೇವಿಯು**. ಈ ಗಂಗಾದೇವಿಯು, ಪತಿಯಲ್ಲಿ ವಿನಯ ವಿಶ್ವಾಸಗಳಿಂದಲೂ, ಸೌಶೀಲ್ಯದಿಂದಲೂ ಆತನ ಮನಸ್ಸನ್ನಾಕರ್ಷಿಸಿ ಆತನಿಗೆ ಅಚ್ಚುಮೆಚ್ಚಾಗಿದ್ದಳು. ವಿಲಾಸ ವಿನೋದಗಳಿಂದ ಆನಂದಲೋಲರಾಗಿದ್ದ ಇವರಿಗೆ ಕಾಲಗತಿಯೇ ಗೋಚರವಿಲ್ಲದಂತಾಯಿತು. ಹೀಗಿರಲು ಕೆಲವು ದಿನಗಳ ಮೇಲೆ ಗಂಗಾದೇವಿಯು ಗರ್ಭಿಣಿಯಾಗಿ ತೇಜಃ

ಪುಂಜವಾದ ಗಂಡುಮಗುವನ್ನು ಹೆತ್ತಳು. ಆದರೆ, ಅತಿಸುಂದರವಾಗಿದ್ದ ಆ ಮಗುವನ್ನು ಹೆತ್ತಕೂಡಲೇ ಆಕೆಯು ತೆಗೆದುಕೊಂಡು ಹೋಗಿ ಗಂಗಾಪ್ರವಾಹದಲ್ಲಿ ಎಸೆದು, ನಗುನಗುತ್ತ ಹಿಂದಿರುಗಿ ಅರಮನೆಗೆ ಬಂದಳು. ರಾಜನು ಆಕೆಯು ಮಾಡಿದುದಕ್ಕೆ ಪ್ರತಿಮಾತನಾಡದೆ ಸುಮ್ಮನಿರಬೇಕೆಂಬ ನಿಬಂಧನೆಗೆ ಸಿಕ್ಕಿಬಿದ್ದಿದ್ದ ಕಾರಣ, ತನ್ನ ಮನಸ್ಸಿನ ವ್ಯಸನವನ್ನೂ ಅಸಮಾಧಾನವನ್ನೂ ತನ್ನಲ್ಲೇ ಅಡಗಿಸಿಕೊಂಡು ಸುಮ್ಮನಿರಬೇಕಾಯಿತು. ಹೀಗೆ ಕಾಲಕ್ರಮದಲ್ಲಿ ಆಕೆ ಇನ್ನೂ ಆರು ಗಂಡು ಮಕ್ಕಳನ್ನು ಹೆತ್ತು ಅವುಗಳನ್ನೂ ಸಹ ಗಂಗೆಯಲ್ಲೆಸೆದು, ಸಂತೋಷದಿಂದ ಮನೆಗೆ ಬಂದಳು

ಹೀಗೆ ಏಳು ಮಂದಿ ಮಕ್ಕಳನ್ನೂ ಕಳೆದುಕೊಂಡು ರಾಜನು ವ್ಯಥೆಪಡುತ್ತಿರಲು, ಗಂಗಾದೇವಿಯು ಇನ್ನೂ ಒಂದು ಗಂಡು ಮಗುವನ್ನೇ ಹೆತ್ತಳು. ಅನಂತರ ಎಂದಿನಂತೆ ಅದನ್ನೂ ಗಂಗಾಪ್ರವಾಹದ ಪಾಲು ಮಾಡಲು ಆಕೆ ಪ್ರಯತ್ನಿಸುತ್ತಿದ್ದುದನ್ನು ನೋಡಿ, ಶಂತನುರಾಜನು, ಮನಸ್ಸು ತಡೆಯದೆ, "ಎಲೌ, ನಿಲ್ಲು! ನಿಲ್ಲು! ಪದೇ ಪದೇ ಏತಕ್ಕೆ ಇಂತಹ ಪಾಪಕಾರ್ಯವನ್ನಾಚರಿಸುವೆ? ನೀನೇ ಹೆತ್ತ, ನಿರಪರಾಧಿಗಳಾದ ಮಕ್ಕಳನ್ನು ಏತಕ್ಕೆ ಹೀಗೆ ಕೊಲ್ಲುವೆ? ಇಂತಹ ನೀಚ ಕೃತ್ಯವು ನಿನಗೆ ತಕ್ಕುದಲ್ಲ," ಎಂದು ಆಕ್ಷೇಪಿಸಿ ತಡೆದನು.

ಆ ಕೂಡಲೇ ಆಕೆಯು, "ಮಹಾರಾಜಾ, ನಿನ್ನ ಪ್ರತಿಜ್ಞೆಯನ್ನು ಸ್ಮರಿಸಿಕೋ! ಈ ನಿನ್ನ ಮಾತಿನಿಂದ ನಿನಗೆ ಪತ್ನಿಗಿಂತಲೂ ಪುತ್ರನಲ್ಲಿಯೇ ಹೆಚ್ಚು ಪ್ರೇಮವೆಂಬುದು ಸ್ಪಷ್ಟವಾಯಿತು. ಇನ್ನು ನಾನು ನಿನ್ನಲ್ಲಿರತಕ್ಕವಳಲ್ಲ; ಹೊರಟುಹೋಗುವೆನು. ನಿನಗೆ ಪ್ರಿಯನಾದ ಈ ಮಗನನ್ನು ನಾನು ಕೊಲ್ಲುವುದಿಲ್ಲ. ನಾನು ಯಾರೆಂಬುದನ್ನು ಈಗ ನಿನಗೆ ತಿಳಿಸುವೆನು. ಸುರಮುನಿಗಳಿಂದ ಪೂಜಿತಳಾದ ಗಂಗಾನದಿಯ ಅಧಿದೇವತೆಯೇ ನಾನು. ವಸಿಷ್ಠರ ಶಾಪದಿಂದ ಭೂಲೋಕದಲ್ಲಿ ಜನ್ಮವೆತ್ತಬೇಕಾಗಿದ್ದ ಅಷ್ಟವಸುಗಳು, ನಾನೇ ತಮಗೆ ತಾಯಿಯಾಗಬೇಕೆಂದು ಹಿಂದೆ ನನ್ನನ್ನು ಕೇಳಿಕೊಂಡಿದ್ದ ಮೇರೆಗೆ ನಾನು ಒಪ್ಪಿದ್ದೆನು. ಅದರಂತೆ ನಿನ್ನ ಮೂಲಕ ಅವರನ್ನು ಹಡೆದೆನು. ಅಲ್ಲದೆ, ಕೂಡಲೇ ಅವರ ಮನುಷ್ಯ ಜನ್ಮವನ್ನು ನಿವಾರಣೆಮಾಡಲು ಆ ಮಕ್ಕಳನ್ನು

ಪ್ರವಾಹದಲ್ಲಿ ಎಸೆದೆನು. ಈಗ ಜನಿಸಿರುವ ಪುತ್ರನು ಆ ಅಷ್ಟವಸುಗಳಲ್ಲಿ ಎಂಟನೆಯವನು. ಇವನನ್ನು ನಾನು ಕೊಲ್ಲುವುದಿಲ್ಲ. ಇವನನ್ನು ಸ್ವಲ್ಪ ಕಾಲ ನಾನು ಸಾಕಿ, ವಿದ್ಯಾಬುದ್ಧಿಗಳನ್ನು ಕಲಿಸಿ, ಅನಂತರ ನಿನ್ನ ಬಳಿಗೆ ಕರೆತಂದು ಒಪ್ಪಿಸುವೆನು. ದೇವಲೋಕದ ಅಷ್ಟವಸುಗಳು ಭೂಲೋಕದಲ್ಲಿ ತಮಗೆ ತಂದೆಯಾಗಲು ನೀನೇ ಯೋಗ್ಯನೆಂದು ಬಗೆದು, ನಿನ್ನಲ್ಲಿ ಜನಿಸಿದುದರಿಂದ ನೀನು ಪರಮ ಪುಣ್ಯಶಾಲಿಯು. ಇದರಿಂದ ನಿನಗೆ ಉತ್ತಮಲೋಕಗಳ ಪ್ರಾಪ್ತಿಯಾಗುವುದು. ಇನ್ನು ನಾನು ಹೊರಡುವೆನು," ಎಂಬದಾಗಿ ಹೇಳಿ, ಮಗುವಿನೊಡನೆ ಅಂತರ್ಧಾನವಾದಳು. ಆ ಅಷ್ಟವಸುಗಳಲ್ಲಿ ಒಬ್ಬನಾದ ಮಗುವೇ **ದೇವವ್ರತನು**. ಮುಂದೆ, ಭಯಂಕರ ಪ್ರತಿಜ್ಞೆಮಾಡಿದ ಈತನಿಗೆ **ಭೀಷ್ಮ**ನೆಂದು ಹೆಸರಾಯಿತು.

## ಅಷ್ಟವಸುಗಳಿಗೆ ವಸಿಷ್ಠರ ಶಾಪ ಬಂದುದು

ಒಂದಾನೊಂದು ದಿನ ದೇವಲೋಕದ ಅಷ್ಟವಸುಗಳು ತಮ್ಮ ಪತ್ನಿಯರೊಡಗೂಡಿ, ವಸಿಷ್ಠಮಹರ್ಷಿಯ ಆಶ್ರಮವಿದ್ದ ಬೆಟ್ಟದ ತಪ್ಪಲಿಗೆ ಬಂದು, ಅಲ್ಲಿ ಆ ವನದ ಅಂದವನ್ನು ನೋಡುತ್ತ ವಿಹಾರ ಮಾಡುತ್ತಿದ್ದರು. ಅಲ್ಲಿ ಕಾಮಧೇನುವಿನ ಪುತ್ರಿಯಾದ ನಂದಿನೀ ಧೇನುವು ಮೇಯುತ್ತಿತ್ತು. ಈ ನಂದಿನೀಧೇನುವು ವಸಿಷ್ಠರದು. ವಸುಗಳಲ್ಲಿ ಒಬ್ಬಾತನು ಆ ಧೇನುವಿನ ದಿವ್ಯ ಮಂಗಳಾಕಾರವನ್ನು ನೋಡಿ ಆಶ್ಚರ್ಯಪಟ್ಟು, ಅದನ್ನು ತನ್ನ ಜೊತೆಯವರೆಲ್ಲರಿಗೂ ತೋರಿಸಿ ಸಂತೋಷಪಟ್ಟನು. ವಸುಗಳ ಪತ್ನಿಯರು ಅದನ್ನು ನೋಡಿ ಅದರ ಅಂದವನ್ನು ಕೊಂಡಾಡುತ್ತಿರುವಲ್ಲಿ, ಅವರಲ್ಲೊಬ್ಬಳು, ಈ ಹಸುವು ತನಗೆ ಬೇಕೆಂದು, ತನ್ನ ಗಂಡನಾದ **ಪ್ರಭಾಸ**ನೆಂಬ ವಸುವಿನೊಡನೆ ಹೇಳಿದಳು. ಅದಕ್ಕಾತನು, "ದೇವೀ, ಈ ತಪೋವನವು ಬ್ರಹ್ಮಮಾನಸ ಪುತ್ರರಾದ ವಸಿಷ್ಠಮಹರ್ಷಿಗಳದು. ಈ ಹಸುವು ಅವರಿಗೆ ಸೇರಿದುದು. ನಾವಿದನ್ನು ಬಯಸುವುದಾದರೆ ಆ ಮಹರ್ಷಿಗಳ ಆಗ್ರಹಕ್ಕೆ ಪಾತ್ರರಾಗುವೆವು. ಅಲ್ಲದೆ, ಇದರ ಹಾಲನ್ನು ಮನುಷ್ಯರು ಕುಡಿದರೆ ಚಿರಂಜೀವಿಗಳಾಗುವರು. ನಾವು ದೇವತೆಗಳಾದುದರಿಂದ ನಮಗೆ

ಮರಣವೇ ಇಲ್ಲದಿರುವುದು. ಹೀಗಿರುವಲ್ಲಿ ನಮಗೆ ಈ ಹಸುವಿನಿಂದೇನು ಪ್ರಯೋಜನ? ಆದರಿಂದ ಇದರ ಅಪೇಕ್ಷೆಯನ್ನು ಬಿಡು," ಎಂಬದಾಗಿ ಹೇಳುತ್ತ ಪತ್ನಿಯ ಅಭಿಲಾಷೆಯನ್ನು ನಿರಾಕರಿಸಿ, ಆಕೆಯನ್ನು ಸಮಾಧಾನಪಡಿಸಲು ಪ್ರಯತ್ನಿಸಿದನು. ಆದರೆ ಆ ತರುಣಿಯು ಒಪ್ಪದೆ, "ನಾಥಾ, ನಮಗದರಿಂದ ಪ್ರಯೋಜನವಿಲ್ಲದಿದ್ದರೆ ಹೋಗಲಿ! ಮನುಷ್ಯಲೋಕದಲ್ಲಿ ನನಗೆ ಪ್ರಿಯಳಾದ ಸಖಿಯೊಬ್ಬಳಿರುವಳು. ಅವಳಿಗಾಗಿ ನಾನಿದನ್ನು ಅಪೇಕ್ಷಿಸಿದೆನು. ಆದಕಾರಣ, ಹೊರಗೆ ಸಂಚಾರ ಹೋಗಿರುವ ವಸಿಷ್ಠಮುನಿವರ್ಯರು ಆಶ್ರಮಕ್ಕೆ ಹಿಂದಿರುಗಿ ಬರುವುದರೊಳಗಾಗಿ, ನಾವು ಈ ಹಸುವನ್ನು ಓಡಿಸಿಕೊಂಡು ಹೋಗಿ ಬಿಡೋಣ. ಈ ಕಾರ್ಯದಲ್ಲಿ ನೀನು ನನಗೆ ಸಹಾಯ ಮಾಡಲೇಬೇಕು. ಇದು ನನಗೆ ನಿನ್ನಿಂದಾಗಬೇಕಾದ ಅತ್ಯಂತ ಪ್ರಿಯವಾದ ಕಾರ್ಯ," ಎಂಬದಾಗಿ ಹೇಳುತ್ತ ಗಂಡನನ್ನು ಬಹಳವಾಗಿ ಒತ್ತಾಯಪಡಿಸಿದಳು. ಪತ್ನೀಪ್ರೇಮದಿಂದ ಪ್ರಭಾಸನು ಆಕೆಯ ಮಾತಿಗೊಪ್ಪಿಕೊಂಡನು. ಅನಂತರ ಅಲ್ಲಿದ್ದ ಇತರ ವಸುಗಳ ಸಹಾಯವನ್ನು ಪಡೆದು, ನಂದಿನೀ ಧೇನುವನ್ನು ಅದರ ಕರುವಿನೊಡನೆ ಅಟ್ಟಿಕೊಂಡು ಹೊರಟುಹೋದನು.

ಸಂಚಾರ ಹೋಗಿದ್ದ ವಸಿಷ್ಠಮಹರ್ಷಿಯು ಆಶ್ರಮಕ್ಕೆ ಬಂದು ನೋಡಲು, ನಂದಿನಿಯೂ ಇರಲಿಲ್ಲ, ಕರುವೂ ಇರಲಿಲ್ಲ. ಅರಣ್ಯವೆಲ್ಲವನ್ನೂ ಹುಡುಕಿದರೂ ಅವು ದೊರೆಯಲೂ ಇಲ್ಲ. ಅನಂತರ ಜ್ಞಾನದೃಷ್ಟಿಯಿಂದ ನೋಡಲು, ಅವುಗಳನ್ನು ಪ್ರಭಾಸನು ಇತರ ವಸುಗಳ ಸಹಾಯದಿಂದ ಅಪಹರಿಸಿಕೊಂಡು ಹೋಗಿರುವುದಾಗಿ ಗೋಚರವಾಯಿತು. ಆದರಿಂದ, "ಅಪರಾಧಿಗಳಾದ ಆ ಅಷ್ಟವಸುಗಳೂ ಭೂಲೋಕದಲ್ಲಿ ಹುಟ್ಟಲಿ" ಎಂಬದಾಗಿ ವಸಿಷ್ಠನು ಅವರನ್ನು ಶಪಿಸಿದನು. ಈ ರೀತಿಯಾಗಿ ವಸಿಷ್ಠಮಹರ್ಷಿಯು ತಮ್ಮನ್ನು ಶಪಿಸಿದ ವಿಚಾರವು ವಸುಗಳಿಗೆ ತಿಳಿಯಿತು. ಆಗ ಅವರು ಆ ಮುನಿಯಾಶ್ರಮಕ್ಕೆ ಓಡಿಬಂದು, ಆತನಲ್ಲಿ ಕ್ಷಮೆಯನ್ನು ಬೇಡಿಕೊಂಡರು. ಅದಕ್ಕೆ ಆ ಮುನಿವರ್ಯನು, ಅವರನ್ನು ಕುರಿತು, "ವಸುಗಳಿರಾ, ಉಚ್ಚರಿಸಿದ ನನ್ನ ಶಾಪವನ್ನು ಹಿಂದಿರುಗಿಸಲು ಸಾಧ್ಯವಿಲ್ಲ. ಆದರೂ, ನೀವು ಬಹಳವಾಗಿ ಕೇಳಿಕೊಳ್ಳುವಿರಾದುದರಿಂದ ಒಂದು ಸೌಲಭ್ಯವನ್ನು ಕಲ್ಪಿಸಿ

ಕೊಡಬಲ್ಲೆನು, ಏನೆಂದರೆ: ಧೇನುವನ್ನು ಅಪಹರಿಸಿದ ಪ್ರಭಾಸನು ದೀರ್ಘಕಾಲ ಭೂಲೋಕದಲ್ಲಿ ಕೀರ್ತಿವಂತನಾಗಿ ಬದುಕಲಿ. ಅವನಿಗೆ ಸಹಾಯಕರಾಗಿದ್ದ ನೀವುಗಳು ಏಳು ಮಂದಿಯೂ ಹುಟ್ಟಿದೊಡನೆಯೇ ಮಾನವ ಜನ್ಮಗಳಿಂದ ಬಿಡುಗಡೆ ಹೊಂದುವಿರಿ," ಎಂಬದಾಗಿ ಹೇಳಿದನು. ವಸುಗಳು, ತಮಗೆ ಇಷ್ಟುಮಟ್ಟಿನ ಅನುಕೂಲವಾದರೂ ದೊರೆಯಿತಲ್ಲ— ಎಂಬ ಸಂತೋಷದಿಂದ ಹಿಂದಿರುಗಿದರು. ಅನಂತರ ವಸಿಷ್ಠಮಹರ್ಷಿಯು, ತಾನು ವಸುಗಳಿಗೆ ಶಾಪಕೊಟ್ಟುದರಿಂದ ತನ್ನ ತಪಶ್ಶಕ್ತಿಯು ಸ್ವಲ್ಪಮಟ್ಟಿಗೆ ನಷ್ಟವಾಯಿತೆಂದರಿತು, ಅದನ್ನು ಹೆಚ್ಚಿಸಿ ಕೊಳ್ಳುವುದಕ್ಕಾಗಿ, ಇನ್ನೂ ಪ್ರಬಲ ತಪಸ್ಸನ್ನಾಚರಿಸಬೇಕಾಯಿತು.

ವಸಿಷ್ಠನ ಬಳಿಯಿಂದ ಹೊರಟ ಎಂಟು ಮಂದಿ ವಸುಗಳೂ ನೆಟ್ಟನೆ ಗಂಗಾದೇವಿಯ ಬಳಿಗೆ ಬಂದು, "ದೇವೀ, ಶಾಪಗ್ರಸ್ತ ರಾಗಿರುವ ನಮಗೆ ಭೂಲೋಕದಲ್ಲಿ ನೀನೇ ತಾಯಿಯಾಗಬೇಕು. ಅಲ್ಲದೆ, ನಮ್ಮಲ್ಲಿ ಪ್ರಭಾಸನೊಬ್ಬನನ್ನು ನಿನ್ನ ಪುತ್ರನನ್ನಾಗಿ ಉಳಿಸಿ ಕೊಂಡು ಮಿಕ್ಕ ಏಳು ಮಂದಿಯನ್ನೂ ಜನಿಸಿದ ಕೂಡಲೇ ನಿನ್ನ ಪ್ರವಾಹದಲ್ಲಿ ಎಸೆದುಬಿಟ್ಟು, ಅವರಿಗೆ ಮಾನವ ಜನ್ಮವನ್ನು ನಿವೃತ್ತಿ ಮಾಡಬೇಕು." ಎಂಬದಾಗಿ ಕೈಮುಗಿದು ವಿನಯದಿಂದ ಕೇಳಿಕೊಂಡರು. ಗಂಗಾದೇವಿಯು ಅವರ ಪ್ರಾರ್ಥನೆಗೆ ಒಪ್ಪಿ ತಾನು ಭೂಲೋಕದಲ್ಲಿ ಸ್ತ್ರೀಯಾಗಿ ಹುಟ್ಟಿ, ಶಂತನುಮಹಾರಾಜನ ರಾಣಿಯಾದಳು.

## ಶಂತನುರಾಜನಿಗೆ ಪುತ್ರನು ದೊರೆತುದು

ಗಂಗಾದೇವಿಯು ಪುತ್ರನನ್ನೆತ್ತಿಕೊಂಡು ತನ್ನನ್ನಗಲಿ ಹೋದ ಬಳಿಕ, ಶಂತನುರಾಜನು, ಅಂತಹ ಸುಂದರ ಪತ್ನಿಯನ್ನು ಕಳೆದುಕೊಂಡ ತಾನು ಮತ್ತೊಬ್ಬ ಸ್ತ್ರೀಯ ಸಹವಾಸವನ್ನೇ ಒಲ್ಲೆನೆಂದು, ವೈರಾಗ್ಯ ಶಾಲಿಯಾಗಿ, ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. ಒಂದಾನೊಂದು ದಿನ ಆತನು ಗಂಗಾನದಿಯ ತೀರಕ್ಕೆ ಹೋಗಿ ದ್ದಾಗ, ಅಸಾಧಾರಣ ರೂಪತೇಜಸ್ಸುಗಳಿಂದ ಕಂಗೊಳಿಸುತ್ತಿದ್ದ ಒಬ್ಬ ಬಾಲಕನು ತನ್ನ ಅಸ್ತ್ರಪ್ರಯೋಗದಿಂದ ಗಂಗಾಪ್ರವಾಹ ವನ್ನೇ ತಡೆಯುತ್ತಿದ್ದುದನ್ನು ಕಂಡು ಆಶ್ಚರ್ಯಚಕಿತನಾಗಿ ನೋಡುತ್ತ

ನಿಂತನು. ಆಗ ಪುತ್ರನಿಂದ ಆ ರೀತಿಯಾಗಿ ಆಟವನ್ನಾಡಿಸುತ್ತಿದ್ದ ಗಂಗಾದೇವಿಯು ಆ ಬಾಲಕನನ್ನು ಕರೆತಂದು ಶಂತನುರಾಜನ ಮುಂದೆ ನಿಲ್ಲಿಸಿ, "ಪ್ರಿಯ ಮಹಾರಾಜಾ, ನನ್ನಲ್ಲಿ ನೀನು ಪಡೆದ ಎಂಟನೆಯ ಮಗ ದೇವವ್ರತನೇ ಈ ಬಾಲಕನು. ಇವನು ಸಕಲ ಅಸ್ತ್ರಗಳನ್ನೂ ಬಲ್ಲನು. ವಸಿಷ್ಠಮಹರ್ಷಿಗಳಿಂದ ವೇದ ವೇದಾಂಗಗಳನ್ನೂ, ಶುಕ್ರಾಚಾರ್ಯರಿಂದ ಸಕಲ ಶಾಸ್ತ್ರಗಳನ್ನೂ ಕಲಿತಿರುವನು. ಇವನು ಸಮರಾಂಗಣದಲ್ಲಿ ಪರಶುರಾಮನಿಗೆ ಸಮಾನನಾದ ಮಹಾವೀರನು. ಅಲ್ಲದೆ, ಸಮಸ್ತ ರಾಜನೀತಿಗಳನ್ನೂ ಬಲ್ಲವನು. ಈ ನಿನ್ನ ಮಗನನ್ನು ಕರೆದುಕೊಂಡು ಹೋಗು," ಎಂಬದಾಗಿ ಹೇಳಿ, ಮಗನನ್ನಾಶೀರ್ವದಿಸಿ ರಾಜನಿಗೊಪ್ಪಿಸಿ, ತಾನು ಅಂತರ್ಧಾನವಾದಳು.

ಶಂತನು ಮಹಾರಾಜನು ತೇಜಸ್ವಿಯಾದ ತನ್ನ ಕುಮಾರನನ್ನು ಪ್ರೀತಿಯಿಂದಾಲಿಂಗಿಸಿ ಕರೆದುಕೊಂಡು ಹೋದನು. ಕೆಲವು ದಿನಗಳನಂತರ ಪ್ರಾಪ್ತವಯಸ್ಕನಾದ ದೇವವ್ರತನಿಗೆ ತಂದೆಯು ಯುವರಾಜ ಪಟ್ಟಾಭಿಷೇಕವನ್ನು ಮಾಡಿ, ತಾನು ರಾಜ್ಯದ ಆಡಳಿತಗಳ ಮೇಲ್ವಿಚಾರಣೆಯನ್ನು ನೋಡಿಕೊಂಡಿದ್ದನು. ಹೀಗೆ ನಾಲ್ಕು ವರ್ಷಗಳು ಕಳೆದವು.

## ಅಧ್ಯಾಯ ೩

## ಸತ್ಯವತೀ ಚರಿತ್ರೆ — ಭೀಷ್ಮ ಪ್ರತಿಜ್ಞೆ

ಒಂದಾನೊಂದು ದಿನ ಶಂತನುರಾಜನು ಯಮುನಾನದಿಯ ತೀರಕ್ಕೆ ಹೋಗಿದ್ದಾಗ, ಅಲ್ಲಿ, ತನ್ನ ಹೃದಯವನ್ನೇ ಆಕರ್ಷಿಸಿ ಅಪರಿಮಿತವಾದ ಆನಂದವನ್ನುಂಟುಮಾಡಿದ ಪರಿಮಳವೊಂದು ಆವರಿಸಿದ್ದಿತು. ಇದಕ್ಕೆ ಕಾರಣವೇನೆಂದು ರಾಜನು ತಿಳಿಯಲು ಪ್ರಯತ್ನಿಸಿದಾಗ, ಆ ವನದಲ್ಲಿ ಅಪ್ಸರೋಭಾಮಿನಿಯಂತೆ ಅತ್ಯಂತ ಸೌಂದರ್ಯ ಪರಿಶೋಭಿತಳಾದ ಕನ್ಯೆಯೊಬ್ಬಳು ಗೋಚರವಾದಳು. ಅವಳ ಶರೀರದ ಸುವಾಸನೆಯೇ ಆ ವನವೆಲ್ಲವನ್ನೂ ಆವರಿಸಿದ್ದ ಪರಿಮಳವು. ಅವಳನ್ನು ನೋಡಿದೊಡನೆಯೇ, ರಾಜನಿಗೆ ಗಂಗಾದೇವಿಯನ್ನಗಲಿದಂದಿನಿಂದ ಉಂಟಾಗಿದ್ದ ಮಹಾವೈರಾಗ್ಯವು ಮಾಯವೇ ಆಗಿಹೋಯಿತು. ಈ ಪರಿಮಳ ಪರಿಶೋಭಿತೆಯಾದ ಲಾವಣ್ಯಪುತ್ಥಳಿಯನ್ನು ಪತ್ನಿಯಾಗಿ ಹೊಂದ

ಬೇಕೆಂಬ ಕುತೂಹಲವು ಮೇರೆ ಮೀರಿತು. ಆಗ ರಾಜನು ಅವಳ ವೃತ್ತಾಂತವನ್ನು ವಿಚಾರಿಸಿ, ತನ್ನ ಇಚ್ಛೆಯನ್ನಾ ಸುಂದರಿಗೆ ತಿಳಿಸಲು ಅವಳು, "ರಾಜೇಂದ್ರಾ, ನನ್ನ ಹೆಸರು **ಸತ್ಯವತಿ,** ನಾನಾದರೋ ಬೆಸ್ತರ ಹುಡುಗಿ, ನೀನು ಮಹಾರಾಜನು; ನನ್ನ ತಂದೆಯು ಈ ಪ್ರಾಂತದ ಬೆಸ್ತರಿಗೆ ಮುಖಂಡನು. ಇಷ್ಟರ ಮೇಲೆ ನೀನು ನನಗಾಗಿ ಅಪೇಕ್ಷೆ ಪಡುವುದಾದರೆ, ನಮ್ಮ ತಂದೆಯೊಡನೆ ಮಾತನಾಡಿ ಆತನ ಅನುಮತಿಯನ್ನು ಪಡೆಯಬೇಕು," ಎಂದಳು. ಇಂಪಾದ ಅವಳ ಮಾತು, ಶಂತನುರಾಜನಿಗೆ ನ್ಯಾಯುವಾಗಿ ಕಂಡುದರಿಂದ, ಆತನು, ಅವಳ ತಂದೆಯನ್ನು ಕಂಡು, ತನ್ನ ಕುತೂಹಲವನ್ನವನಿಗೆ ತಿಳಿಸಿದನು. ಆಗ ಚತುರನಾದ ಆ ಬೆಸ್ತನು ರಾಜನನ್ನು ಕುರಿತು, "ಮಹಾರಾಜಾ, ಹೆಣ್ಣಾದ ಇವಳನ್ನು ಯಾವನಾದರೊಬ್ಬ ಪುರುಷನಿಗೆ ಕೊಟ್ಟೇತೀರ ಬೇಕು. ನೀನಾದರೋ ರಾಜ್ಯಾಧಿಪತಿಯು, ನಿನಗೆ ಹೆಣ್ಣನ್ನು ಕೊಡಲು ನಾನು ಒಪ್ಪುವೆನು. ಆದರೆ, ಮೊದಲು, ನೀನು ನನ್ನ ಮಾತನ್ನು ನಡೆಯಿಸಿಕೊಡುವೆನೆಂಬದಾಗಿ ನನಗೆ ಭಾಷೆಯನ್ನು ಕೊಡಬೇಕು," ಎಂದನು. ಅದಕ್ಕೆ ಶಂತನು ಮಹಾರಾಜನು, "ಅಯ್ಯಾ, ನೀನು ಕೇಳುವ ವಿಚಾರವು ನಾನು ನಡೆಯಿಸಿಕೊಡಲು ಸಾಧ್ಯವಾದರೆ, ಅವಶ್ಯವಾಗಿ ನಡೆಯಿಸಿಕೊಡುವೆನು. ವಿಚಾರವೇನು ?" ಎಂದನು. ಅದಕ್ಕೆ ಬೆಸ್ತರವನು, "ದೇವಾ, ಈ ನನ್ನ ಪುತ್ರಿಯನ್ನು ನೀನು ಮದುವೆ ಯಾದರೆ, ಅವಳ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೇ ನೀನು ರಾಜ್ಯವನ್ನು ಕೊಟ್ಟು ಪಟ್ಟಾಭಿಷೇಕ ಮಾಡಬೇಕು," ಎಂದು ತನ್ನ ನಿಬಂಧನೆ ಯನ್ನು ತಿಳಿಸಿದನು. ಇದನ್ನು ಕೇಳಿದ ರಾಜನ ಮನಸ್ಸಿಗೆ ಬಹಳ ಚಿಂತೆಯುಂಟಾಯಿತು. ತನ್ನ ಪ್ರಿಯ ಜ್ಯೇಷ್ಠಪತ್ನಿಯಾದ ಗಂಗಾ ದೇವಿಯ ಪುತ್ರನೂ, ವಂಶದ ಜ್ಯೇಷ್ಠ ಕುಮಾರನೂ ಆದ ದೇವವ್ರತನಿಗೆ ರಾಜ್ಯವನ್ನು ಕೊಡದೆ, ತಾನು ಕಾಮಾತುರನಾಗಿ ಮೋಹಿಸಿದ ಈ ಬೆಸ್ತರ ಹುಡುಗಿಯ ಉದರದಲ್ಲಿ ಜನಿಸುವ ಮಗನಿಗೆ ರಾಜ್ಯವನ್ನು ಕೊಡುವುದು ಯಾವ ಧರ್ಮ ? ಇದು ನ್ಯಾಯವಲ್ಲವೆಂಬದಾಗಿ ಧರ್ಮ ಸಂಕಟಕ್ಕೆ ಸಿಕ್ಕಿ, ಬೆಸ್ತನಿಗೆ ಯಾವ ಉತ್ತರವನ್ನೂ ಹೇಳದೆ, ವಿಫಲನಾಗಿ ವ್ಯಸನದಿಂದ ಅರಮನೆಗೆ ಬಂದುಬಿಟ್ಟನು.

ಆದರೂ ಸತ್ಯವತಿಯ ಬಿಂಬವು ಈತನ ಮನಸ್ಸಿನಿಂದ ಹೊರಗೆ ಹೋಗಲೇ ಇಲ್ಲ. ಅಂತಹ ಸುಂದರಿಯು ತನಗೆ ಸೇರಲಿಲ್ಲವಲ್ಲಾ" ಎಂಬ ವ್ಯಥೆಯು ರಾಜನ ಮನಸ್ಸಿನಲ್ಲಿ ಪ್ರಬಲವಾಗುತ್ತಿದ್ದರೂ, ಆತನು ಯಾರೊಡನೆಯೂ ತನ್ನ ಚಿಂತೆಯನ್ನು ತಿಳಿಸದೆಯೇ ಕಾಲವನ್ನು ನೂಕುತ್ತ, ದಿನದಿನಕ್ಕೆ ಕೃಶವಾಗುತ್ತ ಬಂದನು.

ತಂದೆಯು ಹೀಗೆ ಚಿಂತಾಮಗ್ನನಾಗಿಯೂ ಬಡವಾಗುತ್ತಲೂ ಇರುವುದನ್ನು ನೋಡಿದ ದೇವವ್ರತನು, ಒಂದಾನೊಂದು ದಿನ ಆತನನ್ನು ಕುರಿತು, "ತಂದೆಯೇ, ನಿನಗೆ ಯಾವ ಸುಖಕ್ಕೆ ಏನು ಕಡಿಮೆಯಾಗಿದೆ? ಏತಕ್ಕೆ ಹೀಗೆ ಚಿಂತಾಕುಲನಾಗಿರುವೆ? ನೀನು ದಿನದಿನಕ್ಕೆ ಹೀಗೆ ಬಡವಾಗಲು ಕಾರಣವೇನು? ನಿನ್ನ ದೇಹ ಮನಸ್ಸುಗಳನ್ನು ಶೋಷಿಸುತ್ತಿರುವ ಆ ಮಹಾವ್ಯಥೆ ಯಾವುದು? ದಯೆಯಿಟ್ಟು ತಿಳಿಸು," ಎಂಬದಾಗಿ ಕೇಳಿಕೊಂಡನು. ಅದಕ್ಕೆ ಶಂತನು ಮಹಾರಾಜನು ನಿಜಾಂಶವನ್ನು ಹೇಳಲು ತನಗೆ ಸಂಕೋಚವಾದರೂ, ವ್ಯಾಜಾಂತರದಿಂದ ಕಾರಣವನ್ನು ಹೇಳಲುದ್ದೇಶಿಸಿ, "ಮಗೂ, ನೀನು ಹೇಳಿದಂತೆ ನನ್ನನ್ನು ಚಿಂತಾವ್ಯಾಧಿಯು ಶೋಷಿಸುತ್ತಿರುವುದು ನಿಜ. ಆ ಚಿಂತೆಯೇನೆಂದರೆ: ಸಕಲ ವಿದ್ಯಾಪಾರಂಗತನಾಗಿರುವ ನೀನು, ನನಗೆ ಒಂದು ನೂರು ಮಂದಿ ಪುತ್ರರಂತೆ ಸಂತೋಷವನ್ನುಂಟುಮಾಡಿರುವೆ. ಆದರೆ ಭೂಲೋಕದ ಜೀವಿತವು ಕ್ಷಣಭಂಗುರವು. ನೀನಾದರೋ ಸದಾ ಸಮರ ಕಲಾಭಿಲಾಷಿಯಾಗಿರುವೆ. ರಾಜನಾದವನಿಗೆ ಅವನ ಜೀವಿತ ಕಾಲದಲ್ಲಿ ಯುದ್ಧವು ಒದಗಲೇ ಒದಗುವುದು. ಹೀಗಿರುವಲ್ಲಿ ವೀರಕ್ಷತ್ರಿಯನಾಗಿ ನೀನು ಸಮರಾಂಗಣಕ್ಕೆ ಹೊರಟು ನಿನಗೇನಾದರೂ ಅಪಾಯವೊದಗಿದರೆ, ಆಗ ನಮ್ಮ ವಂಶದ ಹೆಸರೇ ಅಳಿಸಿಹೋಗುವುದು. ಇದರಿಂದಲೇ ಶಾಸ್ತ್ರಜ್ಞರು, ಲೋಕದಲ್ಲಿ ಒಬ್ಬನೇ ಪುತ್ರನು ಇದ್ದರೂ ಇಲ್ಲದಂತೆಯೇ!" ಎಂಬದಾಗಿ ಹೇಳುವರು. ನಮ್ಮ ವಂಶಪಾರಂಪರ್ಯವು ಒಬ್ಬ ಪುತ್ರನ ಜೀವಿತದಲ್ಲಿಯೇ ನಿಂತಿದೆ. ಇದು ಉಚಿತವಾಗಿ ಕಾಣುವುದಿಲ್ಲ. ನಮ್ಮ ಸಂತತಿಯು ಬೆಳೆಯುತ್ತಿರಬೇಕೆಂಬುದೇ ನನ್ನ ವಿಶೇಷವಾದ ಬಯಕೆ. ಇದೇ ನನ್ನ ಚಿಂತೆಗೆ ಕಾರಣ," ಎಂದು ಮಾತ್ರವೇ ಹೇಳಿದನೇ ಹೊರತು, ಅಂಬಿಗನ ಪುತ್ರಿಯ ವಿಚಾರವನ್ನು ದೇವವ್ರತನಿಗೆ ತಿಳಿಸಲು ನಾಚಿಕೆಪಟ್ಟು ಸುಮ್ಮನಾದನು.

## ಭೀಷ್ಮ ಪ್ರತಿಜ್ಞೆ

ಬುದ್ಧಿಶಾಲಿಯಾದ ದೇವವ್ರತನಿಗೆ ತಂದೆಯ ಆಂತರ್ಯ ವಿಚಾರವು ಸ್ವಲ್ಪಮಟ್ಟಿಗೆ ಹೊಳೆಯಿತು. ಆಗ ಅವನು ಸಾರಥಿಯನ್ನು ಕರೆದು ಅಂತರಂಗದಲ್ಲಿ ವಿಚಾರಿಸಲು, ಯಮುನಾತೀರದಲ್ಲಿ ನಡೆದ ಬೆಸ್ತರ ಕನ್ಯೆಯ ವಿಷಯವಾದ ಕಥೆಯೆಲ್ಲವೂ ತಿಳಿದುಬಂತು. ಅನಂತರ ದೇವವ್ರತನು ತಾನೇ ಆ ಬೆಸ್ತರ ಮುಖಂಡನ ಬಳಿಗೆ ಹೋಗಿ, ಅವನ ಮಗಳಾದ ಸತ್ಯವತಿಯನ್ನು ತನ್ನ ತಂದೆಗೆ ಕೊಟ್ಟು ವಿವಾಹಮಾಡ ಬೇಕೆಂದು ಕೇಳಿಕೊಂಡನು.

ಅದಕ್ಕೆ ಅವನು, "ದೇವಾ, ನನ್ನ ಮಗಳು ಸೌಂದರ್ಯ ಲಕ್ಷಣ ಗಳಿಂದ ರಾಜಮಹಿಷಿಯಾಗಲು ಯೋಗ್ಯಳಾಗಿದ್ದಾಳೆ. ಆದರಿಂದ ಅವಳ ಉದರದಲ್ಲಿ ಜನಿಸುವ ಕುಮಾರನು ರಾಜನಾಗುವುದಾದರೆ ನಿಮ್ಮ ತಂದೆಯು ಅವಳನ್ನು ರಾಣಿಯನ್ನಾಗಿ ಪರಿಗ್ರಹಿಸಲು ಸಾಧ್ಯವು. ನೀನಾದರೋ ಅವರ ಜ್ಯೇಷ್ಠಪುತ್ರನಾಗಿ ರಾಜ್ಯಪಟ್ಟವನ್ನು ವಹಿಸ ತಕ್ಕವನಾಗಿರುವೆ. ಇದರಿಂದ ನನ್ನ ಸತ್ಯವತಿಯನ್ನು ನಿಮ್ಮ ತಂದೆಗೆ ಕೊಡಲು ಸಾಧ್ಯವಲ್ಲ; ಕ್ಷಮಿಸಬೇಕು," ಎಂದನು. ಇದನ್ನು ಕೇಳಿ, ತಂದೆಯ ಚಿಂತೆಯನ್ನು ನಿವಾರಿಸುವುದೇ ತನ್ನ ಮುಖ್ಯಕರ್ತವ್ಯವೆಂದೆಣಿಸಿ, ದೇವವ್ರತನು, "ಅಯ್ಯಾ ಅಂಬಿಗಾ, ನಿಮ್ಮ ಸತ್ಯವತಿಯ ಗರ್ಭದಲ್ಲಿ ಮುಂದೆ ಹುಟ್ಟುವ ಮಗನೇ ರಾಜನಾಗಲಿ. ನಾನು ಈ ರಾಜ್ಯದ ಪಟ್ಟವನ್ನು ಕಟ್ಟಿಕೊಳ್ಳುವುದಿಲ್ಲ. ಈ ನನ್ನ ಮಾತನ್ನು ನಂಬಿ ಇನ್ನಾ ದರೂ ಸಂಮತಿಸಿ, ನಮ್ಮ ತಂದೆಗೆ ನಿಮ್ಮ ಸತ್ಯವತಿಯನ್ನು ಕೊಟ್ಟು ವಿವಾಹಮಾಡು," ಎಂದನು.

ಅದಕ್ಕೆ ಆ ಅಂಬಿಗನು, "ದೇವವ್ರತಕುಮಾರಾ, ಭರತವಂಶದಲ್ಲಿ ಉದಯಿಸಿದ ಸತ್ಪುತ್ರನು ನೀನು. ಈ ರೀತಿಯಾಗಿ, ಕೈಗೆ ಬಂದಿದ್ದ ರಾಜ್ಯ ಲಕ್ಷ್ಮಿಯನ್ನು ತಂದೆಯ ಹಿತಕ್ಕಾಗಿ ಬಿಟ್ಟ ಧೀರನೆಂದರೆ ನೀನೇ. ನಿನ್ನ ಮಾತಿನಲ್ಲಿ ನನಗೆ ಸಂಪೂರ್ಣವಾದ ನಂಬಿಕೆಯಿದೆ. ಆದರೆ, ಮುಂದೆ ನಿನಗೆ ಉದಿಸುವ ಮಹಾವೀರರಾದ ನಿನ್ನ ಪುತ್ರರೂ ನಿನ್ನಂ ತೆಯೇ ರಾಜ್ಯಭಾರವನ್ನಪೇಕ್ಷಿಸದಿರುವರೇ? ಅವರು, ನೀನು ಮಾಡಿರುವ ಕಾರ್ಯಕ್ಕೆ ಸಂಮತಿಸಿ, ರಾಜ್ಯಹೀನರಾಗಿರಲು ಒಪ್ಪುವರೆಂದು ನಾನು

ಹೇಗೆ ತಾನೇ ನಂಬಲಾದೀತು? ಒಂದುವೇಳೆ ನಿನ್ನ ಜ್ಯೇಷ್ಠಪುತ್ರನು, ನಿಮ್ಮ ತಂದೆಯ ಸಿಂಹಾಸನವನ್ನು, ತಾನೇ ಏರಬೇಕೆಂದು ಪ್ರಯತ್ನಿಸಿದರೆ, ಆಗ ನಿನ್ನ ಮಾತಿನ ಬೆಲೆಯೇನಾಗುವುದು? ಸತ್ಯವತಿಯ ಪುತ್ರನ ಸ್ಥಿತಿಯೇನಾಗುವುದು? ಇದೆಲ್ಲವೂ ನಾನು ಆಲೋಚಿಸಬೇಕಾದ ವಿಷಯವಲ್ಲವೇ?" ಎಂದು ಕೇಳಿದನು.

ನ್ಯಾಯಬದ್ಧವಾಗಿದ್ದ ಅಂಬಿಗನ ಮಾತನ್ನು ಕೇಳಿದ ದೇವವ್ರತನು, ಹೇಗಾದರೂ ತಂದೆಯ ಇಷ್ಟಾರ್ಥವನ್ನು ಪೂರ್ತಿಗೊಳಿಸುವುದೇ ತನ್ನ ಮುಖ್ಯ ಕರ್ತವ್ಯವೆಂದಾಲೋಚಿಸಿ, ಆಗಲೇ, ಅನಿರೀಕ್ಷಿತವಾದ ಪ್ರತಿಜ್ಞೆಯೊಂದನ್ನು ಮಾಡಿದನು. "ನಾನು ವಿವಾಹಮಾಡಿಕೊಂಡರಲ್ಲವೇ ನನಗೆ ಪುತ್ರರುದಿಸಿ ಮುಂದೆ ನನ್ನ ವಾಗ್ದಾನಭಂಗವಾದೀತೆಂಬ ಸಂದೇಹವು? ಆದರಿಂದ, ನಾನು ನನ್ನ ಜೀವಿತಕಾಲದಲ್ಲಿ ಮದುವೆಯನ್ನೇ ಮಾಡಿಕೊಳ್ಳದೆ, ಬಹ್ಮಚಾರಿಯಾಗಿರುವೆನು," ಎಂದು ಪ್ರತಿಜ್ಞೆಮಾಡಿ, ಅಂಬಿಗನಿಗೆ ಭಾಷೆಯನ್ನು ಕೊಟ್ಟನು. ಈ ಅದ್ಭುತ ಪ್ರತಿಜ್ಞೆಯನ್ನು ಮಾಡಿದ ದೇವವ್ರತನ ಮಾತನ್ನು ಕೇಳಿ ಬೆರಗಾದ ದೇವತೆಗಳು, ನಿಸ್ಸ್ವಾರ್ಥತೆಯಿಂದ ತಂದೆಯ ಹಿತಕ್ಕಾಗಿ ದೇವವ್ರತನು ಇಂತಹ ಭೀಕರ ಪ್ರತಿಜ್ಞೆಯನ್ನು ಮಾಡಿದುದರಿಂದ, ಅವನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ, "ಭೀಕರ" ಎಂಬರ್ಥದಲ್ಲಿ, "**ಭೀಷ್ಮ! ಭೀಷ್ಮ!**" ಎಂದು ಕೂಗಿದರು. ಈ ಮಾತು ಅಶರೀರವಾಣಿಯಾಗಿ ಲೋಕದ ಜನರಿಗೆ ಕೇಳಿಸಿತು. ಅಲ್ಲಿಂದ ಮುಂದೆ ಎಲ್ಲರೂ ಆತನನ್ನು **ಭೀಷ್ಮ**ನೆಂತಲೇ ಕರೆಯುತ್ತ ಬಂದರು. ಕಡೆಯುವರೆಗೂ ಆತನಿಗೆ ಅದೇ ಹೆಸರೇ ಸ್ಥಿರವಾಯಿತು.

ಈ ಭೀಷ್ಮ ಪ್ರತಿಜ್ಞೆಯನ್ನು ಕೇಳಿದ ಅಂಬಿಗನು ನಿಸ್ಸಂದೇಹವಾಗಿ ಸತ್ಯವತಿಯನ್ನು ಶಂತನುರಾಜನಿಗೆ ಪತ್ನಿಯಾಗಿ ಒಪ್ಪಿಸಲು ಸಂಮತಿಸಿ, ಆಕೆಯನ್ನು ಭೀಷ್ಮನೊಡನೆಯೇ ಕಳುಹಿಸಿಕೊಟ್ಟನು. ಅದರಂತೆ ಭೀಷ್ಮನು ಸತ್ಯವತಿಯನ್ನು ಕರೆತಂದು ತಂದೆಗೆ ಒಪ್ಪಿಸಿದನು. ನಡೆದ ವಿಚಾರವನ್ನು ಕೇಳಿ ಶಂತನುರಾಜನು ತನ್ನ ಮಗನ ನಿಸ್ಸ್ವಾರ್ಥಬುದ್ಧಿ ಮತ್ತು ಪಿತೃಭಕ್ತಿಗಳಿಗಾಗಿ ಅತ್ಯಾಶ್ಚರ್ಯಾನಂದ ಪಟ್ಟು ಆತನ ಭೀಷಣ ಪ್ರತಿಜ್ಞೆಯನ್ನು ಕುರಿತು ಬಹಳವಾಗಿ ಕೊಂಡಾಡಿದನು. ಅನಂತರ ಭೀಷ್ಮನನ್ನು ಕುರಿತು

"ಮಗೂ, ನೀನು ಅಪೇಕ್ಷಿಸಿದಾಗ ಮಾತ್ರವೇ ನಿನಗೆ ಮರಣವೊದಗಲಿ" ಎಂಬದಾಗಿ ವರವನ್ನು ಅನುಗ್ರಹಿಸಿದನು.

ಶಂತನುರಾಜನು ಸತ್ಯವತಿಯನ್ನು ವಿವಾಹವಮಾಡಿಕೊಂಡು ಆಕೆಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯ ಎಂಬ ಇಬ್ಬರು ಗಂಡು ಮಕ್ಕಳನ್ನು ಪಡೆದನು. ಈ ಇಬ್ಬರು ಮಕ್ಕಳೂ ಪ್ರಾಪ್ತವಯಸ್ಕರಾಗುವ ಮೊದಲೇ ಶಂತನುರಾಜನು ಪರಲೋಕಯಾತ್ರೆಮಾಡಿದನು. ಭೀಷ್ಮನು ತಂದೆಗೆ ಪರಲೋಕ ಕ್ರಿಯೆಗಳನ್ನು ನೆರವೇರಿಸಿ, ತಮ್ಮನಾದ ಚಿತ್ರಾಂಗದನಿಗೆ ರಾಜಪಟ್ಟವನ್ನು ಕಟ್ಟಿದನು. ಈ ಚಿತ್ರಾಂಗದನು ಮತ್ತೊಬ್ಬ ಚಿತ್ರಾಂಗದನೆಂಬ ಗಂಧರ್ವನೊಡನೆ ಯುದ್ಧಮಾಡಿ ಸಮರದಲ್ಲಿ ಮಡಿದುಹೋದನು. ಅವನಿಗೆ ಮಕ್ಕಳಿರಲಿಲ್ಲವಾಗಿ, ಅನಂತರ ಅವನ ತಮ್ಮನಾದ ವಿಚಿತ್ರವೀರ್ಯನಿಗೆ ರಾಜ್ಯಪಟ್ಟವಾಯಿತು. ಈ ವಿಚಿತ್ರವೀರ್ಯನು ಪ್ರಾಪ್ತವಯಸ್ಕನಾಗುವವರೆಗೂ, ಅವನಪರವಾಗಿ ಭೀಷ್ಮನೇ ರಾಜ್ಯಭಾರ ಮಾಡುತ್ತಿದ್ದನು.

## ಅಧ್ಯಾಯ ೪

## ಭೀಷ್ಮ ಮತ್ತು ಅಂಬೆ

ವಿಚಿತ್ರವೀರ್ಯನಿಗೆ ವಿವಾಹಕ್ಕೆ ವಯಸ್ಸಾಗುತ್ತ ಬಂದುದನ್ನು ನೋಡಿ ಭೀಷ್ಮನು ತಕ್ಕ ಕನ್ನಿಕೆಯನ್ನು ತಂದು ಆತನಿಗೆ ಮದುವೆಮಾಡಬೇಕೆಂಬ ಆಲೋಚನೆಯಲ್ಲಿದ್ದನು. ಆ ಕಾಲಕ್ಕೆ ಸರಿಯಾಗಿ ಕಾಶೀರಾಜನು ತನ್ನ ಪುತ್ರಿಯರಾದ ಅಂಬೆ, ಅಂಬಿಕೆ, ಅಂಬಾಲಿಕೆಯರೆಂಬ ಕನ್ಯೆಯರಿಗೆ ಸ್ವಯಂವರವನ್ನೇರ್ಪಡಿಸಿದ ವರ್ತಮಾನವು ಭೀಷ್ಮನಿಗೂ ತಿಳಿಯಬಂತು. ಅಂಗ, ವಂಗ, ಕಳಿಂಗ, ಕಾಶ್ಮೀರ, ಕಾಂಭೋಜ, ಕೇರಳ, ಕಾಮರೂಪ ಮೊದಲಾದ ನಾನಾದೇಶಗಳ ರಾಜಪುತ್ರರು ಅತ್ಯುತ್ಸಾಹದಿಂದ ಸ್ವಯಂವರಕ್ಕೆ ಹೋದರು. ಅವರಂತೆಯೇ ಭೀಷ್ಮನೂ ಸಹ ಮಣಿರಥವನ್ನೇರಿ ಕಾಶೀನಗರಕ್ಕೆ ಪ್ರಯಾಣಮಾಡಿದನು. ಕಾಶೀರಾಜನ ಮೂರುಮಂದಿ ಪುತ್ರಿಯರ ಸೌಂದರ್ಯ ಚಾತುರ್ಯ ಸೌಶೀಲ್ಯಾದಿಗಳು ಜಗತ್ಪ್ರಸಿದ್ಧವಾಗಿದ್ದ ಕಾರಣ ಅವರನ್ನು ವರಿಸಬೇಕೆಂಬಾತುರವೂ ಸ್ಪರ್ಧೆಯೂ ಸಹ ಅಲ್ಲಿ ನೆರೆದಿದ್ದ ರಾಜಕುಮಾರರಲ್ಲಿ ಬಹಳ ತೀವ್ರ

ವಾಗಿದ್ದಿತು. ಭೀಷ್ಮನು ಮಹಾಪರಾಕ್ರಮಶಾಲಿಯೆಂಬ ಆತನ ಕೀರ್ತಿಯೂ ಸಹ ಎಲ್ಲೆಲ್ಲಿಯೂ ವ್ಯಾಪಿಸಿ ನಿಸ್ಸಮಾನ ವೀರನೆಂದು ಕ್ಷತ್ರಿಯರೆಲ್ಲರೂ ಈತನನ್ನು ಗೌರವಿಸಿದ್ದರು. ವಿವಾಹವಯಸ್ಸು ಮೀರಿ ಹೋಗಿದ್ದ ಈತನನ್ನು ನೋಡಿ, ರಾಜಕುಮಾರರೆಲ್ಲರೂ, ಈತನು ಸುಮ್ಮನೆ ಸ್ವಯಂವರವನ್ನು ನೋಡುವುದಕ್ಕಾಗಿ ಬಂದಿರಬಹುದೆಂದು ತಿಳಿದಿದ್ದರೆ, ಸ್ಪರ್ಧೆಗೆ ನಿಂತಿದ್ದ ರಾಜಪುತ್ರರು ತಮ್ಮ ಹೆಸರುಗಳನ್ನು ಕೊಡುವಾಗ ಭೀಷ್ಮನೂ ತನ್ನ ಹೆಸರನ್ನು ಕೊಟ್ಟನು. ಅದನ್ನು ನೋಡಿ ಹೆದರಿ, ಇತರ ರಾಜಕುಮಾರರೆಲ್ಲರೂ ಖಿನ್ನರಾದರು. ಭೀಷ್ಮನು ತನ್ನ ತಮ್ಮ ವಿಚಿತ್ರವೀರ್ಯನಿಗಾಗಿ ಕನ್ಯೆಯರನ್ನು ಗೆದ್ದು ತರಲು ಬಂದಿದ್ದನೆಂಬುದು ಅಲ್ಲಿದ್ದಯಾರಿಗೂ ತಿಳಿಯದು. ಆದರಿಂದ ಭೀಷ್ಮನು ಸ್ವಯಂವರ ಸ್ಪರ್ಧೆಗೆ ನಿಂತಿದ್ದುದನ್ನು ಕುರಿತು ಅಲ್ಲಿ ನೆರೆದಿದ್ದವರಲ್ಲಿ ನಾನಾ ವಿಧವಾದ ಅಭಿಪ್ರಾಯಗಳು ಹೊರಟವು.

"ಭರತ ಶ್ರೇಷ್ಠರಾದ ಈ ಭೀಷ್ಮರಿಗೆ ವಿದ್ಯಾಬುದ್ಧಿಗಳು ವಿಶೇಷವಾಗಿದ್ದರೂ ವಿವೇಕವು ಮಾತ್ರ ಸಾಮಾನ್ಯವೆಂದೇ ತೋರುವುದು. ವಯಸ್ಸುಮೀರಿ ಮುದುಕರಾಗಿರುವ ಇವರಿಗೆ ಈ ಸ್ವಯಂವರದ ಗೊಡವೆಯೇತಕ್ಕೆ ? ತಾನು ಆಜೀವ ಬ್ರಹ್ಮಚಾರಿಯಾಗಿರುವೆನೆಂದು ಇವರು ಮಾಡಿದ ಪ್ರತಿಜ್ಞೆಯೇನಾಯಿತು ? ಆಗಿನ ಸಮಯಕ್ಕೆ ತಕ್ಕ ಹಾಗೆ ಮಾತನಾಡಿ ಕೀರ್ತಿಯನ್ನುಗಳಿಸಿ ಈಗ ಈ ಅಂತಸ್ತಿಗಿಳಿದರಲ್ಲಾ !" ಎಂದು ವಿಧ ವಿಧವಾಗಿ ಅಲ್ಲಿ ನೆರೆದಿದ್ದವರು ಆಡಿಕೊಳ್ಳುತ್ತಿದ್ದರು.

ರಾಜಕುಮಾರರನ್ನು ನೋಡಲು ಬಂದ ಕನ್ಯೆಯರೂ ಈ ಮುದಿ ವೀರನನ್ನು ನೋಡಿ ನಿಲ್ಲದೆ ಮುಂದೆ ನಡೆದರು. ಇದೆಲ್ಲವನ್ನೂ ಗಮನಿಸಿದ ಭೀಷ್ಮನಿಗೆ ಕೋಪವು ಮೇರೆಮೀರಿತು. ಆಗ ಆತನು, ಅಲ್ಲಿ ನೆರೆದಿದ್ದ ರಾಜರೆಲ್ಲರನ್ನೂ ಉದ್ದೇಶಿಸಿ, "ಎಲೈ ರಾಜರುಗಳಿರಾ, ನಾನು ನನ್ನ ತಮ್ಮನಾದ ವಿಚಿತ್ರವೀರ್ಯನಿಗೆ ವಿವಾಹಮಾಡಲು ಈ ಮೂರುಮಂದಿ ಕನ್ಯೆಯರನ್ನೂ ಕರೆದುಕೊಂಡುಹೋಗುವೆನು. ಇದಕ್ಕೆ ಅಡ್ಡಿಬರುವವರು ಯಾರಾದರೂ ಇದ್ದರೆ, ಬನ್ನಿ; ಯುದ್ಧದಲ್ಲಿ ನಿಮ್ಮ ಭುಜಬಲವನ್ನು ತೋರಿ, ನನ್ನನ್ನು ಗೆದ್ದು ಇವರನ್ನು ಬಿಡಿಸಿಕೊಂಡು ಹೋಗಿರಿ," ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಅಲ್ಲದೆ ಕಾಶೀರಾಜನನ್ನು ಕುರಿತು

"ರಾಜೇಂದ್ರಾ! ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ ಗಾಂಧರ್ವ, ರಾಕ್ಷಸ, ಪೈಶಾಚ, ಎಂಬ ಅಷ್ಟವಿಧ ವಿವಾಹಗಳಲ್ಲಿ ಕ್ಷತ್ರಿಯರಿಗೆ ಗಾಂಧರ್ವ ಮತ್ತು ರಾಕ್ಷಸ ವಿವಾಹಗಳೇ ಉತ್ತಮಗಳು. ಸ್ವಯಂವರ ದಲ್ಲಿ ಗೆದ್ದು ಕನ್ಯೆಯನ್ನು ವರಿಸುವುದು ಅದಕ್ಕಿಂತಲೂ ಅತ್ಯುತ್ತಮವಾದು ದರಿಂದ ನಾನು, ಈಗ ಇಲ್ಲಿ ನೆರೆದಿರುವ ಸಕಲ ರಾಜರನ್ನೂ ಪರಾಭವಿಸಿ ಓಡಿಸಿ ಈ ಕನ್ಯೆಯರನ್ನು ಕರೆದುಕೊಂಡು ಹೋಗುವೆನು," ಎಂಬದಾಗಿ ಹೇಳಿ ಭೀಷ್ಮನು ಹೊರಡುತ್ತಿರುವಷ್ಟರಲ್ಲಿ, ಅಲ್ಲಿ ಸೇರಿದ್ದ ರಾಜರು ಗಳೆಲ್ಲರೂ ಹಸ್ತಿ ಅಶ್ವ ರಥ ಪದಾತಿಗಳ ಸೈನ್ಯಗಳೊಡಗೂಡಿ ಬಂದು ಭೀಷ್ಮನಿಗೆ ಎದುರು ಬಿದ್ದು ತಾಗಲು ಸಿದ್ಧರಾದರು.

ಆಗ ಭೀಷ್ಮನು ರೋಷತಾಮ್ರಾಕ್ಷನಾಗಿ ಮಹಾ ರೌದ್ರಾಕಾರ ದಿಂದ, ಅವರೊಡನೆ ಯುದ್ಧಮಾಡಿ ಎಲ್ಲರನ್ನೂ ವಿಫಲರನ್ನಾಗಿ ಮಾಡಿ, ಕಾಶೀ ರಾಜಪುತ್ರಿಯರಾದ ಅಂಬೆ, ಅಂಬಿಕೆ, ಅಂಬಾಲಿಕೆ ಎಂಬ ಮೂವರು ಕನ್ಯೆಯರನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟು ಬರುತ್ತಿದ್ದನು. ಹೀಗೆ ಭೀಷ್ಮನಿಂದ ಪರಾಜಿತರಾದ ಕ್ಷತ್ರಿಯ ವೀರರು ವಿಷಣ್ಣವದನ ರಾಗಿ ಹಿಂದಿರುಗುತ್ತಿರುವಲ್ಲಿ, ಸಾಲ್ವದೇಶದ ರಾಜನು ಹಿಂದಣಿಂದ ಸೈನ್ಯಸಹಿತನಾಗಿ ಭೀಷ್ಮನನ್ನು ಅಟ್ಟಿಕೊಂಡು ಬಂದು ತಡೆದನು. ಈ ಸಾಲ್ವರಾಜನನ್ನು ಕಾಶೀರಾಜನ ಜ್ಯೇಷ್ಠಪುತ್ರಿಯಾದ ಅಂಬೆಯು ಮನಸ್ಸಿನಲ್ಲಿ ಪತಿಯನ್ನಾಗಿ ವರಿಸಿದ್ದಳು. ಆಗ ಸಾಲ್ವನಿಗೂ ಭೀಷ್ಮನಿಗೂ ಪ್ರಬಲವಾದ ಯುದ್ಧವು ನಡೆಯಿತು. ಭೀಷ್ಮನು ಪರಶುರಾಮರ ಶಿಷ್ಯ ನಾಗಿ ಧನುರ್ವಿದ್ಯೆಯಲ್ಲಿ ಅದ್ವಿತೀಯನಾಗಿದ್ದ ಕಾರಣ ಸಾಲ್ವನು ಆತನಿಗೆ ಸೋತುಹೋದನು. ಆಗ ಭೀಷ್ಮನು ರಾಜಪುತ್ರಿಯರ ಕೋರಿಕೆಯಂತೆ ಅವನ ಪ್ರಾಣವನ್ನುಳಿಸಿ, ವಾಯುವೇಗದಿಂದ ರಥವನ್ನೋಡಿಸಿಕೊಂಡು ಹಸ್ತಿನಾಪುರಕ್ಕೆ ಹೊರಟು ಬಂದನು.

ಅನಂತರ ಭೀಷ್ಮನು, ತಾನು ಕರೆತಂದಿದ್ದ ಮೂವರು ರಾಜಪುತ್ರಿ ಯರನ್ನೂ ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ವಿವಾಹಮಾಡ ಬೇಕೆಂದುದ್ದೇಶಿಸಿ, ಎಲ್ಲ ಸನ್ನಾಹಗಳನ್ನೂ ಮಾಡಿದನು. ವಿವಾಹ ಮಂಟಪದಲ್ಲಿ ಅಂಬೆಯು ಭೀಷ್ಮನ ಬಳಿಗೆ ಬಂದು ಕೈಮುಗಿದು, "ಧರ್ಮಜ್ಞ ರಾದ ಗಂಗಾಪುತ್ರರೇ, ನಾನು ಮನಸ್ಸಿನಲ್ಲಿ ಸಾಲ್ವ ದೇಶದ ಅರಸನನ್ನು

ಪತಿಯನ್ನಾಗಿ ವರಿಸಿದ್ದೇನೆ. ಆತನೂ ನನ್ನನ್ನು ತನ್ನ ಪತ್ನಿಯೆಂಬದಾಗಿ ಮನಃಪೂರ್ವಕವಾಗಿ ಒಪ್ಪಿಕೊಂಡಿದ್ದಾನೆ. ಇದಕ್ಕೆ ನಮ್ಮ ತಂದೆಯೂ ಸಹ ತನ್ನ ಅನುಮತಿಯನ್ನು ಕೊಟ್ಟಿದ್ದಾನೆ. ನೀವು ನನ್ನನ್ನು ಬಲಾತ್ಕಾರದಿಂದ ಕರೆತಂದಿರುತ್ತೀರಿ. ಧರ್ಮಮರ್ಮವನ್ನರಿತ ನೀವು ಈ ವಿಚಾರದಲ್ಲಿ ಉಚಿತರೀತಿಯಿಂದ ಕಾರ್ಯಮಾಡಬೇಕಾಗಿ ಬೇಡಿಕೊಳ್ಳುವೆನು," ಎಂದಳು. ಇದನ್ನು ಕೇಳಿದ ಭೀಷ್ಮನು ಧರ್ಮವೇತ್ತರಾದ ಬ್ರಾಹ್ಮಣರ ಅನುಮತಿಯಿಂದ ತಕ್ಕ ಜನರನ್ನು ಜೊತೆಗೆ ಕೊಟ್ಟು, ಅಂಬೆಯನ್ನು ಸಾಲ್ವರಾಜನ ಬಳಿಗೆ ಕಳುಹಿಸಿಕೊಟ್ಟನು. ಅನಂತರ ಅವಳ ತಂಗಿಯರಾದ ಅಂಬಿಕೆ, ಅಂಬಾಲಿಕೆಯರನ್ನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಕೊಟ್ಟು ಮಹಾವಿಭವದಿಂದ ವಿವಾಹಮಹೋತ್ಸವವನ್ನು ನೆರವೇರಿಸಿದನು.

ಅಂಬೆಯು ಸಾಲ್ವರಾಜನ ಬಳಿಗೆ ಹೋಗಿ ಕೈಮುಗಿದು, "ಮಹಾರಾಜಾ, ನಾವಿಬ್ಬರೂ ಮೊದಲೇ ಮನಸ್ಸಿನಲ್ಲಿ ಪರಸ್ಪರ ವರಿಸಿರುವೆವು. ಇದನ್ನರಿತ ಭೀಷ್ಮರು ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವರು. ಈಗ ನನ್ನನ್ನು ನೀನು ಶಾಸ್ತ್ರರೀತಿಯಿಂದ ವಿವಾಹಮಾಡಿಕೊಳ್ಳಬೇಕು," ಎಂಬದಾಗಿ ಪ್ರಾರ್ಥಿಸಿದಳು.

ಅದಕ್ಕೆ ಸಾಲ್ವರಾಜನು, "ಅಂಬೇ, ನಾನು ಭೀಷ್ಮನಿಂದ ಯುದ್ಧದಲ್ಲಿ ಪರಾಜಿತನಾಗಿ ಅವಮಾನಿತನಾದೆನು. ಅಲ್ಲದೆ, ಆ ಭೀಷ್ಮನು ನಿನ್ನನ್ನು ತನ್ನ ವಶಪಡಿಸಿಕೊಂಡು ಹೋದನು. ಈಗ ನೀನು ಭೀಷ್ಮನಿಗೆ ಸೇರಿದವಳು, ಆದುದರಿಂದ ನಾನು ನಿನ್ನನ್ನು ಅಂಗೀಕರಿಸುವುದಿಲ್ಲ. ಈಗ ನೀನು ಮತ್ತೆ ಭೀಷ್ಮನ ಬಳಿಗೇ ಹೋಗಿ ಆತನಾಜ್ಞೆಯಂತೆ ನಡೆಯುವುದು ನಿನ್ನ ಧರ್ಮ, ಆದ್ದರಿಂದ ಹೊರಟುಹೋಗು," ಎಂದು ಹೇಳಿ, ಅವಳನ್ನು ಹಿಂದಕ್ಕೆ ಕಳುಹಿಸಿಬಿಟ್ಟನು.

ಅಂಬೆಯು ಬಹಳ ಖಿನ್ನಳಾಗಿ ಮತ್ತೆ ಹಸ್ತಿನಾಪುರಕ್ಕೇ ಹಿಂದಿರುಗಿ ಬಂದು, ನಡೆದ ವಿಚಾರವನ್ನು ಭೀಷ್ಮನಿಗೆ ತಿಳಿಸಿದಳು. ಆಗ ಭೀಷ್ಮನು ವಿಚಿತ್ರವೀರ್ಯನನ್ನು ನೋಡಿ, "ತಮ್ಮಾ, ಸಾಲ್ವರಾಜನ ಬಳಿಗೆ ಹೋಗಿದ್ದ ಅಂಬೆಯನ್ನು ಆತನು ವರಿಸದೆ ತಿರಸ್ಕರಿಸಿ ಹಿಂದಕ್ಕೆ ಕಳುಹಿಸಿರುವನು. ಆದಕಾರಣ ಈಗ ನೀನಿವಳನ್ನು ನಿರಾತಂಕವಾಗಿ ವರಿಸಬಹುದು," ಎಂದು

ಹೇಳಲು, ವಿಚಿತ್ರವೀರ್ಯನು, ತನ್ನ ಕ್ಷತ್ರಿಯ ಸಂಸ್ಕೃತಿಯನ್ನನುಸರಿಸಿ, "ಬೇರೊಬ್ಬ ಪುರುಷನಲ್ಲಿ ಮನಸೋತ ಕನ್ಯೆಯನ್ನು ನಾನೆಂದಿಗೂ ಮದುವೆಯಾಗಲಾರೆನು, ಕ್ಷಮಿಸಬೇಕು," ಎಂದು ಹೇಳಿ ನಿರಾಕರಿಸಿದನು. ಇದನ್ನು ಕೇಳಿದ ಅಂಬೆಗೆ ಬಹಳ ದುಃಖವುಂಟಾಯಿತು. ಆಗ ಭೀಷ್ಮನನ್ನು ನೋಡಿ, "ಸ್ವಾಮೀ, ನನ್ನನ್ನು ಕರೆತಂದ ನೀವೇ ನನ್ನನ್ನು ವಿವಾಹ ಮಾಡಿಕೊಳ್ಳುವುದು ಧರ್ಮವು. ಆದುದರಿಂದ ನನ್ನನ್ನು ತಾವು ಪತ್ನಿಯನ್ನಾಗಿ ಪರಿಗ್ರಹಿಸಬೇಕು," ಎಂದು ಪ್ರಾರ್ಥಿಸಿಕೊಂಡು ಬಹಳವಾಗಿ ಒತ್ತಾಯ ಪಡಿಸಿದಳು. ಅವಳು ಎಷ್ಟು ಪ್ರಾರ್ಥಿಸಿಕೊಂಡರೂ ಸ್ಥಿರಪ್ರತಿಜ್ಞನಾದ ಭೀಷ್ಮನು, "ನೀನೆಷ್ಟು ಹೇಳಿದರೂ ನಾನು ನನ್ನ ಪ್ರತಿಜ್ಞೆಯನ್ನು ವ್ಯರ್ಥಮಾಡಲಾರೆನು. ಆಜೀವಬ್ರಹ್ಮಚರ್ಯದಿಂದಿರುವೆನೆಂದು ನಾನು ಮಾಡಿರುವ ಪ್ರತಿಜ್ಞೆಯು ಎಂದೆಂದಿಗೂ ಸುಳ್ಳಾಗ ತಕ್ಕುದಲ್ಲ. ಒಂದಾವೃತ್ತಿ ಸಾಲ್ವರಾಜನನ್ನು ಮನಸ್ಸಿನಲ್ಲಿ ಪತಿಯೆಂದೆಣಿಸಿರುವ ನೀನು ಮತ್ತೆ ಅವನನ್ನೇ ಪ್ರಾರ್ಥಿಸಿ ಒಪ್ಪಿಸಿ ಮದುವೆಯಾಗಬೇಕು, ಹೋಗು," ಎಂಬದಾಗಿ ಎಷ್ಟು ಹೇಳಿದರೂ ಕೇಳದೆ ಅಂಬೆಯು, "ನಾನು ಮತ್ತೆ ಆತನ ಬಳಿಗೆ ಹೋಗುವುದಿಲ್ಲ. ನೀವೇ ನನ್ನನ್ನು ಪತ್ನಿಯನ್ನಾಗಿ ವರಿಸಬೇಕು," ಎಂಬದಾಗಿ ಹೇಳುತ್ತ ಹಠವಿಡಿದು ಭೀಷ್ಮನ ಮನೆಯಲ್ಲಿಯೇ ನಿಂತು ಅನೇಕ ವರ್ಷಗಳನ್ನು ಕಳೆದಳು. ಆದರೂ ಭೀಷ್ಮನ ಮನಸ್ಸು ಲೇಶವೂ ಅವಳ ಕಡೆಗೆ ತಿರುಗಲಿಲ್ಲ. ಅನಂತರ ಭೀಷ್ಮನಮಾತಿನಂತೆ ಪುನಃ ಸಾಲ್ವರಾಜನಬಳಿಗೇ ಹೋಗಿ ಕೇಳಿಕೊಂಡಳು. ಆದಕ್ಕಾತನು, "ಮತ್ತೊಬ್ಬನು ಜಯಿಸಿ ಕರೆದುಕೊಂಡು ಹೋದ ಕನ್ಯೆಯನ್ನು ಪರಿಗ್ರಹಿಸಲು ನನ್ನಿಂದ ಸಾಧ್ಯವಿಲ್ಲ, ಹೊರಟುಹೋಗು," ಎಂಬದಾಗಿ ಮೊದಲಿನಂತೆಯೇ ಖಂಡಿತವಾಗಿ ಹೇಳಿ ಕಳುಹಿಸಿಬಿಟ್ಟನು.

ಹೀಗೆ ಆ ಕೋಮಲಾಂಗಿಯು ಯಾರಿಗೂ ಒಲ್ಲದೆ, ಹಸ್ತಿನಾವತಿಯಿಂದ ಸಾಲ್ವನಬಳಿಗೂ, ಸಾಲ್ವನಬಳಿಯಿಂದ ಹಸ್ತಿನಾವತಿಗೂ ಅನೇಕಾವೃತ್ತಿ ತಿರುಗಿ ತಿರುಗಿ ಬೇಸತ್ತು ಕಣ್ಣೀರುಗರೆಯುತ್ತ, ಕಂದಿ ಕುಂದಿ, ತನಗೆ ಇಂತಹ ಸ್ಥಿತಿಯನ್ನು ತಂದ ಭೀಷ್ಮನು ತನ್ನ ಭವಿಷ್ಯವನ್ನೇ ಹಾಳುಮಾಡಿದನೆಂದು ಅವನ ಮೇಲೆ ಮಿತಿಮೀರಿದ ಕೋಪದಿಂದ ಕುದಿಯುತ್ತ ಬಹಳ ದುಃಖಪಟ್ಟಳು. ಅನೇಕ ರಾಜರುಗಳ ಬಳಿಗೆಹೋಗಿ,

ತನ್ನ ವ್ಯಥೆಯನ್ನು ಹೇಳಿಕೊಂಡು, ತನಗೆ ಈ ದುರ್ಗತಿಯನ್ನು ತಂದ ಭೀಷ್ಮನನ್ನು ಎದುರಿಸಿ ಕೊಲ್ಲಬೇಕೆಂದು ಪ್ರಾರ್ಥಿಸಿಕೊಂಡಳು. ಆದರೇನು? ಭೀಷ್ಮನೆಂದರೆ ಆತನ ಪರಾಕ್ರಮವನ್ನು ನೆನೆದು ರಾಜರೆಲ್ಲರೂ ನಡುಗಿ ತಲ್ಲಣಿಸಿ ತತ್ತರಿಸುತ್ತಿದ್ದರು. ಇದರಿಂದ ಅಂಬೆಯ ಪ್ರಯತ್ನವು ಫಲಕಾರಿಯಾಗಲಿಲ್ಲ. ಅನಂತರ ಅವಳು ದೇವಸೇನಾನಿಯಾದ ಷಣ್ಮುಖನನ್ನು ಕುರಿತು ಮಹಾತಪಸ್ಸನ್ನು ಮಾಡಿದಳು. ಅವಳ ಭಕ್ತಿಗೆ ಪ್ರಸನ್ನನಾದ ಕುಮಾರನು ಅಂಬೆಗೆ ಒಂದು ಕಮಲಪುಷ್ಪಗಳ ಮಾಲಿಕೆಯನ್ನು ಕೊಟ್ಟು, "ಈ ಮಾಲಿಕೆಯನ್ನು ಯಾವನು ಧರಿಸಿಕೊಳ್ಳುವನೋ ಅವನು ಭೀಷ್ಮನಿಗೆ ಶತ್ರುವಾಗುವನು," ಎಂದು ಹೇಳಿ ಅಂತರ್ಧಾನವಾದನು. ಅಂಬೆಯು ಆ ಮಾಲಿಕೆಯನ್ನು ತೆಗೆದುಕೊಂಡು ತನ್ನ ಇಚ್ಛಾಪೂರ್ತಿಮಾಡಿಕೊಳ್ಳಲು ಪ್ರತಿಯೊಬ್ಬ ಕ್ಷತ್ರಿಯನ ಬಳಿಗೂ ಹೋಗಿ ತನ್ನ ಕಥೆಯನ್ನು ಹೇಳಿ, ಷಣ್ಮುಖನು ಅನುಗ್ರಹಿಸಿರುವ ಆ ಮಾಲಿಕೆಯನ್ನು ಧರಿಸಿ ಭೀಷ್ಮನನ್ನು ಕೊಲ್ಲಬೇಕೆಂದು ಪ್ರಾರ್ಥಿಸಿಕೊಂಡಳು. ಭೀಷ್ಮನಲ್ಲಿ ವಿರೋಧಕಟ್ಟಿಕೊಳ್ಳಲು ಯಾರಿಗೂ ಧೈರ್ಯ ಬರಲಿಲ್ಲ. ಕಡೆಗೆ ಪಾಂಚಾಲದೇಶದ ಅರಸನಾದ ದ್ರುಪದರಾಜನ ಬಳಿಗೆಹೋಗಿ ಕೇಳಿಕೊಂಡಳು. ಆತನೂ ಇವಳ ಇಷ್ಟಕ್ಕೆ ಒಪ್ಪಲಿಲ್ಲ. ಆದರಿಂದ ಬೇಸತ್ತು ಆ ಕಮಲಮಾಲಿಕೆಯನ್ನು ಆತನ ಅರಮನೆಯ ಬಾಗಿಲಿಗೆ ನೇತುಹಾಕಿ, ದುಃಖಿಸುತ್ತ ಅರಣ್ಯವನ್ನು ಕುರಿತು ಹೊರಟು ಹೋದಳು.

## ಪರಶುರಾಮ ಸಂದರ್ಶನ

ಅನಂತರ ಅರಣ್ಯದಲ್ಲಿ ಅನೇಕ ಮಂದಿ ತಪೋಧನರ ಸಂಗಡ, ತನಗುಂಟಾದ ಅವಮಾನವನ್ನೂ ದುಃಖವನ್ನೂ ಹೇಳಿಕೊಂಡು ಮೊರೆಯಿಡಲು, ಅವರು, "ಎಲೌ, ನೀನು ಮಹಾಪರಾಕ್ರಮಿಯೂ, ಭೀಷ್ಮನ ಅಸ್ತ್ರವಿದ್ಯಾಗುರುವೂ ಆದ ಪರಶುರಾಮರ ಬಳಿಗೆ ಹೋಗಿ ನಿನ್ನ ಆರ್ತಿಯನ್ನು ಹೇಳಿಕೊಂಡರೆ, ಅವರು ನಿನ್ನ ಮನೋರಥವನ್ನು ನೆರವೇರಿಸಬಲ್ಲರು," ಎಂದು ಹೇಳಿದರು. ಅದರಂತೆಯೇ ಅಂಬೆಯು ಹೊರಟು ಪರಶುರಾಮರ ಆಶ್ರಮಕ್ಕೆ ಬಂದು, ಅವರಲ್ಲಿ ತನ್ನ ಕಥೆಯೆಲ್ಲವನ್ನೂ ಹೇಳಿಕೊಳ್ಳಲು, ಅವರು ಕನಿಕರದಿಂದ, "ಮಗಳೇ, ನೀನು ಮೊದಲೇ

ಮನಸ್ಸಿನಲ್ಲಿವರಿಸಿದ್ದ ಸಾಲ್ವರಾಜನು ನಿನ್ನನ್ನು ವಿವಾಹಮಾಡಿಕೊಳ್ಳುವಂತೆ ಆತನನ್ನು ನಾನು ಒಪ್ಪಿಸಬಲ್ಲೆನು. ಅದು ನಿನಗೆ ಸಂಮತವು ತಾನೇ?" ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಅಂಬೆಯು, "ಮಹಾತ್ಮರೇ, ಬೇಡ. ನನಗೆ ಇನ್ನು ವಿವಾಹಮಾಡಿಕೊಳ್ಳಬೇಕೆಂಬ ಆಸೆಯಿಲ್ಲ. ನನ್ನ ಭವಿಷ್ಯವನ್ನು ಹಾಳುಮಾಡಿದ ಭೀಷ್ಮನ ಮೇಲೆ ನನ್ನ ಸೇಡನ್ನು ತೀರಿಸಿಕೊಳ್ಳಬೇಕಾಗಿರುವುದು. ಅದರಿಂದ ತಾವು ಭೀಷ್ಮನೊಡನೆ ಯುದ್ಧಮಾಡಿ ಅವನನ್ನು ಕೊಲ್ಲಬೇಕು. ಅದೇ ನಾನು ತಮ್ಮಲ್ಲಿ ಯಾಚಿಸುತ್ತಿರುವ ವರವು," ಎಂದಳು.

ಅದಕ್ಕೆ ಪರಶುರಾಮನು, "ಮಗಳೇ ನಿನಗೆ ಈ ಹಟವು ಬೇಡ. ನಾನು ನಿನ್ನನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹೋಗಿ, ಅಲ್ಲಿ ಭೀಷ್ಮನಿಗೆ ತಕ್ಕಂತೆ ಹೇಳಿ, ಸಾಮೋಪಾಯದಿಂದಲೇ ಆತನೇ ನಿನ್ನನ್ನು ವಿವಾಹಮಾಡಿಕೊಳ್ಳುವಂತೆ ಮಾಡುವೆನು. ಆತನು ನನ್ನ ಮಾತಿನಂತೆ ನಿನ್ನನ್ನು ಅಂಗೀಕರಿಸದೆ ನನ್ನೊಡನೆ ಯುದ್ಧಮಾಡಲು ಬರುವುದಾದರೆ, ಆಗ ನನ್ನ ಬಾಣಪ್ರಹಾರಗಳ ರುಚಿಯನ್ನು ಅವನಿಗೆ ತೋರಿಸಿ ಮುಂದಿನ ಕಾರ್ಯವನ್ನು ಮಾಡುವೆನು," ಎಂದು ಹೇಳಿ ಸಮಾಧಾನಪಡಿಸಿ, ಅವಳನ್ನೂ ತನ್ನ ಇಷ್ಟಮಿತ್ರನಾದ ಅಕೃತವ್ರಣನನ್ನೂ ಕರೆದುಕೊಂಡು, ಹಸ್ತಿನಾಪುರಕ್ಕೆ ಹೋಗಿ, ತಾನು ಬಂದಿರುವ ವಿಚಾರವನ್ನು ಭೀಷ್ಮನಿಗೆ ಹೇಳಿಕಳುಹಿಸಿದನು. ತನ್ನ ಗುರುವಿನಾಗಮನವನ್ನು ಕೇಳಿ ಭೀಷ್ಮನು ಅರ್ಘ್ಯಪಾದ್ಯಾದಿ ಪೂಜಾದ್ರವ್ಯಗಳನ್ನೂ ಮಧುಪರ್ಕಾದಿಗಳನ್ನೂ ತೆಗೆಯಿಸಿಕೊಂಡು ಋತ್ವಿಜರೊಡನೆ ಬಂದು, ಪರಶುರಾಮನನ್ನು ಭಕ್ತಿಯಿಂದ ಸತ್ಕರಿಸಿದನು. ಪರಶುರಾಮನು ಶಿಷ್ಯನ ಭಕ್ತಿಪುರಸ್ಸರವಾದ ಪೂಜೆಯನ್ನು ಸಂತೋಷದಿಂದ ಸ್ವೀಕರಿಸಿ, ಆತನಿಗೆ ಅಂಬೆಯ ದುಃಖವನ್ನು ತಿಳಿಸಿ ಅವಳನ್ನು ವರಿಸುವಂತೆ ಹೇಳಿದನು. ಅದಕ್ಕೆ ಭೀಷ್ಮನು, "ಸ್ವಾಮೀ, ಇವಳು 'ಮೊದಲೇ ನಾನು ಸಾಲ್ವರಾಜನನ್ನು ಮನಸ್ಸಿನಲ್ಲಿ ವರಿಸಿರುವೆನು,' ಎಂಬವಾಗಿ ಹೇಳಿ ನನ್ನಪ್ಪಣೆ ಪಡೆದು ಹೊರಟು ಹೋದಳು. ಅದರಿಂದ ಅನ್ಯಪುರುಷನನ್ನು ವರಿಸಿರುವ ಇವಳನ್ನು ನನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಮದುವೆಮಾಡಲು ಸಾಧ್ಯವಾಗಲಿಲ್ಲ. ನಾನಾದರೋ ಆಜೀವಬ್ರಹ್ಮಚಾರಿಯಾಗಿರುವೆನೆಂದು ಪ್ರತಿಜ್ಞೆಮಾಡಿರುವುದನ್ನು

ತಾವೂ ಬಲ್ಲಿರಷ್ಟೆ! ಇದರಿಂದ ಇವಳನ್ನು ನಾನು ಪರಿಗ್ರಹಿಸಲಾರೆನು. ತಾವು ನನ್ನ ಗುರುಗಳು; ನನ್ನನ್ನು ಕ್ಷಮಿಸಬೇಕು," ಎಂದು ಕೈಮುಗಿದು ಬೇಡಿಕೊಂಡನು ಆಗ ಪರಶುರಾಮನು, "ಎಲೈ ಭೀಷ್ಮನೇ, ನಾನು ನಿನಗೆ ಗುರುವಷ್ಟೆ! ಆದರಿಂದ ಹೇಗಾದರೂ ನೀನೀಕೆಯನ್ನು ವರಿಸಿ ಈಕೆಯ ದುಃಖವನ್ನು ಪರಿಹರಿಸಬೇಕು. ಇದು ನಿನಗೆ ಗುರುವಿನಾಜ್ಞೆಯು." ಎಂದನು. ಅದಕ್ಕೆ ಭೀಷ್ಮನು, "ಸ್ವಾಮೀ, ನೀವು ನನ್ನ ಅಸ್ತ್ರವಿದ್ಯಾ ಗುರುಗಳೆಂದು ನಿಮ್ಮಲ್ಲಿ ನಾನು ಸಂಪೂರ್ಣವಾದ ಭಕ್ತಿಯಿಟ್ಟಿರುವೆನು; ಆದರೆ ನಾನು ಕ್ಷತ್ರಿಯಧರ್ಮವನ್ನು ಬಿಡತಕ್ಕವನಲ್ಲ. ಪ್ರತಿಜ್ಞಾಭಂಗವನ್ನು ಮಾಡಿಕೊಳ್ಳುವವನಲ್ಲ. ಆದರಿಂದ ನನ್ನನ್ನು ಕ್ಷಮಿಸಬೇಕು," ಎಂದು ಕೇಳಿಕೊಂಡನು. ಅದಕ್ಕೆ ಪರಶುರಾಮನು ಕೆರಳಿ, "ಭೀಷ್ಮಾ! ನೀನು ಇವಳನ್ನು ತ್ಯಾಗಮಾಡಿದರೆ ಮತ್ತೆ ಯಾರೂ ಪರಿಗ್ರಹಿಸರು. ಆದರಿಂದ ನೀನಿವಳನ್ನು ವರಿಸಲೇಬೇಕು. ನಿಜವಾಗಿಯೂ ನೀನು ನನಗೆ ಶಿಷ್ಯನೆಂದರಿತಿದ್ದರೆ ನನ್ನ ಮಾತನ್ನು ಗೌರವಿಸಿ ಅದರಂತೆ ನಡೆಯಲೇಬೇಕು. ನೀನು ಈ ನನ್ನ ಆಜ್ಞೆಯನ್ನು ಉಲ್ಲಂಘಿಸುವೆಯಾದರೆ, ಯುದ್ಧಮಾಡಿ ನಿನ್ನನ್ನು ಸಂಹರಿಸಿಬಿಡುವೆನು," ಎಂದು ಹೇಳಿ ಹೂಂಕಾರಮಾಡಿದನು. ಅದಕ್ಕೆ ಭೀಷ್ಮನು, "ಸ್ವಾಮೀ, ನಾನು ಈವರೆಗೂ ತಮ್ಮಲ್ಲಿ ನನಗಿರುವ ಗುರುಭಾವನೆಯಿಂದಲೇ ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡೆನು. ಆದರೆ ತಾವು ಅದನ್ನು ಗ್ರಹಿಸದೆ ಅಕಾರ್ಯದಲ್ಲಿ ಪ್ರವೇಶಿಸುವಂತೆ ನನ್ನನ್ನು ಪ್ರೇರಿಸುತ್ತಿರುವಿರಿ. ಇದು ನಿಮ್ಮ ಗುರುತ್ವಕ್ಕೆ ತಕ್ಕುದಲ್ಲ, ಗರ್ವಗ್ರಸ್ತನಾಗಿ ದುರ್ಮಾರ್ಗ ಪ್ರವರ್ತಕನಾದ ಗುರುವನ್ನಾದರೂ ತ್ಯಾಗಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವುದನ್ನು ತಾವೂ ಬಲ್ಲಿರಿ. ಆದರಿಂದ ತಮ್ಮೊಡನೆ ಯುದ್ಧಮಾಡಲು ಈಗ ನಾನು ಸಿದ್ಧನಾಗಿರುವೆನು. ಆಯುಧಪಾಣಿಯಾಗಿ ಕ್ಷತ್ರಿಯನಂತೆ ಯುದ್ಧಕ್ಕೆ ನಿಲ್ಲುವ ಬ್ರಾಹ್ಮಣನನ್ನು ಸಂಹರಿಸುವವನಿಗೆ ಬ್ರಹ್ಮಹತ್ಯಾದೋಷವಿಲ್ಲವೆಂದು ಧರ್ಮಶಾಸ್ತ್ರದಲ್ಲಿ ಹೇಳಿರುವುದಷ್ಟೆ! ಆದರಿಂದ ತಮ್ಮೊಡನೆ ಯುದ್ಧಮಾಡುವೆನು. ಅಪ್ಪಣೆಯನ್ನು ಕೊಡಬೇಕು," ಎಂದು ನಮಸ್ಕರಿಸಿ ಕೈಮುಗಿದು ಕೇಳಿಕೊಂಡನು. ಪರಶುರಾಮನು "ಆಗಬಹುದು," ಎನ್ನಲು, ಇಬ್ಬರೂ ಯುದ್ಧಸನ್ನದ್ಧರಾಗಿ ಕುರುಕ್ಷೇತ್ರಕ್ಕೆ ಬಂದರು.

## ಭೀಷ್ಮ ಪರಶುರಾಮರ ಯುದ್ಧ

ಭೀಷ್ಮನು ವೀರಾಲಂಕಾರ ಭೂಷಿತನಾಗಿ ರಥದಲ್ಲಿ ಕುಳಿತು ಶಂಖ ವನ್ನೂದಲು, ಅನೇಕಮಂದಿ ಮುನಿಗಳೂ, ದೇವರ್ಷಿಗಳೂ ದೇವತೆಗಳೂ ಸಹ ಬಂದರು. ಆಗ ರಥಾರೂಢನಾಗಿದ್ದ ಭೀಷ್ಮನು, ಪರಶುರಾಮನನ್ನು ನೋಡಿ, "ಸ್ವಾಮೀ ಗುರುಗಳೇ, ಶಿಷ್ಯನಾದ ನಾನು ರಥದಮೇಲೆ ನಿಂತು, ನೆಲದಮೇಲಿರುವ ನಿಮ್ಮೊಡನೆ ಯುದ್ಧಮಾಡುವುದು ಅಧರ್ಮವು. ಆದು ದರಿಂದ, ಈ ರಥವನ್ನು ದಯವಿಟ್ಟು ಏರಿ ಕುಳಿತು ನಾನು ಒಪ್ಪಿಸುವ ಈ ಕವಚವನ್ನು ತೊಟ್ಟು ಯುದ್ಧಮಾಡಬೇಕು," ಎಂದು ವಿನಯದಿಂದ ನುಡಿದು ರಥವನ್ನೂ ಕವಚವೊಂದನ್ನೂ ಕೊಡಲು ಹೋದನು. ಅದಕ್ಕೆ ಪರಶುರಾಮನು ನಸುನಗುತ್ತ, "ಭೀಷ್ಮಾ, ಬ್ರಾಹ್ಮಣರಾದ ನಮಗೆ ಆ ರಥ ವೇಕೆ? ಈ ಕವಚವೇಕೆ? ಭೂಮಿಯೇ ರಥ, ವೇದಗಳೇ ಕುದುರೆಗಳು, ವಾಯುವೇ ಸಾರಥಿಯು, ಉಪನಿಷತ್ತುಗಳೇ ಬಾಣಗಳು," ಎಂಬದಾಗಿ ನುಡಿದನು. ಅನಂತರ ಭೀಷ್ಮನು ಹಿಂದಿರುಗಿ ರಥದಮೇಲೆ ನಿಂತು ನೋಡು ತ್ತಿರುವಲ್ಲಿ, ಪರಶುರಾಮನು ತನ್ನ ಮಾನಸಸೃಷ್ಟಿಯಾದ ದಿವ್ಯಾಶ್ವಗಳನ್ನು ಕಟ್ಟಿದ ಸುವರ್ಣ ಭೂಷಣಾಲಂಕೃತವಾಗಿರುವ ರಥವನ್ನೇರಿ, ಸೂರ್ಯ ಚಂದ್ರಾಕಾರವಾದ ಗುರುತುಗಳಿಂದ ಶೋಭಿಸುವ ಕವಚವನ್ನೂ ತೊಡವು ಗಳನ್ನೂ ತೊಟ್ಟು, ಬಿಲ್ಲು ಬತ್ತಳಿಕೆಗಳನ್ನು ಧರಿಸಿ ಉದಯಪರ್ವತವನ್ನೇ ರಿದ ಪ್ರಚಂಡ ಮಾರ್ತಾಂಡನಂತೆ ಕಾಣಿಸಿಕೊಂಡನು. ಆ ರಥದಲ್ಲಿ ಪರಶು ರಾಮನ ಮಿತ್ರನಾದ ಅಕೃತವ್ರಣನು ಸಾರಥಿಯಾಗಿ ಕುಳಿತಿದ್ದನು. ಇದೆಲ್ಲ ವನ್ನೂ ನೋಡಿ ಪರಶುರಾಮನ ಮಹಿಮೆಯಿಂದ ಭೀಷ್ಮನಿಗೆ ಅತ್ಯಾಶ್ಚರ್ಯ ವಾಯಿತು. ಆಗ ಆತನು ರಥದಿಂದಿಳಿದು, ಪರಶುರಾಮನ ಸಮೀಪಕ್ಕೆ ಬಂದು ಶಾಸ್ತ್ರೋಕ್ತ ಕ್ರಮದಿಂದ ನಮಸ್ಕಾರಮಾಡಿ, ಯುದ್ಧಮಾಡಲು ಮತ್ತೆ ಅಪ್ಪಣೆಯನ್ನು ಕೇಳಿದನು. ಆಗ ಪರಶುರಾಮನು ಬಹಳ ಸಂತೋಷ ಪಟ್ಟು, "ಭೀಷ್ಮಾ, ಶ್ರೇಯಃಕಾಮಿಗಳಾದವರು ಮಾಡಬೇಕಾದ ಕಾರ್ಯ ವನ್ನು ನೀನೀಗಮಾಡಿರುವೆ. ಹಿರಿಯರೊಡನೆ ಯುದ್ಧಮಾಡಲು ಬರ ತಕ್ಕವರಿಗೆ ಇದು ಧರ್ಮವು. ನೀನಿಲ್ಲಿಗೆ ಬಾರದೆ ಇದ್ದಿದ್ದರೆ, ನೀನು ಧರ್ಮ ಚ್ಯುತನಾದೆಯೆಂದು ನಾನು ನಿನಗೆ ಶಾಪವನ್ನೇ ಕೊಡುತ್ತಿದ್ದೆನು. ಗುರು ವೆಂದು ಹಿಂದೆಗೆಯದೆ ನೀನು ನನ್ನೊಡನೆ ಧೈರ್ಯದಿಂದ ಯುದ್ಧಮಾಡು.

ಆದರೆ, ಈಗ ನಿನ್ನನ್ನು ಜಯಿಸಲು ಬಂದಿರುವ ನಾನು ನಿನಗೆ ಜಯ ವಾಗುವಂತೆ ಹರಸಲಾರೆನು. ನಿನ್ನ ನಡತೆಯಿಂದ ನನಗತ್ಯಂತ ಸಂತೋಷ ವುಂಟಾಗಿರುವುದು. ಇನ್ನು ಯುದ್ಧವನ್ನಾರಂಭಿಸೋಣ," ಎಂದು ಹೇಳಲು ಭೀಷ್ಮನು ತನ್ನ ರಥಕ್ಕೆ ಹಿಂದಿರುಗಿ ಸುವರ್ಣವರ್ಣದಿಂದ ಶೋಭಿಸುವ ತನ್ನ ಶಂಖವನ್ನೂದಿದನು. ಆ ಕೂಡಲೇ ಪರಶುರಾಮನು ಭೀಷ್ಮನಮೇಲೆ ಬಾಣಗಳ ಮಳೆಯನ್ನೇ ಕರೆದನು. ಆ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ನಿವಾರಿಸಿ ಭೀಷ್ಮನು ಅಸಂಖ್ಯಾತಬಾಣಗಳನ್ನು ಪರಶುರಾಮನ ಮೇಲೆ ಪ್ರಯೋಗಿಸಿದನು. ಹೀಗೆ ಮಹಾಸ್ತ್ರಗಳನ್ನು ಪ್ರಯೋಗಿಸಿ ಆ ಇಬ್ಬರು ವೀರರೂ ಘೋರಯುದ್ಧವನ್ನು ಇಪ್ಪತ್ತು ಮೂರು ದಿನಗಳವರೆಗೆ ಮಾಡಿದರು. ಅವರಲ್ಲಿ ಯಾರೊಬ್ಬರೂ ಸೋಲ ದಿರಲು, ಪರಶುರಾಮನು ಭೀಷ್ಮನಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿ ಸಿದನು. ಭೀಷ್ಮನು ಅದಕ್ಕೆ ಪ್ರತಿಯಾಗಿ ತಾನೂ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಲು, ಆ ಎರಡು ಬ್ರಹ್ಮಾಸ್ತ್ರಗಳೂ ಪರಸ್ಪರ ಹೊಡೆದಾಡಿ ದುದರಿಂದ ಅಂತರಿಕ್ಷದಲ್ಲೆಲ್ಲ ಒಂದು ಮಹತ್ತರವಾದ ತೇಜಸ್ಸು ಹುಟ್ಟಿತು. ಅದರಿಂದ ಆಕಾಶವೆಲ್ಲವೂ ಜಾಜ್ವಲ್ಯಮಾನವಾಗಿ ದಿಕ್ಕುಗಳೆಲ್ಲಕ್ಕೂ ಹೊಗೆಯು ಸುತ್ತಿಕೊಳ್ಳಲು, ಭೂಮಿಯೇ ತಲ್ಲಣಿಸಿ ಹೋಯಿತು. ಅಂತರಿಕ್ಷದಲ್ಲಿಯಾಗಲಿ, ಭೂಮಿಯಲ್ಲಾಗಲಿ, ಸಂಚಾರಕ್ಕೆ ಅವಕಾಶವಿಲ್ಲದೆ ದೇವಗಂಧರ್ವ ಸಿದ್ಧ ಚಾರಣರೂ, ಯಕ್ಷರಾಕ್ಷಸರೂ ಮುನಿಗಳೂ ತಪಿಸು ತ್ತಿರಲು ಭೀಷ್ಮನು, ಚಿರಂಜೀವಿಯಾದ ಪರಶುರಾಮನು ಮೃತಪ್ರಾಯ ನಾಗುವಂತೆ ಆತನನ್ನು ಮೂರ್ಛೆಗೆಡಹುವ ಪ್ರಸ್ವಾಪವೆಂಬ ಅಸ್ತ್ರವನ್ನು ಪ್ರಯೋಗಿಸಲು ಉದ್ಯುಕ್ತನಾದನು. ಅದನ್ನು ಬಿಲ್ಲಿಗೆ ಹೂಡುವಾಗ ಪ್ರಬಲವಾದ ಕೋಲಾಹಲವುಂಟಾಯಿತು. ಆಗ "ಎಲೈ ಭೀಷ್ಮಾ, ಪ್ರಸ್ವಾಪಾಸ್ತ್ರವನ್ನು ಪ್ರಯೋಗಿಸಬೇಡ," ಎಂಬ ದೇವತೆಗಳ ಅಶ ರೀರವಾಣಿಯು ಕೇಳಬಂತು. ಭೀಷ್ಮನು ಅದರಂತೆ ಶರವನ್ನು ಉಪ ಸಂಹರಿಸಿದನು. ಅದನ್ನು ನೋಡಿ ಪರಶುರಾಮನು ಪಶ್ಚಾತ್ತಾಪದಿಂದ, "ಅಯ್ಯೋ! ನಾನು ಮಂದ ಬುದ್ಧಿಯಿಂದ ಇಂತಹ ಮಹಾಕ್ಷತ್ರಿಯ ವೀರನೊಡನೆ ಯುದ್ಧಮಾಡಿ ಪರಾಜಿತನಾದೆನು," ಎಂದು ವ್ಯಸನ ಪಡುತ್ತಿದ್ದನು. ಅಷ್ಟರಲ್ಲಿ, ಪರಶುರಾಮನ ತಂದೆಯಾದ ಜಮದಗ್ನಿ

ಮುನಿಯೂ ತಾತನಾದ ಋಚೀಕಮುನಿಯೂ ಅಂತರಿಕ್ಷದಲ್ಲಿ ಗೋಚರ ರಾದರು. ಅವರನ್ನು ನೋಡಿ ಪರಶುರಾಮನು ಸಂತೋಷದಿಂದ ನಮ ಸ್ಕರಿಸಲು, ಅವರು ಬಂದು, "ವತ್ಸ ಪರಶುರಾಮಾ, ಮೊದಲೇ ಇಪ್ಪ ತ್ತೊಂದಾವೃತ್ತಿ ದುಷ್ಟಕ್ಷತ್ರಿಯರನ್ನು ವಧಿಸಿ ಅಸ್ತ್ರಶಸ್ತ್ರಗಳನ್ನು ತ್ಯಜಿಸಿದ್ದ ನೀನು ಈಗ ಮತ್ತೆ ಮಹಾವೀರನಾದ ಭೀಷ್ಮನೊಡನೆ ಯುದ್ಧಮಾಡ ಬಹುದೇ? ಇನ್ನು ಸಂಗರವನ್ನು ಸಾಕುಮಾಡು. ಮುಂದೆ ಇಂತಹ ಸಾಹಸಕಾರ್ಯವನ್ನು ಮಾಡಬೇಡ, ಧನುಸ್ಸನ್ನು ಹಿಡಿಯಬೇಡ, ತಪಸ್ಸಿಗೆ ಹೊರಟುಹೋಗು, ಭೀಷ್ಮನು ಸಾಮಾನ್ಯನಲ್ಲ. ಅಷ್ಟವಸುಗಳಲ್ಲಿ ಒಬ್ಬನು, ಗಂಗಾಪುತ್ರನು. ಅವನೊಡನೆ ಯುದ್ಧಮಾಡಿ ನೀನು ದೈವ ಯೋಗದಿಂದ ಪ್ರಾಣದಿಂದುಳಿದೆ, ಆ ಕಡೆ, ದೇವತೆಗಳು ಭೀಷ್ಮನನ್ನು ನೋಡಿ, 'ಭೀಷ್ಮಾ, ಬ್ರಾಹ್ಮಣನೂ ನಿನ್ನ ಗುರುವೂ ಆದ ಪರಶುರಾಮ ನೊಡನೆ ನೀನು ಯುದ್ಧಮಾಡುವುದು ಸರಿಯಲ್ಲ. ಆತನನ್ನು ನೀನು ಜಯಿಸಿ ಅವಮಾನಪಡಿಸುವುದೂ ಸರಿಯಲ್ಲ,' ಎಂಬದಾಗಿ ಹೇಳುತ್ತಿರು ವರು. ನಾವು ನಿನಗೆ ಹಿರಿಯರು. ನಮ್ಮ ಮಾತನ್ನು ಗೌರವಿಸಿ ಯುದ್ಧ ವನ್ನು ನಿಲ್ಲಿಸು, ಹಿಂದಿರುಗು," ಎಂದು ಹೇಳಲು, ಪರಶುರಾಮನು "ತಂದೇ, ತಾತಾ, ನಾನು ಯುದ್ಧದಲ್ಲಿ ಈ ವರೆಗೆ ಎಂದಿಗೂ ಸೋತು ಹಿಂದಿರುಗಿದವನಲ್ಲ, ಈಗಲೂ ಹಿಂದಿರುಗತಕ್ಕವನಲ್ಲ. ಬೇಕಾದರೆ ಭೀಷ್ಮನೇ ಹಿಂದಿರುಗಲಿ," ಎಂದನು. ಆಗ ಅವರಿಬ್ಬರೂ ನಾರದ ನೊಡನೆ ಭೀಷ್ಮನಬಳಿಗೆ ಬಂದು, "ಭೀಷ್ಮಾ, ಬ್ರಾಹ್ಮಣನೂ ನಿನ್ನ ಗುರುವೂ ಆದ ಪರಶುರಾಮನನ್ನು ನೀನು ಗೌರವಿಸಲು ಯುದ್ಧವನ್ನು ನಿಲ್ಲಿಸಿ ಹಿಂದಿರುಗಿಹೋಗು," ಎಂದು ಹೇಳಲು, ಭೀಷ್ಮನೂ ಅದಕ್ಕೆ ಸಂ ಮತಿಸಲಿಲ್ಲ. ಆದರೆ, ಆತನಿಗೆ ಹಿಂದೆ ಸ್ವಪ್ನದಲ್ಲಿಬಂದು ಹಿತವನ್ನು ನುಡಿ ದಿದ್ದ ಎಂಟು ಮಂದಿ ಬ್ರಾಹ್ಮಣರು ಮತ್ತೆ ಕಾಣಿಸಿಕೊಂಡು, "ಪರಶು ರಾಮನನ್ನು ಗೌರವಿಸು" ಎಂದು ಹೇಳಲು, ಆತನು ಒಪ್ಪಿ ಪರಶುರಾಮನ ಬಳಿಗೆ ಬಂದು ನಮಸ್ಕರಿಸಿದನು. ಆಗ ರಾಮರ್ಷಿಯು, "ವತ್ಸ ಭೀಷ್ಮಾ! ನಿನ್ನ ಸಮಾನನಾದ ವೀರಕ್ಷತ್ರಿಯನು ಲೋಕದಲ್ಲಿ ಎಲ್ಲಿಯೂ ಇಲ್ಲ. ನಿನ್ನ ಯುದ್ಧ ಸಾಹಸ ಚಾತುರ್ಯಗಳನ್ನು ನೋಡಿ ನನಗತ್ಯಂತ ಸಂತೋಷ ವಾಯಿತು," ಎಂದು ಹೇಳಲು, ಭೀಷ್ಮನು ಗುರುವಿಗೆ ಮತ್ತೆ ವಂದಿಸಿ

ಹೊರಟು ಹೋದನು. ಆಗ ಪರಶುರಾಮನು ಅಂಬೆಯನ್ನು ಕರೆದು, "ಅಂಬೇ, ನೀನು ಕಂಡಂತೆ, ನಾನು ನನ್ನ ಕೈಯಿಂದಾದ ಮಟ್ಟಿಗೂ ಭೀಷ್ಮನೊಡನೆ ಮಹಾಯುದ್ಧಮಾಡಿದೆನು. ಅವನು ಅಜೇಯನು, ಅವನನ್ನು ಗೆಲ್ಲಲು ನನ್ನಿಂದ ಸಾಧ್ಯವಿಲ್ಲ, ಆದಕಾರಣ ಈಗ ನೀನು ನಿನ್ನ ಇಷ್ಟಾನುಸಾರ ಹೋಗಬಹುದು. ಇನ್ನು ನಿನಗೆ ಭೀಷ್ಮನೇ ಗತಿ, ಬೇರೊಬ್ಬರಿಲ್ಲ," ಎಂದು ಹೇಳಿದನು. ಅದಕ್ಕೆ ಅಂಬೆಯು, "ಸ್ವಾಮೀ, ತಾವೂ ತಮ್ಮ ಕೈಯಿಂದಾದಷ್ಟು ಸಾಹಸಮಾಡಿದಿರಿ. ಅದು ಫಲಿಸಲಿಲ್ಲ. ಇನ್ನು ನಾನು ಭೀಷ್ಮನ ಬಳಿಗೆ ಹೋಗತಕ್ಕವಳಲ್ಲ. ತಪಸ್ಸನ್ನಾದರೂ ಮಾಡಿ, ಆತನನ್ನು ಸಂಹರಿಸುವುದಕ್ಕೇ ಪ್ರಯತ್ನಿಸುತ್ತೇನೆ," ಎಂದು ಹೇಳಿ ಹೊರಟು ಹೋದಳು. ಪರಶುರಾಮನು ಮುನಿಗಳೊಡಗೂಡಿ ಮಹೇಂದ್ರ ಪರ್ವತಕ್ಕೆ ತಪಸ್ಸಿಗಾಗಿ ಹೊರಟು ಹೋದನು.

## ಅಧ್ಯಾಯ ೪

## ಅಂಬೆಯು ಶಿಖಂಡಿಯಾದುದು

ಅಂಬೆಗೆ ಕೋಪವೂ ದುಃಖವೂ ಮೇರೆ ಮೀರಿದವು. ಆದರಿಂದ, ಅವಳು ಯಮುನಾ ನದೀ ತೀರಕ್ಕೆ ಹೋಗಿ, ಭೀಷ್ಮನನ್ನು ಕೊಲ್ಲುವುದಕ್ಕಾಗಿ ಪರಮೇಶ್ವರನಿಂದ ವರವನ್ನು ಪಡೆಯಲು ನಿರಶನವ್ರತದಿಂದ ಜಟಾಧಾರಿಣಿಯಾಗಿ ಘೋರ ತಪಸ್ಸನ್ನಾಚರಿಸಿದಳು. ಅದನ್ನು ನೋಡಿ ಆ ತಪೋವನದಲ್ಲಿದ್ದ ಮಹರ್ಷಿಗಳು ಅತ್ಯಾಶ್ಚರ್ಯ ಪಟ್ಟರು. ಅವಳು ಅಂಗುಷ್ಠಾಗ್ರದಿಂದ ನಿಂತು ಹನ್ನೆರಡು ವರ್ಷಗಳ ಕಾಲ ತೀವ್ರ ತಪಸ್ಸನ್ನು ಮಾಡಿದಳು. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ ವರವನ್ನು ಕೇಳೆನಲು, ಅಂಬೆಯು, "ದೇವಾ, ನಾನು ಭೀಷ್ಮನನ್ನು ಸಂಹರಿಸುವಂತೆ ವರವನ್ನು ಅನುಗ್ರಹಿಸಬೇಕು," ಎಂಬುದಾಗಿ ಪ್ರಾರ್ಥಿಸಿದಳು. ಅದಕ್ಕೆ ಪರಮೇಶ್ವರನು, "ಅಂಬೇ, ನೀನು ನನ್ನ ಪ್ರಭಾವದಿಂದ ದ್ರುಪದರಾಜನ ಉದರದಲ್ಲಿ ಸ್ತ್ರೀಯಾಗಿ ಹುಟ್ಟಿ ಕಾಲಾಂತರದಲ್ಲಿ ಪುರುಷತ್ವವನ್ನು ಹೊಂದಿ, ಯುದ್ಧಕೌಶಲವನ್ನು ಪಡೆದು ಮಹಾರಥನಾಗಿ ಭೀಷ್ಮನನ್ನು ಸಂಹರಿಸುವೆ," ಎಂದು ಹೇಳಿ ಅಂತರ್ಧಾನವನ್ನೈದಿದನು. ಅನಂತರ ಅಂಬೆಯು ಅಲ್ಲಿಯೇ ಚಿತಿಯೊಂದನ್ನೇರ್ಪಡಿಸಿ ಪ್ರಜ್ವಲನ ಮಾಡಿ,

ರೋಷಾವೇಶದಿಂದ, "ನಾನು ಭೀಷ್ಮನನ್ನು ಸಂಹರಿಸುವೆನು, ಭೀಷ್ಮನನ್ನು ಸಂಹರಿಸುವೆನು," ಎಂದು ನುಡಿಯುತ್ತ ಉರಿಯುವ ಅಗ್ನಿಗೆ ಧುಮ್ಮಿಕ್ಕಿ ದೇಹವನ್ನು ನೀಗಿದಳು.

ಇತ್ತಲಾ ಪಾಂಚಾಲ ದೇಶದರಸನಾದ ದ್ರುಪದ ರಾಜನು, ಭೀಷ್ಮನನ್ನು ಸಂಹರಿಸುವಂತಹ ಪುತ್ರನನ್ನು ತನಗೆ ಕರುಣಿಸಬೇಕೆಂದು ಪರಮೇಶ್ವರನನ್ನು ಕುರಿತು ಘೋರ ತಪಸ್ಸನ್ನಾಚರಿಸಲು, ಶಂಕರನು ಪ್ರತ್ಯಕ್ಷನಾಗಿ, "ಎಲೈ ದ್ರುಪದರಾಜಾ, ನಿನಗೆ ನಾನು ಪ್ರಸನ್ನನಾಗಿರುವೆನು, ನೀನು ಒಬ್ಬ ಪುತ್ರಿಯನ್ನು ಪಡೆಯುವೆ; ಅವಳು ಕಾಲಾಂತರದಲ್ಲಿ ಪುರುಷನಾಗಿ ಮಹಾರಥನೆನಿಸಿ ಭೀಷ್ಮನನ್ನು ಸಂಹರಿಸುವಳು," ಎಂದು ಹೇಳಿ ಅಂತರ್ಧಾನವಾದನು.

ಅನಂತರ ದ್ರುಪದರಾಜನ ಪತ್ನಿಯು ಗರ್ಭಿಣಿಯಾಗಿ ಒಂದು ಹೆಣ್ಣು ಮಗುವನ್ನು ಹೆತ್ತಳು. ರಾಜರಾಜ್ಞಿಯರು ಪರಮೇಶ್ವರನ ವಾಗ್ದಾನದಂತೆ ಮುಂದೆ ಈ ಶಿಶು ಪುರುಷನಾಗುವುದೆಂದು ತಿಳಿದು, ಗುಟ್ಟನ್ನು ಬಯಲುಮಾಡದೆ, ತಮಗೆ ಪುತ್ರೋತ್ಸವವಾಯಿತೆಂದು ಪ್ರಕಟಿಸಿ, ಪುರುಷ ಶಿಶುವಿಗೆ ಆಗಬೇಕಾದ ಜಾತ ಕರ್ಮನಾಮಕರಣಾದಿಗಳನ್ನು ಮಾಡಿ, ಮಗುವನ್ನು "ಶಿಖಂಡಿ" ಎಂದು ಹೆಸರಿಟ್ಟು ಕರೆದರು. ದಿನ ದಿನಕ್ಕೆ ಈ ಮಗುವು ಪುರುಷವೇಷದಿಂದ ಅಭಿವೃದ್ಧಿಯಾಗುತ್ತಿರಲು, ತಾಯಿತಂದೆಗಳು ಅತ್ಯಂತ ಪ್ರೀತಿಯಿಂದ ಸಾಕುತ್ತಿದ್ದರು. ಹೀಗಿರಲು ಕ್ರಮ ಕ್ರಮವಾಗಿ ಶಿಖಂಡಿಗೆ ವಿವಾಹ ವಯಸ್ಸು ಬಂದಿತು. ಆಗ ದ್ರುಪದರಾಜನು ದಶಾರ್ಣ ದೇಶಾಧಿಪತಿಯಾದ ಹಿರಣ್ಯವರ್ಮನ ಪುತ್ರಿಯನ್ನು ತಂದು ಶಿಖಂಡಿಗೆ ವೈಭವದಿಂದ ವಿವಾಹಮಾಡಿದನು. ಕೆಲವು ದಿನಗಳ ಮೇಲೆ ಶಿಖಂಡಿಯು ತನ್ನಂತೆಯೇ ಸ್ತ್ರೀಯೆಂಬ ವಿಚಾರವು ಮಗಳ ಮೂಲಕ ಹಿರಣ್ಯವರ್ಮರಾಯನಿಗೆ ತಿಳಿಯಲು, ಆತನು, ತನಗೆ ದ್ರುಪದರಾಜನು ಸುಳ್ಳು ಹೇಳಿ ಮೋಸಮಾಡಿದನೆಂದು, ಮಹಾ ರೋಷಾವೇಶದಿಂದ, ದ್ರುಪದರಾಜನನ್ನೂ ಶಿಖಂಡಿಯನ್ನೂ ಹಿಡಿದು ಸಂಹರಿಸುವೆನೆಂಬದಾಗಿ ಒಬ್ಬ ದೂತನ ಮೂಲಕ ಹೇಳಿ ಕಳುಹಿಸಿದನು. ಇದನ್ನು ಕೇಳಿ ಅತ್ಯಂತ ದುಃಖಾಕ್ರಾಂತರಾದ ತಾಯಿತಂದೆಗಳನ್ನು ನೋಡಿ, ಶಿಖಂಡಿಯು ಬಹಳ ವ್ಯಥೆಪಟ್ಟು ತನ್ನಿಂದ ಅವರಿಗೆ ಮಹಾಕಷ್ಟ

ವೊದಗಿತೆಂಬ ಪಶ್ಚಾತ್ತಾಪದಿಂದಲೂ ಲಜ್ಜೆಯಿಂದಲೂ, ತಾನು ಇನ್ನು ಜೀವಿಸಬಾರದೆಂದು ಪ್ರಾಣತ್ಯಾಗಕ್ಕೆ ಉದ್ಯುಕ್ತಳಾಗಿ ಬಾಗಿಲಲ್ಲಿ ಒಣಗದೆ ಇದ್ದ ಕಮಲಮಾಲಿಕೆಯನ್ನು ಧರಿಸಿಕೊಂಡು ಒಂದು ವನ ಪ್ರದೇಶಕ್ಕೆ ಬಂದುಬಿಟ್ಟಳು. ಆ ವನದ ಅಧಿಪತಿಯಾದ ಸ್ಥೂಣಾಕರ್ಣನೆಂಬ ಯಕ್ಷನು, ಈ ಶಿಖಂಡಿಯನ್ನು ನೋಡಿ, "ನಿನ್ನ ಇಷ್ಟಾರ್ಥವೇನು? ಏತಕ್ಕಾಗಿ ಹೀಗೆ ದುಃಖಿಸುತ್ತಿರುವೆ?" ಎಂದು ಪ್ರಶ್ನೆಮಾಡಿದನು. ಅದಕ್ಕೆ ಶಿಖಂಡಿಯು ತನ್ನ ವಿಷಯವೆಲ್ಲವನ್ನೂ ಆತನಿಗೆ ತಿಳಿಸಿ, "ಯಕ್ಷ ರಾಜಾ, ನಿನಗೆ ನನ್ನಲ್ಲಿ ದಯೆಯಿದ್ದರೆ, ದಶಾರ್ಣದೇಶಾಧಿಪತಿಯಾದ ಹಿರಣ್ಯವರ್ಮನು ನಮ್ಮ ತಂದೆಯಮೇಲೆ ದಂಡೆತ್ತಿ ಬರುವುದರೊಳ ಗಾಗಿ ನನಗೆ ನೀನು ಪುರುಷತ್ವವನ್ನು ಕೊಟ್ಟು ನಮ್ಮೆಲ್ಲರ ಪ್ರಾಣ ಗಳನ್ನೂ ಕಾಪಾಡಬೇಕು," ಎಂದು ಪ್ರಾರ್ಥಿಸಿಕೊಂಡಳು. ಆಗ ಕನಿಕರದಿಂದ ಕರಗಿ, ಸ್ಥೂಣಾಕರ್ಣನು "ಶಿಖಂಡೀ, ನಾನು ಕಾಮ ರೂಪಿಯು; ಕೆಲವು ದಿನಗಳ ಮಟ್ಟಿಗೆ ನನ್ನ ಪುರುಷತ್ವವನ್ನು ನಿನಗೆ ಕೊಟ್ಟು, ನಿನ್ನ ಸ್ತ್ರೀತ್ವವನ್ನು ನಾನು ತೆಗೆದುಕೊಂಡಿರುತ್ತೇನೆ. ಹಿರಣ್ಯ ವರ್ಮರಾಯನಿಂದ ನಿಮಗೆ ಅಪಾಯವು ತಪ್ಪಿದ ಕೂಡಲೇ ನೀನು ಪುನಃ ಬಂದು ನನ್ನ ಪುರುಷತ್ವವನ್ನು ನನಗೆ ಕೊಟ್ಟು ಮತ್ತೆ ನೀನು ಸ್ತ್ರೀಯಾಗಿ ಹಿಂದಕ್ಕೆ ಹೋಗಬೇಕು. ಇಷ್ಟು ಉಪಕಾರವನ್ನು ಮಾತ್ರ ನಾನು ನಿನಗೆ ಮಾಡಬಲ್ಲೆನು. ಇದು ನಿನಗೆ ಸಂಮತವಾದರೆ ಹೇಳು," ಎಂದನು. ಅದಕ್ಕೆ ಶಿಖಂಡಿಯು ಬಹಳ ಸಂತೋಷಪಟ್ಟು "ಯಕ್ಷರಾಜಾ! ನನಗೆ ಇದು ಸಂಮತವು. ನಿನ್ನ ಉಪಕಾರವನ್ನು ನಾನೆಂದಿಗೂ ಮರೆಯಲಾರೆನು. ದಶಾರ್ಣಾಧಿಪತಿಯ ಭಯವು ನಮಗೆ ತಪ್ಪಿದ ಒಡನೆಯೇ ನಾನು ಮತ್ತೆ ಇಲ್ಲಿಗೆ ಬಂದು ನಿನ್ನ ಪುರುಷತ್ವವನ್ನು ನಿನಗೆ ಕೊಡುವೆನು," ಎಂದುಹೇಳಿ ಪುರುಷತ್ವವನ್ನು ಪಡೆದು ಪಟ್ಟಣಕ್ಕೆ ಹಿಂದಿರುಗಿದಳು. ಶಿಖಂಡಿಯು ಪುರುಷತ್ವವನ್ನು ಪಡೆದು ಬಂದುದನ್ನು ದ್ರುಪದರಾಜನು ತಿಳಿದು ಬಹಳ ಸಂತೋಷಪಟ್ಟು, ತಾನು ದಶಾರ್ಣ ರಾಜನಿಗೆ ವಂಚನೆ ಮಾಡಿಲ್ಲವೆಂತಲೂ, ಬೇಕಾದರೆ ಶಿಖಂಡಿಯು ಪುರುಷನೆಂಬುದನ್ನು ಪರೀಕ್ಷೆಯಿಂದ ತಿಳಿದು ಕೊಳ್ಳಬಹುದೆಂತಲೂ ಹಿರಣ್ಯವರ್ಮನಿಗೆ ಹೇಳಿ ಕಳುಹಿಸಿದನು. ಅದರಂತೆ ಪರೀಕ್ಷೆಯ ಮೂಲಕ

ಶಿಖಂಡಿಯು ಪುರುಷನೆಂಬುದು ವ್ಯಕ್ತವಾಗಲು, ಹಿರಣ್ಯವರ್ಮನು ಸಂತೋಷದಿಂದ ದ್ರುಪದರಾಜನ ಬಳಿಗೆ ಬಂದು ಸತ್ಕೃತನಾಗಿ, ಅಳಿಯನಿಗೆ ಆನೆ ಕುದುರೆಗಳೇ ಮೊದಲಾದ ಬಳುವಳಿಯನ್ನು ಕೊಟ್ಟು ತನ್ನ ರಾಜಧಾನಿಗೆ ಹಿಂದಿರುಗಿದನು. ಇತ್ತ ಶಿಖಂಡಿಯು ಯಕ್ಷನಿಗೆ ಪುರುಷತ್ವವನ್ನು ಹಿಂದಕ್ಕೆ ಕೊಡಲು ವನಕ್ಕೆ ಹಿಂದಿರುಗುವುದರೊಳಗಾಗಿಯೇ, ಒಂದು ದಿನ ಕುಬೇರನು ಬಂದು ಸ್ತ್ರೀ ರೂಪದಿಂದಿದ್ದ ಸ್ಥೂಣಾಕರ್ಣನನ್ನು ನೋಡಿ, ಆಶ್ಚರ್ಯಪಟ್ಟು ವಿಚಾರವೇನೆಂದು ಕೇಳಿದನು. ಅದಕ್ಕೆ ಸ್ಥೂಣಾಕರ್ಣನು ಶಿಖಂಡಿಗೆ ತಾನು ಮಾಡಿದ ಸಹಾಯನ್ನು ವಿವರವಾಗಿ ಹೇಳಲು, ಕುಬೇರನು ಕೋಪಿಸಿ, "ಛೀ! ಅಯೋಗ್ಯ! ಪಾಪಫಲವಾದ ಸ್ತ್ರೀತ್ವವನ್ನು ನೀನು ಸ್ವೀಕರಿಸಿ ಪುರುಷತ್ವವನ್ನು ಕೊಟ್ಟುದರಿಂದ, ಇನ್ನುಮುಂದೆ ನಿನಗೆ ಇದೇ ಸ್ತ್ರೀತ್ವವು ಸ್ಥಿರವಾಗಿರಲಿ; ಶಿಖಂಡಿಯು ಪುರುಷನಾಗಿಯೇ ಇರಲಿ," ಎಂದು ಶಪಿಸಿ ಹೊರಟು ಹೋದನು. ಅನಂತರ ವಾಗ್ದಾನದಂತೆ ಶಿಖಂಡಿಯು ಬಂದು ಪುರುಷತ್ವವನ್ನು ಹಿಂದಕ್ಕೆ ತೆಗೆದುಕೊಳ್ಳಬಹುದೆಂದು ಸ್ತ್ರೀ ರೂಪದಿಂದಿದ್ದ ಸ್ಥೂಣಾಕರ್ಣನಿಗೆ ಹೇಳಲು, ಕುಬೇರನ ಶಾಪದಿಂದ ಸಾಧ್ಯವಿಲ್ಲವೆಂಬ ಉತ್ತರವು ಬಂತು. ಆಗ ಶಿಖಂಡಿಯು ತನಗೆ ಪುರುಷತ್ವವೇ ಸ್ಥಿರವಾಯಿತೆಂದು ಸಂತೋಷಪಟ್ಟು, ನಮಸ್ಕರಿಸಿ, ಪಟ್ಟಣಕ್ಕೆ ಬಂದು ವಿಚಾರವನ್ನು ತಂದೆತಾಯಿಗಳಿಗೆ ತಿಳಿಸಲು, ಅವರು ಪರಮೇಶ್ವರನ ವರವು ತಮಗೆ ಸಂಪೂರ್ಣವಾಗಿ ಫಲಿಸಿತೆಂದು ಅತ್ಯಾನಂದಪಟ್ಟರು. ಅನಂತರ ಶಿಖಂಡಿಯು ಧನುರ್ವಿದ್ಯಾಭ್ಯಾಸಮಾಡಿ ಮಹಾವೀರನಾದನು. ಈ ವಿಚಾರವೆಲ್ಲವನ್ನೂ ಗೂಢಚಾರರ ಮುಖದಿಂದ ಭೀಷ್ಮನು ವಿವರವಾಗಿ ತಿಳಿದುಕೊಂಡಿದ್ದನು. ಅನಂತರ ಮಹಾಭಾರತ ಯುದ್ಧದಲ್ಲಿ ಅರ್ಜುನನು ಈ ಶಿಖಂಡಿಯನ್ನು ತನ್ನ ರಥದಲ್ಲಿ ಮುಂದಿಟ್ಟುಕೊಂಡು ಭೀಷ್ಮನೊಡನೆ ಯುದ್ಧಕ್ಕೆ ಬರಲು ಸ್ತ್ರೀಯಾಗಿ ಹುಟ್ಟಿ ಪುರುಷನಾದ ನಪುಂಸಕನ ಎದುರಾಗಿ ನಿಂತು ತಾನು ಯುದ್ಧಮಾಡುವುದಿಲ್ಲವೆಂದು ಭೀಷ್ಮನು ತಟಸ್ಥನಾದನು. ಆಗ ಅರ್ಜುನನು ತೀಕ್ಷ್ಣ ಬಾಣದಿಂದ ಭೀಷ್ಮನನ್ನು ಹೊಡೆದು ಜಯಶೀಲನಾದನು. ಭೀಷ್ಮನ ಪತನದಿಂದ ಶಿಖಂಡಿಗೆ ಬಹಳ ಸಂತೋಷವಾಯಿತು. ಭೀಷ್ಮನು ತನ್ನ ಶರೀರಕ್ಕೆ

ಚುಚ್ಚಿಕೊಂಡಿದ್ದ ಬಾಣವನ್ನು ಕಿತ್ತು, "ಇದು ಅರ್ಜುನನ ಬಾಣವು, ಶಿಖಂಡಿಯದಲ್ಲ," ಎಂದು ಹೇಳಿ ಶರತಲ್ಪದಲ್ಲಿ ಮಲಗಿದನು.

## ಅಧ್ಯಾಯ ೫

## ಧೃತರಾಷ್ಟ್ರ, ಪಾಂಡು ಮತ್ತು ವಿದುರ

ವೇದವ್ಯಾಸ ಮಹಾ ಮುನಿಯ ಅನುಗ್ರಹದಿಂದ, ವಿಚಿತ್ರವೀರ್ಯನ ಪತ್ನಿಯರಾದ ಅಂಬಿಕೆ ಅಂಬಾಲಿಕೆಯರ ಗರ್ಭಗಳಲ್ಲಿ ಧೃತರಾಷ್ಟ್ರ ಮತ್ತು ಪಾಂಡು ಎಂಬ ಪುತ್ರರೂ, ಅಂಬಿಕೆಯ ದಾಸಿಯ ಉದರದಲ್ಲಿ ವಿದುರನೆಂಬ ಮಗನೂ ಜನಿಸಿದರು. ಭೀಷ್ಮನು ಈ ಮಕ್ಕಳನ್ನು ತನ್ನ ಮಕ್ಕಳಂತೆಯೇ ಅತಿ ಪ್ರೀತಿಯಿಂದ ಕಾಪಾಡುತ್ತಿದ್ದನು. ಇವರಲ್ಲಿ ಹಿರಿಯವನಾದ ಧೃತರಾಷ್ಟ್ರನು ಹುಟ್ಟು ಕುರುಡನು. ಆದರೂ ಇವನಿಗೆ ಹತ್ತು ಸಾವಿರ ಆನೆಗಳ ಬಲವೂ ಅದ್ಭುತವಾದ ಬುದ್ಧಿಶಕ್ತಿಯೂ ಅದೃಷ್ಟವೂ ಇದ್ದವು. ಇವನ ತಮ್ಮನಾದ ಪಾಂಡುವು ವಿವರ್ಣವಾಗಿ ಬಿಳಿಚಿಕೊಂಡಿದ್ದನು. ಆದರಿಂದಲೇ ಅವನನ್ನು ವೇದವ್ಯಾಸರ ಇಷ್ಟದಂತೆ ಪಾಂಡು (ಬೆಳ್ಳಗಿರುವನು) ಎಂದೇ ಕರೆದರು. ಆದರೂ ಈ ಪಾಂಡುವು ಸರ್ವ ಲಕ್ಷಣ ಸಂಪನ್ನನಾಗಿಯೂ, ಮಹಾ ತೇಜಸ್ವಿಯಾಗಿಯೂ ಇದ್ದನು. ಮೂರನೆಯವನಾದ ವಿದುರನೆಂಬ ದಾಸೀಪುತ್ರನು, ಕೋಪವನ್ನೇ ಅರಿಯದಂತಹ ಪರಮ ಶಾಂತನೂ ನಿರಾಶಾಚಿತ್ತನೂ ಆಗಿದ್ದನು. ಇವನನ್ನು ಧರ್ಮದೇವತೆಯ ಅವತಾರವೆಂದು ಹೇಳುವರು.

ಈ ಮೂರು ಮಂದಿಗೂ ಭೀಷ್ಮನು ಕಾಲೋಚಿತವಾದ ಕರ್ಮಗಳನ್ನು ನಡೆಯಿಸಿ, ಅವರಿಗೆ ಶಾಸ್ತ್ರವಿದ್ಯೆ ಶಸ್ತ್ರವಿದ್ಯೆ ಮೊದಲಾದವುಗಳನ್ನು ಕ್ರಮವಾಗಿ ಅಭ್ಯಾಸಮಾಡಿಸಿ, ಅವರನ್ನು ಯಥೋಚಿತವಾಗಿ ವೇದ ವೇದಾಂಗ ಶಾಸ್ತ್ರಪುರಾಣೇತಿಹಾಸಗಳಲ್ಲಿ ಕೋವಿದರನ್ನಾಗಿಯೂ, ಅಸ್ತ್ರಯುದ್ಧ, ಶಸ್ತ್ರಯುದ್ಧ, ಮಲ್ಲಯುದ್ಧ, ಮೊದಲಾದವುಗಳಲ್ಲಿ ಪಾರಂಗತರನ್ನಾಗಿಯೂ ಮಾಡಿದನು. ಇವರಲ್ಲಿ ಪಾಂಡುವು ಧನುರ್ವಿದ್ಯೆಯಲ್ಲಿಯೂ ಧೃತರಾಷ್ಟ್ರನು ದೇಹಶಕ್ತಿಯಲ್ಲಿಯೂ ಅದ್ವಿತೀಯರೆನಿಸಿದರು. ವಿದುರನಾದರೋ ದೈವಭಕ್ತಿ ನಯ ನೀತಿ ಧರ್ಮಜ್ಞಾನಗಳಲ್ಲಿ

ಸಮಾನರಹಿತನೆನಿಸಿದನು. ಹೀಗೆ ಈ ಮೂರು ಮಂದಿಯೂ ತೇಜಸ್ವಿಗಳಾಗಿ ವೃದ್ಧಿ ಹೊಂದುತ್ತಿರಲು, ರಾಜ್ಯವೆಲ್ಲವೂ ಸುವೃಷ್ಟಿಯಿಂದ ಫಲಿಸಿ ಜನರು ಸದಾ ಸಂತೋಷಭರಿತರಾಗಿದ್ದರು.

ವಿಚಿತ್ರವೀರ್ಯನ ತರುವಾಯ ಭೀಷ್ಮನು ರಾಜ್ಯಭಾರವಮಾಡುತ್ತ ಹಸ್ತಿನಾಪುರದಲ್ಲಿ ಆಳುತ್ತಿದ್ದನು. ಪ್ರಾಪ್ತವಯಸ್ಕರಾದ ಧೃತರಾಷ್ಟ್ರ ಪಾಂಡು ಮತ್ತು ವಿದುರರಲ್ಲಿ, ಧೃತರಾಷ್ಟ್ರನು ಜಾತ್ಯಂಧನಾಗಿಯೂ, ವಿದುರನು ದಾಸಿಯ ಪುತ್ರನಾಗಿಯೂ ಇದ್ದುದರಿಂದ ಹಸ್ತಿನಾಪುರದ ರಾಜ್ಯಕ್ಕೆ ಪಾಂಡುವೇ ರಾಜನಾದನು. ಈತನು ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತ ಜನರ ಅನುರಾಗವನ್ನು ಸಂಪಾದಿಸಿದ್ದನು.

ಆಗ ಭೀಷ್ಮನು ಗಾಂಧಾರ ದೇಶದ ಅರಸನಾದ ಸುಬಲ ಮಹಾರಾಜನ ಪುತ್ರಿಯಾದ ಗಾಂಧಾರಿಯು ಅತಿಶಯ ರೂಪಲಾವಣ್ಯದಿಂದಲೂ, ಸೌಶೀಲ್ಯದಿಂದಲೂ, ಕಲಾಭಿವೃದ್ಧಿಯಿಂದಲೂ ಪ್ರಕಾಶಿಸುತ್ತಿರುವಳೆಂದು ಕೇಳಿ, ವಿದುರನೊಡನೆ ಆಲೋಚಿಸಿ, ಆ ಗಾಂಧಾರಿಯನ್ನು ತಂದು ಪ್ರಾಪ್ತವಯಸ್ಕನಾಗಿದ್ದ ಧೃತರಾಷ್ಟ್ರನಿಗೆ ವೈಭವದಿಂದ ವಿವಾಹ ಮಾಡಿದನು. ಧೃತರಾಷ್ಟ್ರನು ದೃಷ್ಟಿಹೀನನಾದರೂ, ಗಾಂಧಾರಿಯು, ತಂದೆಯ ಮಾತನ್ನು ಗೌರವಿಸಿ, ಧೃತರಾಷ್ಟ್ರನೇ ತನಗೆ ಪತಿಯೆಂದು ನಿಶ್ಚಯಿಸಿ, ಆತನನ್ನು ವರಿಸಿದುದಲ್ಲದೆ, ಆತನು ಅಂಧನಾಗಿರುವಾಗ ತಾನು ದೃಷ್ಟಿಯುಳ್ಳವಳಾಗಿ ಆತನಿಗಿಂತಲೂ ಅತಿಶಯ ಸುಖದಿಂದಿರಲೊಲ್ಲೆನೆಂತಲೂ, ತನಗೆ ಪರ ಪುರುಷನ ದರ್ಶನವೇ ಬೇಡವೆಂತಲೂ ನೇತ್ರ ಪಟ್ಟವನ್ನು ಕಟ್ಟಿಕೊಂಡು, ಪರಮ ಪತಿವ್ರತೆಯೆನಿಸಿ, ಶೀಲ ಸುಗುಣ ಸಂಪನ್ನಳಾಗಿ ಎಲ್ಲರ ಮೆಚ್ಚಿಕೆಗೂ ಪಾತ್ರಳಾಗಿದ್ದಳು.

## ಕುಂತೀದೇವಿ

ಯಾದವ ಕುಲಶ್ರೇಷ್ಠನೂ ಶ್ರೀ ಕೃಷ್ಣನ ತಾತನೂ ಆದ ಶೂರನೆಂಬಾತನಿಗೆ ಪೃಥೆಯೆಂಬ ಒಬ್ಬ ಮಗಳಿದ್ದಳು. ಇವಳು ಪರಮ ಸೌಂದರ್ಯವತಿಯಾಗಿಯೂ, ಸುಗುಣಗಾಂಭೀರ್ಯ ಸೌಶೀಲ್ಯಗಳಿಂದ ಕೂಡಿದವಳಾಗಿಯೂ ಜನರ ಮೆಚ್ಚಿಕೆಯನ್ನು ಪಡೆದಿದ್ದಳು. ತನ್ನ ಸೋದರತ್ತೆಯ ಮಗನಾದ ಕುಂತಿಭೋಜನಿಗೆ ಸಂತಾನವಿಲ್ಲದಿದ್ದ ಕಾರಣ

ಶೂರನು ತನ್ನ ಸೀಮಂತ ಪುತ್ರಿಯಾದ ಪೃಥೆಯನ್ನು ಆತನಿಗೆ ಸ್ವೀಕೃತ ಪುತ್ರಿಯಾಗಿ ಕೊಟ್ಟನು. ಅನಂತರ ಅವಳು ಕುಂತಿಭೋಜನ ಪುತ್ರಿಯಾದುದರಿಂದ ಎಲ್ಲರೂ ಅವಳನ್ನು "ಕುಂತಿ" ಎಂದೇ ಕರೆಯುತ್ತ ಬರಲು ಅದೇ ಹೆಸರೇ ಪೃಥಾದೇವಿಗೆ ಸ್ಥಿರವಾಯಿತು.

ಕುಂತಿ ಇನ್ನೂ ಕನ್ಯೆಯಾಗಿದ್ದ ಕಾಲದಲ್ಲಿ ಒಂದಾನೊಂದು ದಿನ **ದುರ್ವಾಸಮಹರ್ಷಿಯು** ಕುಂತಿಭೋಜನ ಮನೆಗೆ ಅತಿಥಿಯಾಗಿ ಬಂದನು. ಒಂದು ವರ್ಷಕಾಲ ಅಲ್ಲಿಯೇ ನಿಂತ ಆ ಮುನಿಗೆ ಕುಂತಿಯು ಬಹಳ ತಾಳ್ಮೆಯಿಂದಲೂ ಶ್ರದ್ಧೆಯಿಂದಲೂ ಸೇವೆ ಮಾಡಿ ಪೂಜಿಸಿದಳು. ಆಗ ಆ ಮಹರ್ಷಿಯು ಕುಂತಿಯ ಭಕ್ತಿ ಸೇವೆಗಳಿಗತ್ಯಂತ ಸಂತೋಷ ಪಟ್ಟು, ಇವಳ ಭವಿಷ್ಯವನ್ನು ಕುರಿತು ಜ್ಞಾನದೃಷ್ಟಿಯಿಂದ ನೋಡಲು, ಮುಂದೆ ಇವಳ ಗಂಡನಿಗೆ ವಿಪತ್ತೊದಗುವುದೆಂದು ಆತನಿಗೆ ಗೋಚರ ವಾಯಿತು. ಆದರಿಂದ, ಅವಳನ್ನು ನೋಡಿ ಆ ಮುನಿಯು, "ಕುಂತೀ ದೇವೀ, ನಾನು ನಿನಗೆ ಈಗ ಒಂದು ಮಹಾಮಂತ್ರವನ್ನುಪದೇಶಿಸುವೆನು. ಅದನ್ನು ನೀನು ಭಕ್ತಿಯಿಂದ ಜಪಿಸು. ಉಚ್ಚರಿಸಿ ನೀನು ಯಾವ ದೇವತೆಯನ್ನು ಸ್ಮರಿಸುವೆಯೋ ಆ ದೇವತೆಯು ಪ್ರತ್ಯಕ್ಷವಾಗಿ, ತನ್ನ ತೇಜೋ ಮಹಿಮೆಯಿಂದ ಕೂಡಿದ ಒಬ್ಬ ಪುತ್ರನನ್ನು ನಿನಗೆ ಅನುಗ್ರಹಿಸುವನು," ಎಂಬುದಾಗಿ ಹೇಳಿ, ಒಂದು ದಿವ್ಯ ಮಂತ್ರವನ್ನುಪದೇಶಿಸಿ, ವರವನ್ನು ಕೊಟ್ಟುಹೋದನು.

ಅನಂತರ ಈ ಮಂತ್ರವನ್ನು ನಿತ್ಯವೂ ಜಪಿಸುತ್ತಿದ್ದ ಕುಂತೀ ದೇವಿಯು ಒಂದು ದಿನ, ನದಿಗೆ ಹೋಗಿದ್ದಾಗ ಆ ಮಂತ್ರದ ಮಹಿಮೆಯನ್ನು ಪರೀಕ್ಷಿಸಬೇಕೆಂಬ ಕುತೂಹಲದಿಂದ, ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿದ್ದ ಸೂರ್ಯದೇವನಿಗೆ ಕೈಮುಗಿದು ಮಂತ್ರೋಚ್ಚಾರಣೆ ಮಾಡಿದಳು. ಆ ಕೂಡಲೇ ಸೂರ್ಯದೇವನು ತನ್ನ ತೀಕ್ಷ್ಣ ತೇಜಸ್ಸನ್ನು ಶಾಂತ ಮಾಡಿಕೊಂಡು, ಸುಂದರ ಪುರುಷನಾಗಿ ಅಂತರಿಕ್ಷದಿಂದಿಳಿದು ಕುಂತಿಯ ಬಳಿಗೆ ಬಂದು ನಿಂತನು. ಆ ಕನ್ಯೆಯು ಆ ಮಹಾ ತೇಜೋರೂಪವನ್ನು ನೋಡಿ, ಬಹು ಭಯಗ್ರಸ್ತಳಾಗಿ ಗಡಗಡನೆ ನಡುಗುತ್ತ, ಪರಮಾಶ್ಚರ್ಯದಿಂದ ಕೈಮುಗಿದು, "ದೇವಾ! ನೀನು ಯಾರು?" ಎಂದು ಪ್ರಶ್ನೆಮಾಡಲು, ಸೂರ್ಯನು, "ಎಲೌ ಪ್ರಿಯ ಕುಂತೀದೇವೀ! ನಾನು

ಜಗಚ್ಚಕ್ಷುವಾದ ಮಾರ್ತಾಂಡನು. ನೀನು ಮಂತ್ರೋಚ್ಚಾರಣೆ ಮಾಡಿ ನನ್ನನ್ನು ಕರೆದುದರಿಂದ ನಿನಗೆ ಪ್ರಸನ್ನನಾಗಿ ಪುತ್ರವರವನ್ನು ಅನುಗ್ರಹಿಸಲು ಬಂದಿರುವೆನು," ಎಂದನು. ಆಗ ಕುಂತಿಯು ಹೆದರಿ, "ದೇವಾ! ನಾನು ತಂದೆಯಾಜ್ಞೆಯಲ್ಲಿರುವ ಕನ್ಯೆಯು. ದುರ್ವಾಸರು ಉಪದೇಶಿಸಿದ ಮಂತ್ರದ ಮಹಿಮೆಯನ್ನು ಪರೀಕ್ಷಿಸಲು ಆ ರೀತಿ ನಿನ್ನನ್ನು ಧ್ಯಾನಿಸಿದೆನು. ನಿನ್ನನ್ನು ಇಷ್ಟು ದೂರ ಬರಮಾಡಿದ ನನ್ನ ಅವಜ್ಞತೆಯನ್ನೂ ಅಪರಾಧವನ್ನೂ ದಯೆಯಿಟ್ಟು ಕ್ಷಮಿಸಿ ಕಾಪಾಡಬೇಕು," ಎಂಬದಾಗಿ ಪ್ರಾರ್ಥಿಸಿಕೊಂಡಳು. ಅದಕ್ಕೆ ಸೂರ್ಯದೇವನು, "ಕುಂತೀದೇವೀ, ನೀನು ಹೆದರಬೇಡ. ನನ್ನ ಆಗಮನವು ವ್ಯರ್ಥವಾಗಲಾರದು. ನೀನು ಈ ನನ್ನ ಅನುಗ್ರಹದಿಂದ ತೇಜಸ್ವಿಯಾದ ಪುತ್ರನೊಬ್ಬನನ್ನು ಪಡೆಯುವೆ. ಆದರೂ ನೀನು ಕನ್ಯೆಯಾಗಿಯೇ ಇರುವೆ. ನಿನಗೆ ಸದ್ಯೋಗರ್ಭದಿಂದ ಈಗಲೇ ಪುತ್ರನು ಜನಿಸಲಿ," ಎಂದು ವರವನ್ನನುಗ್ರಹಿಸಿ ಹೊರಟುಹೋದನು. ಆ ಕೂಡಲೇ ಕುಂತಿಗೆ, ದಿವ್ಯ ಕವಚ ಕುಂಡಲಗಳನ್ನು ಧರಿಸಿ, ಸೂರ್ಯನಂತೆ ತೇಜಃಪ್ರಕಾಶದಿಂದಿರುವ ಸುಂದರ ಪುತ್ರನೊಬ್ಬನು ಹುಟ್ಟಿದನು.

ಆಗ ಕುಂತಿಯು ಏನುಮಾಡುವುದಕ್ಕೂ ತೋರದೆ ಚಿಂತಾಕ್ರಾಂತಳಾಗಿ, "ಅಯ್ಯೋ! ದುರ್ವಾಸ ಮುನಿಗಳು ನನಗೇತಕ್ಕೆ ಆ ಮಂತ್ರವನ್ನುಪದೇಶಿಸಿದರು? ನಾನೇತಕ್ಕೆ ಅದನ್ನು ಪರೀಕ್ಷಿಸಲು ಯತ್ನಿಸಿದೆನು! ಈ ಮಗುವನ್ನು ನಾನೆತ್ತಿಕೊಂಡು ಮನೆಗೆ ಹೋದರೆ ನನ್ನ ತಂದೆಯೂ ಬಂಧುಮಿತ್ರರೂ ಜನರೂ ಏನಂದಾರು? ಅಯ್ಯೋ! ದೈವವೇ ಈಗ ನಾನೇನು ಮಾಡಲಿ?" ಎಂದು ಬಹಳವಾಗಿ ವ್ಯಥೆಪಡುತ್ತ ನಿಂತಳು. ಆಗ ಅವಳ ಪುಣ್ಯದಿಂದ ಸೂರ್ಯದೇವನ ಸಂಕಲ್ಪದಂತೆ ಅನರ್ಘ ರತ್ನಖಚಿತವಾದ ಬಂಗಾರದ ಪೆಟ್ಟಿಗೆಯೊಂದು ನದಿಯ ಪ್ರವಾಹದಲ್ಲಿ ತೇಲಿಕೊಂಡು ಬಳಿಗೆ ಬಂತು. ಆಗ ಕುಂತಿಯು ತನ್ನ ಮಗುವನ್ನು ಆ ಪೆಟ್ಟಿಗೆಯಲ್ಲಿ ಮುಚ್ಚಿಡಲು, ಅದು ನದೀತರಂಗಗಳ ತೇಲಿಕೊಂಡು ಮುಂದಕ್ಕೆ ಹೊರಟು ಹೋಯಿತು. ಕುಂತಿಯು ಮನೆ ಹಿಂದಿರುಗಿದಳು. ಮಗುವಿದ್ದ ಪೆಟ್ಟಿಗೆಯು ಹೊಳೆಯಲ್ಲಿ ತೇಲಿಕೊಂ ಬರುತ್ತ, ಧೃತರಾಷ್ಟ್ರನ ಸಾರಥಿಯಾದ ಅತಿರಥನೆಂಬುವನ ಕೈಗೆ ಸಿಕ್ಕಿ

ಅವನು ಆದನ್ನು ತೆಗೆದು ನೋಡಿ ಬಹಳ ಸಂತೋಷ ಪಟ್ಟು, ತೇಜೋ ವಿಶೇಷದಿಂದ ಪ್ರಕಾಶಿಸುತ್ತಿದ್ದ ಆ ಮಗುವನ್ನು ತನ್ನ ಪತ್ನಿಯಾದ ರಾಧೆ ಯೆಂಬುವಳಿಗೆ ಕೊಟ್ಟನು. ಸ್ವಾಭಾವಿಕವಾಗಿ ಕವಚ ಕುಂಡಲಗಳನ್ನು ಧರಿಸಿದ್ದ ಈ ಸುಂದರ ಶಿಶುವನ್ನು ನೋಡಿ ಮಕ್ಕಳಿಲ್ಲದಿದ್ದ ಆ ದಂಪತಿಗಳು ಅತ್ಯಂತ ಸಂತೋಷ ಪಟ್ಟು, ಅದನ್ನು ಅತ್ಯಂತ ಪ್ರೀತಿಯಿಂದ ಸಾಕುತ್ತ ಬಂದರು. ಅಲ್ಲದೆ, ಹುಟ್ಟುತ್ತಲೇ ದಿವ್ಯ ಕವಚ ಕುಂಡಲಗಳಿಂದ ಪ್ರಕಾಶಿ ಸುತ್ತಿದ್ದ ಇವನಿಗೆ ವಸುಸೇನನೆಂಬದಾಗಿ ಹೆಸರಿಟ್ಟರು. ರಾಧೆಯಿಂದ ಸಾಕಲ್ಪಟ್ಟ ಇವನಿಗೆ ರಾಧೇಯನೆಂದೂ ಹೆಸರಾಯಿತು. ಇವನು ವಯ ಸ್ಸಾಗುತ್ತ ಪ್ರಬಲ ಬಲಶಾಲಿಯಾಗಿ ಸಮಸ್ತ ಶಸ್ತ್ರಾಸ್ತ್ರಪ್ರಯೋಗ ಗಳನ್ನೂ, ಧೃತರಾಷ್ಟ್ರನ ಪುತ್ರರ ಜೊತೆಯಲ್ಲಿ ದ್ರೋಣಾಚಾರ್ಯರಿಂದ ಕಲಿತನು. ಇವನಿಗೆ ಬಾಲ್ಯದಿಂದಲೂ ಸೂರ್ಯದೇವನಲ್ಲಿ ಪರಮಭಕ್ತಿ ಯಿದ್ದುದರಿಂದ ಇವನು ಸೂರ್ಯಾರಾಧನ ತತ್ಪರನಾಗಿ, ಯಾಚಿಸಿದವರಿಗೆ ಏನನ್ನು ಬೇಕಾದರೂ ಕೊಡುವ ಉದಾರಿಯಾಗಿದ್ದನು. ಒಂದಾನೊಂದು ದಿನ ದೇವೇಂದ್ರನು, ತನ್ನ ಪುತ್ರನಾದ ಅರ್ಜುನನಿಗೆ ಇವನು ಶತ್ರು ವಾಗುವನೆಂದು ತಿಳಿದು, ಬ್ರಾಹ್ಮಣ ರೂಪವನ್ನು ಧರಿಸಿಬಂದು, ಇವನಲ್ಲಿ ಭಿಕ್ಷೆಯನ್ನು ಯಾಚಿಸಿದನು. ವಸುಸೇನನು ಆ ಬ್ರಾಹ್ಮಣನಿಗೆ ಭಕ್ತಿ ಯಿಂದ ಕೈಮುಗಿದು ಆತನ ಅಪೇಕ್ಷೆಯಂತೆ, ತನ್ನ ದೇಹದ ಭಾಗವಾಗಿದ್ದ ಸುವರ್ಣ ಕವಚವನ್ನು ಕೊಯ್ದು ಕೊಟ್ಟುಬಿಟ್ಟನು. ದೇವೇಂದ್ರನು ಇವನ ಈ ಔದಾರ್ಯದಿಂದ ಅತ್ಯಂತ ಸಂತೋಷ ಪಟ್ಟು, ಇವನಿಗೆ ದಿವ್ಯಾಸ್ತ್ರವೊಂದನ್ನು ಅನುಗ್ರಹಿಸಿ ಕೊಟ್ಟು, "ವೀರವರ್ಯಾ, ದೇವಾಸುರ ಗಂಧರ್ವ ನಾಗ ಪ್ರಮುಖರಲ್ಲಿ ನೀನು ಯಾರನ್ನು ಜಯಿಸಬೇಕೆಂದು ಇಚ್ಛೆಪಟ್ಟರೂ, ಈ ಅಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿದರೆ ಇದು ಅವರನ್ನು ತಪ್ಪದೆ ಸಂಹರಿಸುವುದು," ಎಂಬದಾಗಿ ಹೇಳಿ ಹೊರಟು ಹೋದನು. ಹೀಗೆ ಕವಚವನ್ನು ಕತ್ತರಿಸಿ ದಾನಮಾಡಿದ ಇವನಿಗೆ, ಅದು ಮೊದಲಾಗಿ "ಕರ್ಣ" (ಕತ್ತರಿಸಿ ಕೊಟ್ಟವನು) ಎಂಬ ಹೆಸ ರಾಯಿತು. ಅನಂತರ ವಸುಸೇನನೆಂಬುದಕ್ಕೆ ಪ್ರತಿಯಾಗಿ "ಕರ್ಣ" ನೆಂಬುದೇ ರೂಢಿಯಾಯಿತು.

ಇವನು ದುರ್ಯೋಧನನಿಂದ ಅಂಗದೇಶದ ರಾಜನಾಗಿ

ಮಾಡಲ್ಪಟ್ಟು, ಪರಶುರಾಮನಿಂದ ಅಸ್ತ್ರವಿದ್ಯೆಯನ್ನು ಕಲಿತು, ಮಹಾಭಾರತ ಯುದ್ಧದಲ್ಲಿ ದ್ರೋಣಾಚಾರ್ಯನನಂತರ ಮೂರು ದಿನಗಳು ಸರ್ವ ಸೈನ್ಯಾಧಿಪತ್ಯವನ್ನು ವಹಿಸಿ, ದುರ್ಯೋಧನನ ಪಕ್ಷವಾಗಿ ಅದ್ಭುತ ಶೌರ್ಯದಿಂದ ಯುದ್ಧಮಾಡಿ ಕಡೆಗೆ ಅರ್ಜುನನಿಂದ ಹತನಾದನು.

ಕುಂತೀದೇವಿಯು, ಮಗನನ್ನು ಹೆತ್ತರೂ, ಸೂರ್ಯದೇವನ ಅನುಗ್ರಹದಿಂದ ಕನ್ಯೆಯಾಗಿಯೇ ಇದ್ದಳು. ಅವಳಿಗೆ ವಿವಾಹದ ವಯಸ್ಸು ಬರಲು, ಕುಂತಿಭೋಜನು ಅವಳಿಗೆ ಸ್ವಯಂವರವನ್ನು ಏರ್ಪಡಿಸಿದನು. ಅಸಮಾನ ಸೌಂದರ್ಯವತಿಯಾದ ಕುಂತಿಯನ್ನು ವರಿಸಲು ನಾನಾ ದೇಶದ ರಾಜಕುಮಾರರು ಬಹುಮಂದಿ ಸ್ವಯಂವರಕ್ಕೆ ಬಂದರು. ಅವರುಗಳಲ್ಲಿ ಪಾಂಡುರಾಜನೂ ಒಬ್ಬನು. ಕುಂತಿಯು ವರಣಮಾಲಿಕೆಯನ್ನು ಹಿಡಿದು, ಅಲ್ಲಿ ನೆರೆದಿದ್ದ ರಾಜಕುಮಾರರನ್ನು ಒಬ್ಬೊಬ್ಬರನ್ನಾಗಿ ನೋಡುತ್ತ ಬರುವಲ್ಲಿ, ಅವರುಗಳ ನಡುವೆ, ವಿಶಾಲಾಕ್ಷನೂ ವಿಶಾಲ ವಕ್ಷಸ್ಥಲನೂ ಮಹಾ ತೇಜಸ್ಸೌಂದರ್ಯ ಪರಾಕ್ರಮಗಳಿಂದ ಕೂಡಿದವನೂ ಆಗಿ **ಭರತ ವಂಶಪ್ರದೀಪ**ನಾದ ಪಾಂಡುರಾಜನು, ಭೂಮಿಗಿಳಿತಂದ ದೇವೇಂದ್ರನಂತೆ ಅವಳಿಗೆ ಗೋಚರನಾದನು. ಆತನನ್ನು ನೋಡಿದೊಡನೆಯೇ ಕುಂತೀದೇವಿಗೆ ಬಹಳ ಸಂತೋಷವೂ ಆತನಲ್ಲಿ ಭಕ್ತಿ ಪ್ರೇಮ ಮೋಹಗಳೂ ಉಂಟಾದುದರಿಂದ ಆತನ ಕೊರಳಿಗೇ ವರಣಮಾಲಿಕೆಯನ್ನು ಹಾಕಿದಳು. ಇದರಿಂದ ನಿರಾಶರಾದ ಇತರ ರಾಜಕುಮಾರರುಗಳು ಖಿನ್ನರಾಗಿ ತಮ್ಮ ತಮ್ಮ ನಗರಗಳಿಗೆ ಹೊರಟುಹೋದರು. ಅನಂತರ ಕುಂತಿಭೋಜನು ಶಾಸ್ತ್ರೋಕ್ತವಾಗಿ ಕುಂತೀ ಪಾಂಡುರಾಜರ ವಿವಾಹಮಂಗಳವನ್ನು ನೆರವೇರಿಸಿ, ಅವರಿಗೆ ವಿಶೇಷವಾದ ಧನಕನಕವಸ್ತುವಾಹನಾದಿಗಳ ಬಳುವಳಿಯನ್ನಿತ್ತು ಮಗಳನ್ನೂ ಅಳಿಯನನ್ನೂ ಹಸ್ತಿನಾವತಿಗೆ ಪ್ರಯಾಣಮಾಡಿಸಿದನು.

ಸ್ವಲ್ಪ ಕಾಲದ ಮೇಲೆ ಭೀಷ್ಮನು, ಮದ್ರದೇಶಾಧಿಪತಿಯಾದ ಶಲ್ಯನ ತಂಗಿ ಮಾದ್ರೀದೇವಿಯನ್ನೂ ಸಹ ಪಾಂಡುರಾಜನಿಗೆ ವಿವಾಹ ಮಾಡಿಸಿದನು. ಅನಂತರ ಪಾಂಡುರಾಜನು ಪತಿವ್ರತೆಯರಾದ ಇಬ್ಬರು ಪತ್ನಿಯರಲ್ಲಿಯೂ ದಿವ್ಯ ಭೋಗಾನಂದವನ್ನು ಅನುಭವಿಸುತ್ತ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು. (ಕೇವಲ ಭೋಗ ಬುದ್ಧಿ

ಯಿಂದಲ್ಲದೆ, ಹೀಗೆ ಸಂತಾನಾರ್ಥವಾಗಿ ವಂಶಾಭಿವೃದ್ಧಿಯ ಗುರಿಯಿಂದ ಮಾತ್ರವೇ ಪತ್ನಿಯರನ್ನು ಮದುವೆಯಾಗುವುದು ಪೂರ್ವದಲ್ಲಿ ರಾಜರುಗಳ ಪದ್ಧತಿ.)

ಇದಾದ ಕೆಲವು ದಿನಗಳ ಮೇಲೆ ಪಾಂಡುರಾಜನು, ದಿಗ್ವಿಜಯಾರ್ಥವಾಗಿ ಹಸ್ತ್ಯಶ್ವರಥಪದಾತಿಗಳ ಸಹಿತವಾದ ಅಸಂಖ್ಯಾತ ಸೈನ್ಯದೊಡಗೂಡಿ, ಭೀಷ್ಮ ಧೃತರಾಷ್ಟ್ರಾದಿಗಳ ಆಶೀರ್ವಾದಗಳನ್ನು ಪಡೆದು ಹೊರಟು, ನಾನಾ ದಿಕ್ಕುಗಳ ರಾಜರುಗಳನ್ನು ಗೆದ್ದು ಶರಣಾಗತರನ್ನಾಗಿ ಮಾಡಿಕೊಂಡು, ಅಪರಿಮಿತ ಸುವರ್ಣ ರತ್ನರಾಶಿಗಳೊಡಗೂಡಿ ರಾಜಧಾನಿಗೆ ಹಿಂದಿರುಗಿದನು. ಪಾಂಡುರಾಜನು ಶೇಖರಿಸಿ ತಂದ ಅಪರಿಮಿತವಾದ ಧನದಿಂದ ಧೃತರಾಷ್ಟ್ರನು ಐದು ಮಹಾ ಯಾಗಗಳನ್ನು ಮಾಡಿ, ಬ್ರಾಹ್ಮಣರಿಗೆ ಸಾವಿರಗಟ್ಟಲೆಯಾಗಿ ಭೂರಿದಕ್ಷಿಣೆಯನ್ನು ಕೊಟ್ಟನು. ಒಂದು ನೂರು ಅಶ್ವಮೇಧ ಯಾಗಗಳಿಗೆ ಆಗುವಷ್ಟು ಹಣವನ್ನು ವೆಚ್ಚಮಾಡಿ ಧೃತರಾಷ್ಟ್ರನು ಅತ್ಯಂತ ವಿಜೃಂಭಣೆಯಿಂದ ಈ ಐದು ಯಾಗಗಳನ್ನು ಮಾಡಿದನು.

ಹೀಗೆ ದಿಗ್ವಿಜಯದಿಂದ ಪ್ರಬಲ ಪರಾಕ್ರಮಿಯೆಂಬ ಕೀರ್ತಿಯನ್ನು ಪಡೆದ ಪಾಂಡುರಾಜನು ಧರ್ಮ ಪತ್ನಿಯರಾದ ಕುಂತಿ ಮಾದ್ರಿಯರೊಡಗೂಡಿ ಆನಂದದಿಂದಿದ್ದು ಒಂದಾನೊಂದು ದಿನ ಬೇಟೆಗಾಗಿ ಅರಣ್ಯಕ್ಕೆ ಹೋದನು. ಅಲ್ಲಿ, ಪರಸ್ಪರ ಪ್ರೀತಿಯಿಂದ ಕ್ರೀಡಿಸುತ್ತಿದ್ದ ಹರಿಣದಂಪತಿಗಳನ್ನು ನೋಡಿ, ಅವುಗಳ ಮೇಲೆ ಬಾಣ ಪ್ರಯೋಗಮಾಡಿದನು. ಆಗ ಆ ಜಿಂಕೆಗಳಲ್ಲಿ ಒಂದು ತನ್ನ ಪ್ರಾಣ ಹೋಗುವಾಗ ಪಾಂಡುರಾಜನನ್ನು ಕುರಿತು, ಮನುಷ್ಯವಚನದಿಂದ, "ಎಲೈ, ಪಾತಕಿಯೇ, ನಾನು ಮಹರ್ಷಿಯು. ದಂಪತಿಗಳಾದ ನಾವಿಬ್ಬರೂ ಮೃಗಾಕೃತಿಗಳನ್ನು ಧರಿಸಿ, ಪರಸ್ಪರ ಪ್ರೇಮದಿಂದ ಕ್ರೀಡಿಸುತ್ತಿದ್ದೆವು. ನೀನು ನಮ್ಮನ್ನು ಮರಣಕ್ಕೀಡು ಮಾಡಿದೆಯಾದಕಾರಣ, ಇನ್ನು ನೀನು ನಿನ್ನ ಪತ್ನಿಯೊಡನೆ ಸೇರುವೆಯಾದರೆ, ನಿನಗೆ ಮರಣವು ಸಂಭವಿಸಲಿ," ಎಂದು ಶಪಿಸಿ ಪ್ರಾಣಬಿಟ್ಟಿತು. ಇದರಿಂದ ಅತ್ಯಂತ ಚಿಂತಾಕ್ರಾಂತನಾದ ಪಾಂಡುರಾಜನು, ತಾನಿನ್ನು ರಾಜಭೋಗಗಳನ್ನೊಲ್ಲೆನೆಂದು ವೈರಾಗ್ಯವನ್ನು ಹೊಂದಿ, ರಾಜ್ಯಭಾರವನ್ನು ಭೀಷ್ಮನಿಗೂ ವಿದುರನಿಗೂ

ಒಪ್ಪಿಸಿ, ಪತ್ನಿಯರೊಡಗೂಡಿ ಅರಣ್ಯಕ್ಕೆ ಹೋಗಿ ಅಲ್ಲಿ ಬ್ರಹ್ಮಚರ್ಯದಲ್ಲಿ ಕಾಲವನ್ನು ಕಳೆಯುತ್ತಿದ್ದನು.

ಇತ್ತ ದೇವಕನೆಂಬ ರಾಜನಿಗೆ ಶೂದ್ರಪತ್ನಿಯಲ್ಲಿ ಒಬ್ಬ ಸುಂದರ ಕುಮಾರಿಯಿದ್ದುದನ್ನು ತಿಳಿದು ಭೀಷ್ಮನು ಆ ಕನ್ಯೆಯನ್ನು ತಂದು ವಿದುರನಿಗೆ ವಿವಾಹಮಾಡಿದನು. ಅವಳ ಗರ್ಭದಲ್ಲಿ ವಿದುರನಂತೆಯೇ ವಿಶೇಷ ಪ್ರತಿಭಾಶಾಲಿಗಳಾದ ಪುತ್ರರು ಜನಿಸಿದರು.

## ಅಧ್ಯಾಯ ೬

## ಪಾಂಡವ ಕೌರವರ ಜನನ

ಇತ್ತಲಾ ಪಾಂಡುರಾಜನು, ಪುತ್ರರಿಲ್ಲದೆ, ಇನ್ನು ತನ್ನ ವಂಶವೇ ಅಂತ್ಯವಾಗುವುದೆಂಬ ಚಿಂತೆಯಿಂದಿರಲು, ಕುಂತೀದೇವಿಯು ತನ್ನ ಬಾಲ್ಯದಲ್ಲಿ, ತನಗೆ ದುರ್ವಾಸ ಮಹಾ ಮುನಿಯು ಉಪದೇಶಿಸಿದ್ದ ಮಹಾ ಮಂತ್ರದ ವಿಚಾರವನ್ನು ಹೇಳಿದಳು. ಪಾಂಡುವು ಆನಂದಭರಿತನಾಗಿ, ಆ ಮಂತ್ರದ ಅನುಷ್ಠಾನದಿಂದ ಪುತ್ರರನ್ನು ಪಡೆಯುವಂತೆ ಅಪ್ಪಣೆಕೊಟ್ಟನು. ಅದರಂತೆ ಕುಂತಿಯು ಯಮಧರ್ಮರಾಜನನ್ನು ಧ್ಯಾನಿಸಿ, ಪ್ರಾರ್ಥಿಸಲು, ಆತನ ಅನುಗ್ರಹದಿಂದ ಜ್ಯೇಷ್ಠಾನಕ್ಷತ್ರಯುಕ್ತವಾದ ಕಾರ್ತಿಕ ಶುದ್ಧ ಪಂಚಮೀ ಅಭಿಜಿನ್ಮುಹೂರ್ತದಲ್ಲಿ ಸರ್ವ ಲಕ್ಷಣ ಸಂಪನ್ನನೂ ಪ್ರಬಲತೇಜಸ್ವಿಯೂ ಆದ ಪುತ್ರನೊಬ್ಬನು ಧರ್ಮರಾಜನ ಅಂಶದಿಂದ ಜನಿಸಿದನು.

ಇದಕ್ಕೆ ಹಿಂದೆ ಒಂದಾನೊಂದು ದಿನ ಆಯಾಸಪಟ್ಟು ಹಸಿದು ಬಂದ ಶ್ರೀ ವ್ಯಾಸ ಮಹರ್ಷಿಗೆ, ಧೃತರಾಷ್ಟ್ರನ ಪತ್ನಿಯಾದ ಗಾಂಧಾರೀದೇವಿಯು, ವಿಶೇಷವಾಗಿ ಉಪಚಾರಮಾಡಿ ತೃಪ್ತಿಪಡಿಸಿದುದರಿಂದ ಆ ಮುನಿಯು ಪ್ರಸನ್ನನಾಗಿ, "ಗಾಂಧಾರಿದೇವೀ, ನಿನ್ನ ಉಪಚಾರದಿಂದ ನನಗೆ ಬಹಳ ಸಂತೋಷವಾಯಿತು. ನಿನಗೆ ನಿನ್ನ ಪತಿಯಂತೆ ಬಲಶಾಲಿಗಳಾದ ಒಂದು ನೂರು ಮಂದಿ ಪುತ್ರರಾಗಲಿ" ಎಂದು ಆಶೀರ್ವದಿಸಿದನು. ಅನಂತರ ಕೆಲವು ದಿನಗಳಲ್ಲಿ ಆಕೆಯು, ಧೃತರಾಷ್ಟ್ರನಿಂದ ಗರ್ಭವತಿಯಾದಳು. ಆದರೆ, ಆಕೆಯು ಎರಡು ವರ್ಷಗಳವರೆಗೂ ಪ್ರಸವಿಸದೆ, ಆ ಗರ್ಭವು ಹಾಗೆಯೇ ಇತ್ತು. ಅದರಿಂದ ಗಾಂಧಾರಿಯು ಬಹು ವ್ಯಸನಪಡುತ್ತಿದ್ದಳು. ಹೀಗಿರುವಲ್ಲಿ, ಪಾಂಡುರಾಜನ ಪತ್ನಿಯಾದ

ಕುಂತೀದೇವಿಯು ಬಾಲಭಾಸ್ಕರನಂತೆ ತೇಜೋಮಯನಾದ ಸುಪುತ್ರನನ್ನು ಹಡೆದಳೆಂಬವಾರ್ತೆಯು ಕಿವಿಗೆ ಬಿತ್ತು. ಇದರಿಂದ ಆಕೆಗೆ ಮನಸ್ಸಿನಲ್ಲಿ ಬಹಳ ಅಸೂಯೆಯೂ, ತನ್ನ ಗರ್ಭವು ಹೀಗೆ ಇಷ್ಟುದಿನಗಳು ಫಲವಿಲ್ಲದೆ ನಿಂತಿತೆಂಬ ವ್ಯಸನವೂ ಸಹ ಅತಿಶಯವಾದವು. ಅದರಿಂದ ವಿವೇಕಹೀನಳಾಗಿ, ಧೃತರಾಷ್ಟ್ರನಿಗೆ ತಿಳಿಯದಂತೆ ತನ್ನ ಗರ್ಭವನ್ನು ಬಲವಾಗಿ ಹಿಸುಕಿ ಹೊಡೆದುಕೊಂಡಳು. ಆಗ ಆಕೆಯ ಗರ್ಭದಿಂದ ಕಬ್ಬಿಣದ ಚೆಂಡಿನಂತೆ ಗಟ್ಟಿಯಾದ ಒಂದು ಮಾಂಸದ ತುಂಡು ಜನಿಸಿತು. ಈ ವಿಚಾರವನ್ನು ದಿವ್ಯದೃಷ್ಟಿಯಿಂದ ತಿಳಿದ ವ್ಯಾಸ ಮಹರ್ಷಿಯು ಆ ಕೂಡಲೇ ಗಾಂಧಾರಿಯ ಬಳಿಗೆ ಬಂದು, ವಿಚಾರವನ್ನು ತಿಳಿದು, "ಗಾಂಧಾರೀದೇವೀ, ನೀನು ವಿವೇಚನೆಯಿಲ್ಲದೆ ಇಂತಹ ಅಕಾರ್ಯವನ್ನು ಮಾಡಿದುದು ಸರಿಯಲ್ಲ. ಆದರೂ ನನ್ನ ಆಶೀರ್ವಾದ ಪೂರ್ವಕವಾದ ವರವು ವ್ಯರ್ಥವಾಗತಕ್ಕದ್ದಲ್ಲ. ಅದರಿಂದ ಈಗಲೂ ಒಂದು ನೂರು ಪಾತ್ರೆಗಳನ್ನು ತರಿಸಿ ತುಪ್ಪದಿಂದ ತುಂಬಿಸು," ಎಂದು ಹೇಳಿದನು. ಅದರಂತೆ ಘೃತ ಕುಂಭಗಳು ಸಿದ್ಧವಾದವು. ಆಗ, ವೇದವ್ಯಾಸ ಮುನಿಯು ಆ ಮಾಂಸದ ಮುದ್ದೆಯ ಮೇಲೆ ತಣ್ಣೀರನ್ನು ಚಿಮುಕಿಸಲು, ಅದು ಹೆಬ್ಬೆಟ್ಟಿನ ಗಾತ್ರದ ನೂರೊಂದು ಭಾಗಗಳಾಗಿ ಬಿಚ್ಚಿಕೊಂಡಿತು. ಆ ಒಂದೊಂದು ಭಾಗವನ್ನೂ ಮುನಿಯು ಒಂದೊಂದು ಕುಂಭದಲ್ಲಿಡಿಸುತ್ತಿದ್ದಾಗ, ಗಾಂಧಾರಿಯು ತನಗೊಬ್ಬ ಪುತ್ರಿಯೂ ಸಹ ಉದಿಸಬೇಕೆಂದು ಮನಸ್ಸಿನಲ್ಲಿ ಬಯಸಿದಳು. ಅದನ್ನು ಸರ್ವಜ್ಞನಾದ ವ್ಯಾಸ ಮಹರ್ಷಿಯು ತಿಳಿದುಕೊಂಡು, ನೂರು ಕುಂಭಗಳಿಗೂ ನೂರು ಪಿಂಡಗಳನ್ನು ಹಾಕಿಸಿ, ಮಿಕ್ಕ ಒಂದು ಶಕಲವನ್ನು ಬೇರೊಂದು ಘೃತಪಾತ್ರೆಯಲ್ಲಿ ಹಾಕಿಸಿದನು. ಅನಂತರ ಆ ಪಾತ್ರೆಗಳೆಲ್ಲವನ್ನೂ ಒಂದು ಗೋಪ್ಯವಾದ ಸ್ಥಳದಲ್ಲಿ ಎರಡು ವರ್ಷಗಳ ಕಾಲ ಪೂರ್ತಿಯಾಗಿ ಬಹಳ ಎಚ್ಚರಿಕೆಯಿಂದ ಇಟ್ಟಿದ್ದು ಅನಂತರ ಅವುಗಳನ್ನು ತೆರೆಯಬೇಕೆಂದು ಹೇಳಿ, ವ್ಯಾಸ ಮಹರ್ಷಿಯು ಹಿಮಾಲಯ ಪ್ರಾಂತಕ್ಕೆ ತಪಸ್ಸಿಗಾಗಿ ಹೊರಟು ಹೋದನು. ಅದರಂತೆಯೇ ಗಾಂಧಾರಿಯು ಆ ನೂರೊಂದು ಕುಂಭಗಳನ್ನೂ ಸರಿಯಾದ ಸ್ಥಳದಲ್ಲಿಡಿಸಿ, ಬಹಳ ಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದಳು.

## ಭೀಮಸೇನನ ಜನನ

ಅರಣ್ಯದಲ್ಲಿದ್ದ ಪಾಂಡುರಾಜನು ಒಂದಾನೊಂದು ದಿನ ಕುಂತೀ ದೇವಿಯನ್ನು ನೋಡಿ, "ಪ್ರಿಯೇ, ಧರ್ಮರಾಜನು ನಮಗೆ ಪ್ರಸನ್ನ ನಾಗಿ, ಪರಮ ಸತ್ಯವಂತನೂ ಜಗದ್ವಿಖ್ಯಾತನೂ ಆದ ರಾಜನೆನಿಸುವ ಪುತ್ರನನ್ನು ಅನುಗ್ರಹಿಸಿ, ಯುದ್ಧದಲ್ಲಿ ಸ್ಥಿರಪ್ರತಿಜ್ಞನಾಗುವ ಅವನಿಗೆ **ಯುಧಿಷ್ಠಿ**ರನೆಂಬ ನಾಮಧೇಯವನ್ನಿಟ್ಟು ನಮ್ಮನ್ನನುಗ್ರಹಿಸಿ ಹೋದನು. ಆದರೆ, ಕ್ಷತ್ರಿಯರಿಗೆ ಬಾಹುಬಲವು ವಿಶೇಷವಾಗಿರಬೇಕಾದುದು ಅವಶ್ಯವಾದುದರಿಂದ, ದುರ್ವಾಸರಿಂದ ನಿನಗುಪದಿಷ್ಟವಾದ ಮಂತ್ರದ ಮಹಿಮೆಯಿಂದ ಆಕಾರದಲ್ಲಿಯೂ ಶಕ್ತಿಯಲ್ಲಿಯೂ ಪೌರುಷ ಪರಾಕ್ರಮಗಳಲ್ಲಿಯೂ ಅತಿಶಯನೆನಿಸಿರುವ ವೀರ ಪುತ್ರನೊಬ್ಬನನ್ನು ನೀನು ಪಡೆಯಬೇಕೆಂದು ನನ್ನ ಇಚ್ಛೆಯಿರುವುದು," ಎಂದು ಹೇಳಿದನು. ಅದರಂತೆ ಕುಂತೀದೇವಿಯು ಜಗತ್ಪ್ರಾಣನಾದ ವಾಯು ದೇವನನ್ನು ಸ್ಮರಿಸಿ ಮಂತ್ರ ವನ್ನು ಜಪಿಸಲು, ಪ್ರಬಲ ಪರಾಕ್ರಮಿಯಾದ ವಾಯುದೇವನು ಒಂದು ಜಿಂಕೆಯ ಮೇಲೆ ಕುಳಿತು ಬಂದು ಕುಂತೀದೇವಿಗೆ ಪ್ರತ್ಯಕ್ಷನಾಗಿ, ಆಕೆಯ ಪ್ರಾರ್ಥನೆಯಂತೆ ಮಹಾ ಪರಾಕ್ರಮಿಯೂ ಸರ್ವರ ಗರ್ವ ಭಂಗಮಾಡತಕ್ಕವನೂ ಆದ ಆಜಾನುಬಾಹು ಪುತ್ರನೊಬ್ಬನನ್ನು ಅನುಗ್ರಹಿಸಿ ಹೊರಟು ಹೋದನು. ಅದರಂತೆ ಆಕೆಗೆ ವೀರಾಧಿ ವೀರ ನಾದ ಕುಮಾರನೊಬ್ಬನು ಜನಿಸಿದನು. ಆಗ "ಈ ಶಿಶುವು ಅತ್ಯಂತ ಪರಾಕ್ರಮಿಯಾಗುವನು," ಎಂಬುದಾಗಿ ಅಶರೀರ ವಾಣಿಯು ನುಡಿಯಿತು. ಇವನೇ **ಭೀಮಸೇನ**ನು.

ಈ ವರೆಗೆ, ಗಾಂಧಾರೀದೇವಿಯು ಘೃತ ಕುಂಭಗಳಲ್ಲಿ ಗರ್ಭದ ಪಿಂಡಗಳನ್ನಿರಿಸಿ ಎರಡು ವರ್ಷಗಳಾದವು. ಕುಂತೀದೇವಿಗೆ ಭೀಮ ಸೇನನು ಜನಿಸಿದ ದಿನವೇ ಗಾಂಧಾರಿಯ ಹಿರಿಯ ಮಗನಾದ ದುರ್ಯೋಧನನು ಜನಿಸಿದನು. ಅನಂತರ ಒಂದು ತಿಂಗಳಲ್ಲಿ ದುಶ್ಶಾಸನ, ದುಸ್ಸಹ, ದುಶ್ಶಲ ಮೊದಲಾದ ತೊಂಭತ್ತೊಂಭತ್ತು ಮಂದಿ ಪುತ್ರರೂ, ದುಶ್ಶಳೆ ಯೆಂಬ ಪುತ್ರಿಯೂ ಉದಿಸಿದರು. ಆ ವರ್ಷವೇ ಧೃತರಾಷ್ಟ್ರನಿಗೆ, ಒಬ್ಬ ವೈಶ್ಯಜಾತಿಯ ದಾಸಿಯಲ್ಲಿ **ಯುಯುತ್ಸು** ವೆಂಬ ಕುಮಾರನೂ ಜನಿಸಿದನು.

ಇತ್ತಲಾ ಕುಂತೀದೇವಿಯು, ಪತಿಯಾಜ್ಞೆಯನ್ನು ಪಡೆದು, ತನಗೆ ದುರ್ವಾಸರು ಉಪದೇಶಿಸಿದ್ದ ಮಂತ್ರದಿಂದ ಒಂದು ವರ್ಷಕಾಲ ವ್ರತ ವನ್ನಾಚರಿಸಿ, ದೇವೇಂದ್ರನ ಅನುಗ್ರಹಕ್ಕೆ ಪಾತ್ರಳಾದಳು. ದೇವೇಂದ್ರನು ಪ್ರತ್ಯಕ್ಷನಾಗಿ, ಆಕೆಗೊಬ್ಬ ಸರ್ವಲಕ್ಷಣ ಸಂಪನ್ನನಾದ ಪುತ್ರನನ್ನು ಅನುಗ್ರಹಿಸಿ, "ಈ ಪುತ್ರನು, ಪರಶುರಾಮನಂತೆ ಮಹಾ ಪರಾ ಕ್ರಮಿಯೂ ಧರ್ಮಶೀಲನೂ ಆಗಿ ಯುದ್ಧದಲ್ಲಿ ಶಂಕರನನ್ನು ಮೆಚ್ಚಿಸಿ ಶತ್ರುಸಂಹಾರಕವಾದ ಪಾಶುಪತವೆಂಬ ದಿವ್ಯಾಸ್ತ್ರವನ್ನು ಪಡೆಯುವನು," ಎಂಬುದಾಗಿ ಹೇಳಿದನು. ಈ ಪುತ್ರನೇ ಅರ್ಜುನನು. ಇದಾದ ಕೆಲವು ದಿನಗಳ ಮೇಲೆ, ಸಂತಾನ ಹೀನಳಾಗಿದ್ದ ಮಾದ್ರೀದೇವಿಯ ಪ್ರಾರ್ಥನೆ ಯಂತೆ ಪಾಂಡುರಾಜನು ಕುಂತೀದೇವಿಯನ್ನು ಕುರಿತು, "ದೇವೀ, ನಿನ್ನಲ್ಲಿರುವ ಮಹಾಮಂತ್ರ ಪ್ರಭಾವದಿಂದ ನಿನ್ನ ಸವತಿಯಾದ ಮಾದ್ರೀ ದೇವಿಗೂ ಪುತ್ರಸಂತಾನವಾಗುವಂತೆ ಮಾಡಲಾರೆಯಾ?" ಎಂದು ಕೇಳಲು, ಗುಣವತಿಯಾದ ಕುಂತಿಯು, ಸಂತೋಷದಿಂದ, ಮಾದ್ರೀ ದೇವಿಗೂ ಆ ಮಂತ್ರವನ್ನು ಅನುಗ್ರಹಿಸಿದಳು. ಅದನ್ನು ಮಾದ್ರಿಯು ತಕ್ಕಂತೆ ಅನುಷ್ಠಾನಮಾಡಿ ಅಶ್ವಿನೀದೇವತೆಗಳ ಅನುಗ್ರಹವನ್ನು ಪಡೆದು, ಸುಂದರರೂ ಯುಕ್ತಿ ಶಕ್ತಿ ವಿದ್ಯಾ ವಿವೇಕ ಸಂಪನ್ನರೂ, ಸಾಹಸಿಗಳೂ ಆದ ನಕುಲ ಸಹದೇವರೆಂಬ ಅವಳಿ ಜವಳಿಯಾದ ಇಬ್ಬರು ಪುತ್ರರನ್ನು ಪಡೆದಳು. ಹೀಗೆ ಪಾಂಡುರಾಜನಿಗೆ, ತನ್ನ ಪತ್ನಿಯರಾದ ಕುಂತಿ ಮಾದ್ರಿಯರಿಬ್ಬರಲ್ಲಿ ಧರ್ಮರಾಜ, ಭೀಮ, ಅರ್ಜುನ, ನಕುಲ ಮತ್ತು ಸಹದೇವರೆಂಬ ಐದು ಮಂದಿ ಪುತ್ರರಾದರು. ಇವರೇ **ಪಂಚ ಪಾಂಡವರು.** ಈ ಮಕ್ಕಳೊಡಗೂಡಿ, ಉಭಯ ಪತ್ನೀಸಹಿತನಾದ ಪಾಂಡುರಾಜನು ಅರಣ್ಯದಲ್ಲಿರುವಾಗ, ವಸಂತಕಾಲದಲ್ಲಿ ಒಂದಾನೊಂದು ದಿನ, ಮಾದ್ರೀದೇವಿಯೊಡನೆ ಸಂಚಾರಮಾಡುತ್ತಿರಲು, ಪಾಂಡುರಾಜ ನಿಗೆ ಅಲ್ಲಿನ ಪ್ರಕೃತಿಸೌಂದರ್ಯವನ್ನು ನೋಡಿ ಅತ್ಯಾನಂದವಾಯಿತು. ಕಾಮಮೋಹಿತನಾದ ಆತನಿಗೆ ಬುದ್ಧಿಭ್ರಮಣೆಯುಂಟಾಯಿತು. ಹಿಂದಿನ ತನ್ನ ಕಥೆಯೆಲ್ಲವೂ ಮರೆತು ಆತನು, ಮಾದ್ರೀದೇವಿಯು ಎಷ್ಟು ತಡೆದರೂ ಬಿಡದೆ, ಬಲಾತ್ಕಾರದಿಂದ ಆಕೆಯೊಡನೆ ಸೇರಿದನು. ಆ ಕೂಡಲೇ, ಹಿಂದೆ ಜಿಂಕೆಯ ರೂಪದಿಂದಿದ್ದ ಮಹರ್ಷಿಯು ಶಪಿಸಿದ್ದ

ಮೇರೆಗೆ ಪಾಂಡುರಾಯನು ಮೃತಿಯನ್ನೈದಿದನು. ಪತಿಯಮರಣಕ್ಕೆ ತಾನು ಕಾರಣಳಾದೆನೆಂದು ಮಾದ್ರಿಯು ದುಃಖವನ್ನು ಸಹಿಸಲಾರದೆ, ಆತನ ಶವದೊಡನೆ ತಾನೂ ಸಹಗಮನ ಮಾಡಿ ಮೃತಳಾದಳು. ಕುಂತೀದೇವಿಯು ತಾನೇ ಸಹಗಮನ ಮಾಡುವುದಾಗಿಯೂ, ಐದು ಮಂದಿ ಮಕ್ಕಳನ್ನೂ ಮಾದ್ರಿಯು ಪಾಲಿಸುತ್ತಿರಬೇಕೆಂದೂ ಹೇಳಿದು ದಕ್ಕೆ, ಮಾದ್ರಿಯು ಒಪ್ಪದೆ ತನ್ನ ಮಕ್ಕಳನ್ನೇ ಕುಂತೀದೇವಿಯ ವಶಕ್ಕೆ ಕೊಟ್ಟು, ಪತಿಯ ದೇಹವಿದ್ದ ಚಿತಿಯಲ್ಲಿ ಧುಮಿಕಿದ್ದ ಕಾರಣ ಐದು ಮಂದಿ ಮಕ್ಕಳ ಪೋಷಣೆಗಾಗಿ ಕುಂತೀದೇವಿಯು ಸಹಗಮನ ಮಾಡದೆ ನಿಲ್ಲಬೇಕಾಯಿತು.

ಹೀಗೆ ಪಾಂಡುರಾಜನ ಮರಣದಿಂದ ವ್ಯಸನಾಕ್ರಾಂತರಾದ ಆ ವನದ ಮಹರ್ಷಿಗಳು, ಆಲೋಚಿಸಿ, ದುಃಖದಲ್ಲಿ ಮುಳುಗಿದ್ದ ಕುಂತೀ ದೇವಿಯನ್ನೂ ಪಂಚಪಾಂಡವರನ್ನೂ ಕೆಲವು ಕಾಲ ಅಲ್ಲಿಯೇ ಕಾಪಾಡಿ ಕೊಂಡಿದ್ದು, ಆನಂತರ ಹಸ್ತಿನಾಪುರಕ್ಕೆ ಕರೆದುಕೊಂಡುಹೋಗಿ ಭೀಷ್ಮನ ವಶಕ್ಕೆ ಒಪ್ಪಿಸಿದರು. ಆಗ ಯುಧಿಷ್ಠಿರನಿಗೆ ಹದಿನಾರು ವರ್ಷ ವಯಸ್ಸು.

ಪಾಂಡುರಾಜನ ಮರಣವಾರ್ತೆಯನ್ನು ಕೇಳಿ, ದೇಶವೆಲ್ಲವೂ ದುಃಖದಲ್ಲಿ ಮುಳುಗಿತು. ವ್ಯಾಸರೂ, ಭೀಷ್ಮನೂ, ಧೃತರಾಷ್ಟ್ರನೂ, ವಿದುರನೂ ಮತ್ತು ಇತರ ಬಂಧುಜನರೂ, ಪರಲೋಕಗತನಾದ ಪಾಂಡುರಾಜನಿಗೆ ಯಥೋಚಿತವಾದ ಅಂತ್ಯಕರ್ಮಗಳನ್ನು ನೆರವೇರಿ ಸಿದರು. ಜನರೆಲ್ಲರೂ ಸ್ವಂತಬಂಧುವಿನ ವಿಯೋಗವನ್ನು ಪಡೆದಂತೆ ದುಃಖಿಸಿದರು.

ಆಗ ವೇದವ್ಯಾಸರು, ತನ್ನ ತಾಯಿಯಾದ ಸತ್ಯವತೀದೇವಿಯನ್ನು ಕುರಿತು, "ಅಮ್ಮಾ, ಈವರೆಗೂ ನೀನು ವಿಶೇಷ ದುಃಖಗಳಿಲ್ಲದೆ ಹೇಗೋ ಕಾಲವನ್ನು ಕಳೆದೆ. ಸುಖದ ಕಾಲವು ಕಳೆದು ಹೋಯಿತು. ಇನ್ನು ಭವಿಷ್ಯವು ಬಹು ದುಃಖಕರವಾಗಿದೆ. ಭೂಲೋಕದಲ್ಲಿ ದಿನ ದಿನಕ್ಕೆ ಪಾಪವು ಹೆಚ್ಚುವುವು. ವಿಧ ವಿಧವಾದ ಮೋಸಗಳೂ, ಅಪರಾಧಗಳೂ ಜನರಲ್ಲಿ ಅಧಿಕವಾಗುವುದು. ಧೃತರಾಷ್ಟ್ರನ ಪುತ್ರರಾದ ಕೌರವರ ದುಷ್ಕಾರ್ಯಗಳಿಂದ ದೇಶವೇ ನಾಶವಾಗುವುದು. ಆದಕಾರಣ, ಅಂತಹ ಸ್ಥಿತಿಯನ್ನು ನೀನು ನೋಡಬೇಡ. ಅರಣ್ಯಕ್ಕೆ ಹೋಗಿ ಇನ್ನು ಧ್ಯಾನ

ಯೋಗಗಳಲ್ಲಿ ಕಾಲವನ್ನು ಕಳೆಯುವುದೇ ಉತ್ತಮ," ಎಂದು ಹೇಳಲು, ಸತ್ಯವತಿಯು ತ್ರಿಕಾಲಜ್ಞನಾದ ಆತನ ಮಾತನ್ನು ಅಂಗೀಕರಿಸಿ, ಅಂಬಿಕೆ ಅಂಬಾಲಿಕೆಯರನ್ನೂ ಕರೆದುಕೊಂಡು ತಪೋವನಕ್ಕೆ ಪ್ರಯಾಣ ಮಾಡಿದಳು. ಅಲ್ಲಿ, ತಪೋನಿಷ್ಠೆಯಿಂದ ಇದ್ದು, ಕೆಲವು ಕಾಲದಮೇಲೆ ಈ ಮೂವರು ಸ್ತ್ರೀಯರೂ ತಮ್ಮ ಕುಲದಲ್ಲಿ ನಡೆಯಲಿರುವ ಅನ್ಯಾಯ ಗಳನ್ನು ನೋಡದೆ ಪರಲೋಕವನ್ನು ಸೇರಿದರು.

### ಅಧ್ಯಾಯ ೭

## ಪಾಂಡವ, ಕೌರವರ ಬಾಲ್ಯ ಮತ್ತು ವಿದ್ಯಾಭ್ಯಾಸ

ಪಾಂಡುರಾಯನು ಗತಿಸಿದನಂತರ ಪಾಂಡವರು, ಭೀಷ್ಮನು ಏರ್ಪಡಿಸಿದಂತೆ ಧೃತರಾಷ್ಟ್ರನ ಮನೆಯಲ್ಲಿಯೇ ಇದ್ದರು. ಇವರು ಬುದ್ಧಿ ವಿವೇಕಗಳಲ್ಲಿಯೂ ಶಕ್ತಿಯಲ್ಲಿಯೂ ದುರ್ಯೋಧನಾದಿಗಳಿ ಗಿಂತಲೂ ಮಿಗಿಲಾಗಿದ್ದರು. ಅದರಲ್ಲಿಯೂ ಭೀಮಸೇನನು ಓಡುವ ವೇಗದಲ್ಲಿಯೂ, ದೇಹಶಕ್ತಿಯಲ್ಲಿಯೂ, ಗುರಿ ನೋಡಿ ಹೊಡೆಯು ವುದರಲ್ಲಿಯೂ, ಊಟದಲ್ಲಿಯೂ ಸಹ ಮಿಕ್ಕ ನೂರೈದು ಮಂದಿಗಿಂತಲೂ ಅಧಿಕನಾಗಿದ್ದನು. ಅವನು, ಆಟದಲ್ಲಿ ಧೃತರಾಷ್ಟ್ರನ ನೂರೊಂದು ಮಂದಿ ಮಕ್ಕಳನ್ನೂ ಸ್ವಲ್ಪವೂ ಲಕ್ಷ್ಯವಿಲ್ಲದೆ ಹಿಡಿದು, ಹಿಂಡಿ ಸೋಲಿಸುತ್ತಿದ್ದನು. ಅವರುಗಳನ್ನು ಜುಟ್ಟುಹಿಡಿದು ನೆಲದಮೇಲೆ ದರದರನೆ ಎಳೆದು, ಅವರ ತಲೆಗಳೊಡೆಯುವಂತೆಯೂ ಕೈ ಮೈಗಳು ಮುರಿಯುವಂತೆಯೂ ಮಾಡಿ ಬಿಡುತ್ತಿದ್ದನು. ನೀರಲ್ಲಿ ಆಟವಾಡುವಾಗ ಅವರಲ್ಲಿ ಹತ್ತುಮಂದಿಯನ್ನು ಹಿಡಿದೆಳೆದುಕೊಂಡು ಕೊಳದಲ್ಲಿ ಮುಳುಗುವನು. ಅವರು ಉಸಿರು ಕಟ್ಟಿ ಸಂಕಟಪಟ್ಟು ಸಾಯುವಂತಾಗುವವರೆಗೂ ನೀರಿನಲ್ಲಿಯೇ ಮುಳು ಗಿದ್ದು ಅನಂತರ ಮೇಲಕ್ಕೆ ಏಳುವನು. ಅವರುಗಳು ಮರದ ಮೇಲೆ ಹತ್ತಿ, ಹಣ್ಣನ್ನು ಕೀಳುತ್ತಿದ್ದರೆ, ಇವನು ಕೆಳಗೆ ನಿಂತು ಆ ಮರವನ್ನು ಬಲವಾಗಿ ಒದೆಯುವನು. ಆ ಒದೆಯ ವೇಗದಿಂದ ಮೇಲಿದ್ದ ಹುಡುಗರು ಹಣ್ಣುಗಳುದಿರಿದಂತೆ ಕೆಳಕ್ಕೆ ತುಪ ತುಪನೆ ಬೀಳುವರು. ಹೀಗೆ ಭೀಮನು ಹುಡುಗಾಟದಿಂದ ಕೌರವರನ್ನು ಕಾಡಿಸಿ ಪೀಡಿಸಿ ಆನಂದ ಪಡುತ್ತಿದ್ದನೇ ಹೊರತು; ಅವನಿಗೆ ಅವರಲ್ಲಿ ಸ್ವಲ್ಪವೂ ದ್ವೇಷವಾಗಲಿ ಕ್ರೋಧವಾಗಲಿ ಇರಲಿಲ್ಲ. ಆದರೆ, ಇದನ್ನರಿಯದ ಧೃತರಾಷ್ಟ್ರನ ಪುತ್ರ

ರೆಲ್ಲರಿಗೂ ಭೀಮನ ಮೇಲೆ ಪ್ರಬಲ ದ್ವೇಷವುಂಟಾಯಿತು. ಅವರಲ್ಲಿ ಅಗ್ರಜನಾದ ದುರ್ಯೋಧನನು ಅವಿವೇಕದಿಂದಲೂ, ತಾನು ಧನಿಕನು, ಪಾಂಡವರು ತನ್ನ ಆಶ್ರಿತರು, ಎಂಬ ದುರಹಂಕಾರದಿಂದಲೂ, ಪಾಪ ಕಾರ್ಯಗಳನ್ನು ಮಾಡಲು ಹಿಂಜರಿಯಲಿಲ್ಲ. ಕೌರವ ಪಾಂಡವರೆಲ್ಲರೂ ಕೃಪಾಚಾರ್ಯರಲ್ಲಿ ಅಸ್ತ್ರ ಶಸ್ತ್ರ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು.

ಕ್ರೋಧಿಯಾದ ದುರ್ಯೋಧನನ ಮನಸ್ಸಿನಲ್ಲಿ ಒಂದು ಪ್ರಬಲವಾದ ಚಿಂತೆಯುಂಟಾಯಿತು. ಏನೆಂದರೆ — ತನ್ನ ತಂದೆಯಾದ ಧೃತರಾಷ್ಟ್ರನು, ಹುಟ್ಟು ಕುರುಡನಾದುದರಿಂದ ರಾಜ್ಯವು ಪಾಂಡುರಾಜನ ವಶವಾಯಿತು. ಆತನನಂತರ ಆ ರಾಜ್ಯಕ್ಕೆ ಪಾಂಡುವಿನ ಜ್ಯೇಷ್ಠ ಪುತ್ರನಾದ ಯುಧಿಷ್ಠಿರನೇ ಅಧಿಕಾರಿಯಾಗಿ, ಯುವರಾಜಪಟ್ಟಾಭಿಷೇಕವನ್ನು ಹೊಂದಿ ರಾಜನಾಗುವನು. ತಾನು ಹಿರಿಯವನ ಮಗನಾದರೂ ರಾಜನಾಗಲವಕಾಶವಿಲ್ಲವಾಯಿತಲ್ಲಾ! ತನಗೆ ತಂದೆಯಾದ ಧೃತರಾಷ್ಟ್ರನಿಂದ ಯಾವ ಸಹಾಯವೂ ಆಗುವಂತಿಲ್ಲವಲ್ಲಾ! ಎಂಬುದಾಗಿ ಬಹಳವಾಗಿ ವ್ಯಥೆಪಟ್ಟು ಕಡೆಗೆ ಮನಸ್ಸಿನಲ್ಲಿ ಒಂದು ತೀರ್ಮಾನ ಮಾಡಿಕೊಂಡನು. ಏನೆಂದರೆ — ನಮ್ಮೆಲ್ಲರಿಗಿಂತಲೂ ಪರಾಕ್ರಮಶಾಲಿಯಾದ ಭೀಮಸೇನನು ಯುಧಿಷ್ಠಿರನಿಗೆ ಸಹಾಯಕನಾಗಿರುವವರೆಗೂ ನಾವು ರಾಜ್ಯವನ್ನು ಸಾಧಿಸಿಕೊಳ್ಳಲು ಸಾಧ್ಯವಾಗಲಾರದು. ಆದಕಾರಣ ಮೊಟ್ಟಮೊದಲು ಹೇಗಾದರೂ ಭೀಮಸೇನನನ್ನು ಅವನು ಮಲಗಿರುವಾಗ ಗಂಗಾನದಿಯಲ್ಲಿ ತಳ್ಳಿ ಕೊಂದುಬಿಟ್ಟರೆ, ಪಾಂಡವರ ಆಟವು ಮುಗಿಯುವುದು. ಅನಂತರ ಯುಧಿಷ್ಠಿರನನ್ನೂ ಅರ್ಜುನನನ್ನೂ ಹಿಡಿದು ಸೆರೆಗೆ ಸೇರಿಸಿ, ನಾನೇ ರಾಜ್ಯಕ್ಕೆ ರಾಜನಾಗಿ ಆಳಬೇಕು, ಎಂದು ನಿಶ್ಚಯಿಸಿ, ತಮ್ಮಂದಿರೊಡನೆ ಆಲೋಚಿಸಿ ಅವರ ಸಮ್ಮತಿಯನ್ನೂ ಪಡೆದುಕೊಂಡನು.

ಅನಂತರ, ಗಂಗಾತೀರದಲ್ಲಿ ಜಲಕೇಳಿಗಾಗಿ ಒಂದು ಮನೋಹರವಾದ ಸುಂದರ ಮಂದಿರವನ್ನು ಕಟ್ಟಿಸಿದನು. ಅದರಲ್ಲಿ ದಿವ್ಯಾಲಂಕಾರ ಭರಿತವಾದ ಅನೇಕ ಕೊಟ್ಟಡಿಗಳನ್ನೂ, ಅವುಗಳಲ್ಲಿ ವಿಧವಿಧವಾದ ವಿಚಿತ್ರ ವಿಭವ ವಸ್ತುಗಳನ್ನೂ ಇಡಿಸಿ, ಅದಕ್ಕೆ **ಜಲಕೇಳೀ ವಿಹಾರ ಮಂದಿರ**ವೆಂದು ಹೆಸರಿಟ್ಟನು. ಅನಂತರ ಒಂದು ದಿನ ದುರ್ಯೋಧನನು,

ಪಾಂಡವರಲ್ಲಿ ವಿಶೇಷ ವಿಶ್ವಾಸವನ್ನು ನಟಿಸಿ, ಯುಧಿಷ್ಠಿರಾದಿಗಳನ್ನು ವಿನೋದ ವಿಹಾರಕ್ಕೆಂದು ಆ ಮಂದಿರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಭೋಜನಾದಿಗಳನ್ನೇರ್ಪಡಿಸಿದನು. ಎಲ್ಲರೂ ಅಲ್ಲಿನ ವಿಭವವನ್ನು ನೋಡಿ ಸಂತೋಷ ಪಟ್ಟು ಊಟಕ್ಕೆ ಕುಳಿತಿರುವಾಗ, ಮೊದಲೇ ದುರ್ಯೋಧನನು ಗೋಪ್ಯವಾಗಿ ಏರ್ಪಡಿಸಿದ್ದಂತೆ ಭೀಮಸೇನನಿಗೆ ತೀವ್ರವಾದ ವಿಷವನ್ನು ಮಿಶ್ರಮಾಡಿದ ಆಹಾರದ ಪದಾರ್ಥಗಳು ಬಡಿಸಲ್ಪಟ್ಟವು. ಕಪಟವನ್ನರಿಯದ ಭೀಮಸೇನನು ದುರ್ಯೋಧನನ ಮಧುರವಾಕ್ಯಗಳಿಗೆ ಬೆರಗಾಗಿ, ಆಕಂಠಪರಿಪೂರ್ತಿಯಾಗಿ ಆನಂದ ದಿಂದ ಊಟಮಾಡಿದನು. ದುರ್ಯೋಧನನಿಗೆ ತಾನು ಗೆದ್ದೆನೆಂದು ಬಹಳ ಸಂತೋಷವಾಯಿತು. ಅನಂತರ ಎಲ್ಲರೂ ಜಲಕೇಳಿಯನ್ನಾಡಿದರು. ಆಯಾಸಪಟ್ಟಿದ್ದ ಭೀಮಸೇನನು ವಿಶ್ರಾಂತಿಗಾಗಿ ವಿಸ್ತಾರವಾಗಿದ್ದ ಆ ಮಂದಿರದಲ್ಲಿ ಒಂದು ಕಡೆ ಕೈಕಾಲುಗಳನ್ನು ಚಾಚಿಕೊಂಡು ಮಲಗಿದನು. ಮಿಕ್ಕವರೆಲ್ಲರೂ ವಸ್ತ್ರಾಭರಣಗಳನ್ನು ಧರಿಸಿಕೊಂಡು ವಿನೋದದಿಂದಿದ್ದರು. ಭೀಮಸೇನನು, ತಾನು ಸೇವಿಸಿದ್ದ ಆಹಾರದಲ್ಲಿಯ ವಿಷದ ವೇಗದಿಂದ ಸ್ಮೃತಿತಪ್ಪಿ ಕಾಷ್ಠದಂತೆ ಬಿದ್ದಿದ್ದನು. ಆಗ ದುರ್ಯೋಧನನೇ ಅವನಿದ್ದೆಡೆಗೆ ಬಂದು, ಗುಟ್ಟಾಗಿ ಅವನನ್ನು ಹಗ್ಗಗಳಿಂದಲೂ, ಬಳ್ಳಿಗಳಿಂದಲೂ ಕಟ್ಟಿ ಬಿಗಿದು, ಎತ್ತಿ ಗಂಗಾನದಿಯಲ್ಲಿ ಹಾಕಿಬಿಟ್ಟನು. ಆಗ ಗಂಗೆಯ ತಳದಲ್ಲಿದ್ದ ಅನೇಕ ಸರ್ಪಗಳು ಇವನನ್ನು ಮುತ್ತಿ, ಬಹು ಕಠಿನವಾಗಿದ್ದ ಅವನ ಎದೆಯೊಂದನ್ನು ಬಿಟ್ಟು ಮೈಯೆಲ್ಲವನ್ನೂ ಬಲವಾಗಿ ಕಚ್ಚಿದವು. ಆಗ ಹಾವುಗಳ ವಿಷವೂ ಅವನು ತಿಂದಿದ್ದ ಆಹಾರದಲ್ಲಿದ್ದ ವಿಷವೂ ಅವನ ಶರೀರದಲ್ಲಿ ಸೇರಿ ಒಂದನ್ನೊಂದು ಹೊಡೆದು ಹಾಕಿತು. ಇದರಿಂದ ಭೀಮಸೇನನು ಎಚ್ಚೆತ್ತು, ತನ್ನನ್ನು ಮುತ್ತಿಕೊಂಡಿದ್ದ ಸರ್ಪಗಳನ್ನು ನೋಡಿ, ತನ್ನ ಸ್ಥಿತಿಗೆ ಆಶ್ಚರ್ಯಪಟ್ಟು: ಕಟ್ಟಿದ ಹಗ್ಗ ಬಳ್ಳಿಗಳನ್ನು ಪಟಪಟನೆ ಹರಿದು ಹಾವುಗಳನ್ನು ಹಿಸುಕಿ ಹಿಂಡಿ ಬಿಡುತ್ತಿರುವಷ್ಟರಲ್ಲಿ, ಅನೇಕ ಸರ್ಪಗಳು ಪ್ರಾಣಭೀತಿಯಿಂದ ಅವನ ಕೈಗೆ ಸಿಕ್ಕದೆ ಓಡಿಹೋದವು.

ಇತ್ತಲಾ ಯುಧಿಷ್ಠಿರಾದಿಗಳು ಭೀಮಸೇನನನ್ನು ಕಾಣದೆ ದುರ್ಯೋಧನನನ್ನು ಕೇಳಲು, ಆತನು, "ಅವನು ಮೊದಲೇ ಪಟ್ಟಣಕ್ಕೆ ಹೊರಟು

ಹೋಗಿರಬೇಕು," ಎಂದು ಹೇಳಿದನು. ಇರಬಹುದೆಂದು ನಂಬಿ ಅವರು ಕೌರವರ ಸಹಿತವಾಗಿ ಹಸ್ತಿನಾವತಿಗೆ ಹಿಂದಿರುಗಿದರು. ಅಲ್ಲಿ ಕುಂತೀ ದೇವಿಯನ್ನು ಕೇಳಲು ಭೀಮನು ಬರಲಿಲ್ಲವೆಂದು ತಿಳಿಯಿತು. ಇದರಿಂದ ಕುಂತಿಯೂ ಪಾಂಡವರೂ ಬಹಳ ಚಿಂತಾಕ್ರಾಂತರಾಗಿ ಏನೋ ಮೋಸವು ನಡೆದಿರಬೇಕೆಂದಾಲೋಚಿಸಿಕೊಂಡರು. ಆದರೂ ಯುಧಿಷ್ಠಿರನೂ ಅವನ ತಮ್ಮಂದಿರೂ ಮತ್ತೆ ಜಲಕ್ರೀಡಾ ಮಂದಿರಕ್ಕೆ ಬಂದು ಅಲ್ಲಿಯೂ, ವನದ ಎಲ್ಲ ಕಡೆಗಳಲ್ಲಿಯೂ ಹುಡುಕಿ ನೋಡಿದರೂ ಭೀಮನಿರಲಿಲ್ಲ. ಇದರಿಂದ ಅವರು ಬಹಳ ದುಃಖದಿಂದ ಮನೆಗೆ ಹಿಂದಿರುಗಿದರು.

ಇತ್ತಲಾ ಭೀಮಸೇನನು, ಮಡುವಿನಿಂದೆದ್ದು ಈಜಿಕೊಂಡು ಬಂದು ದಡವನ್ನು ಮುಟ್ಟಿ, ಅಲ್ಲಲ್ಲಿ ಅಲೆದು, ಕಡೆಗೆ ಮನೆಗೆ ಬಂದು ಸೇರಿದನು. ಕುಂತೀದೇವಿಯೂ ಯುಧಿಷ್ಠಿರ ಮೊದಲಾದ ಅವನ ಸೋದರರೂ ಅವನನ್ನು ತಬ್ಬಿಕೊಂಡು, ಆನಂದಬಾಷ್ಪಗಳನ್ನು ಸುರಿಸಿ ಸಂತೋಷ ಭರಿತರಾದರು. ಭೀಮಸೇನನಾದರೋ ಶರೀರದಲ್ಲಿ ಎರಡು ವಿಷಗಳು ಸೇರಿ, ಮೊದಲಿಗಿಂತಲೂ ಹೆಚ್ಚು ಬಲಶಾಲಿಯಾದನು.

ಭೀಮನ ಕಥೆಯೆಲ್ಲವನ್ನೂ ಕೇಳಿ, ಪಾಂಡವರಿಗೂ ಕುಂತೀ ದೇವಿಗೂ ದುರ್ಯೋಧನನ ದುರಾಲೋಚನೆಗಳೂ ದುಷ್ಕಾರ್ಯಗಳೂ ಮನಸ್ಸಿಗೆ ಬಂದವು. ಆದರೂ ಯುಧಿಷ್ಠಿರನು ಭೀಮನನ್ನು ಕುರಿತು, ಕಳೆದು ಹೋದ ವಿಷಯಗಳನ್ನಾಗಲಿ, ಕೌರವರ ಕೆಡುಕುತನವನ್ನು ಕುರಿತಾಗಲಿ, ಒಂದು ಮಾತನ್ನಾದರೂ ಆಡಕೂಡದೆಂದು ಎಚ್ಚರಿಕೆ ಹೇಳಿದನು. ಅಲ್ಲಿಂದ ಮುಂದೆ ಅವರು ಪ್ರತಿಯೊಬ್ಬರೂ ಬಹು ಜಾಗರೂಕತೆಯಿಂದಿದ್ದರು. ವ್ಯಸನಾಕ್ರಾಂತಳಾಗಿ ತನ್ನ ದುಃಖವನ್ನು ಹೇಳಿಕೊಂಡ ಕುಂತೀದೇವಿಗೆ ವಿದುರನು, "ಅಮ್ಮಾ, ಸ್ವಭಾವ ದುಷ್ಟನಾದ ದುರ್ಯೋಧನನನ್ನು ನಿಂದಿಸಬೇಡಿ. ಅದು ಅವನ ಕಿವಿಗೆ ಬಿದ್ದರೆ ಅವನಿಗೆ ದ್ವೇಷವು ಇನ್ನೂ ಪ್ರಬಲವಾಗುವುದು. ನಿನ್ನ ಪುತ್ರರು ಪೂರ್ಣಾಯುಗಳು, ಸತ್ಯವಂತರು, ಸಾಹಸಿಗಳು, ದೈವಬಲ ಸಂಪನ್ನರು. ಅದರಿಂದ ನೀನು ಯಾವುದಕ್ಕೂ ಹೆದರಬೇಡ. ನೀವುಗಳೆಲ್ಲರೂ ಪರಸ್ಪರ ರಕ್ಷಣೆಯಲ್ಲಿ ಎಚ್ಚರಿಕೆಯಿಂದಿರಿ" ಎಂಬುದಾಗಿ ಬುದ್ಧಿವಾದವನ್ನು ಹೇಳಿದನು.

ಭೀಮನು ಸಜೀವನಾಗಿ ಹಿಂದಿರುಗಿದುದನ್ನು ನೋಡಿ ದುಷ್ಟ ದುರ್ಯೋಧನನಿಗೆ ಪರಮಾಶ್ಚರ್ಯವಾಯಿತು. ಅದರಿಂದ ಅವನಲ್ಲಿ ಮಾತ್ಸರ್ಯವೂ ದ್ವೇಷವೂ ಹೆಚ್ಚಿ, ಹೇಗಾದರೂ ಪಾಂಡವರನ್ನು ಕೊಲ್ಲ ಬೇಕೆಂಬಾಲೋಚನೆಯಲ್ಲಿಯೇ ಇದ್ದನು. ಅನಂತರ, ಮತ್ತೊಂದು ದಿನ ಆಹಾರದಲ್ಲಿ ಪ್ರಬಲವಾದ ವಿಷವನ್ನು ಸೇರಿಸಿ ಭೀಮಸೇನನಿಗೆ ಇಡಲು ಏರ್ಪಡಿಸಿದನು. ಈ ವಿಚಾರವನ್ನು ತಿಳಿದ, ಧೃತರಾಷ್ಟ್ರನ ವೈಶ್ಯ ದಾಸಿಯ ಪುತ್ರನಾದ **ಯುಯುತ್ಸುವು**, ಪಾಂಡವರಲ್ಲಿಯ ಪ್ರೀತಿಯಿಂದ ಈ ಸಮಾಚಾರವನ್ನು ಅವರಿಗೆ ತಿಳಿಸಿದನು. ಆದರೂ ಭೀಮಸೇನನು ಹೆದರದೆ, ಆ ವಿಷಾನ್ನವನ್ನೇ ತಿಂದು ಯಾವ ತಾಪವೂ ಇಲ್ಲದೆ ಜೀರ್ಣಿಸಿ ಕೊಂಡನು. ಹೀಗೆ ಪಾಂಡವರಿಗೆ ದುರ್ಯೋಧನನು ಆಗಾಗ ಕೇಡುಕು ಗಳನ್ನು ಮಾಡುತ್ತಲೇ ಇದ್ದನು.

## ಅಧ್ಯಾಯ ೮

## ಶಸ್ತ್ರಾಸ್ತ್ರ ವಿದ್ಯಾಭ್ಯಾಸ

### ಕೃಪಾಚಾರ್ಯ

ಕೌರವ ಪಾಂಡವರೆಲ್ಲರೂ ಕೃಪಾಚಾರ್ಯರೆಂಬುವರಲ್ಲಿ ಅಸ್ತ್ರ ಶಸ್ತ್ರ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರೆಂಬುದನ್ನು ಹಿಂದೆಯೇ ಹೇಳಿದೆ ಯಷ್ಟೆ! ಈ ಕೃಪಾಚಾರ್ಯರ ಚರಿತ್ರೆಯು ವಿಚಿತ್ರವಾದುದು. ಹೇಗೆಂದರೆ:— ಹಿಂದಿನ ಕಾಲದಲ್ಲಿ ಗೌತಮನೆಂಬ ಮಹರ್ಷಿಗೆ ಶಾರದ್ವತನೆಂಬ ಮಗನು ಜನಿಸಿದನು. ಈ ಮಗನು ಹುಟ್ಟುವಾಗಲೇ ಬಾಣಗಳನ್ನು ಕೈಯಲ್ಲಿ ಹಿಡಿದಿದ್ದನು. ವಯಸ್ಸಾಗುತ್ತ ಇವನಿಗೆ ಶಾಸ್ತ್ರವಿದ್ಯೆಗಿಂತಲೂ ಶಸ್ತ್ರಾಸ್ತ್ರ ವಿದ್ಯೆಯಲ್ಲಿಯೇ ಹೆಚ್ಚು ಆಸಕ್ತಿಯುಂಟಾಯಿತು. ಇದರಿಂದ ಅವನು, ಕರ್ಮದಿಂದ ಬ್ರಹ್ಮಚಾರಿಗಳು ಜ್ಞಾನವನ್ನು ಆರ್ಜಿಸಿದಂತೆ ಕರ್ಮದಿಂದ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದನು. ಈ ಶಾರದ್ವತನು ಪರಮತಪೋ ನಿಷ್ಠನು. ಈತನ ತಪೋನಿಷ್ಠೆಗೆ ಬೆದರಿ, ದೇವೇಂದ್ರನು ಈತನನ್ನು ತಪಸ್ಸಿನಿಂದ ವಿಮುಖನನ್ನಾಗಿ ಮಾಡಲು, **ಜಾನಪದಿ**ಯೆಂಬ ಅಪ್ಸರೋ ಭಾಮಿನಿಯನ್ನು ಕಳುಹಿಸಿದನು. ಅವಳು ಶಾರದ್ವತನಿದ್ದ ಆಶ್ರಮದ ಬಳಿಗೆ ಬಂದು ಆತನನ್ನು ಮೋಹಪರವಶನನ್ನಾಗಿಮಾಡಲು ಪ್ರಯತ್ನಿಸಿ

ದಳು. ಪರಮ ಸೌಂದರ್ಯವತಿಯಾದ ಅವಳನ್ನು ನೋಡಿದೊಡನೆಯೇ ಶಾರದತ್ವನ ಮನಸ್ಸು ಚಲಿಸಿತು. ಆದರೆ ಶಾರದ್ವತನು ಮಹಾ ತಪೋನಿಷ್ಠನೂ ಆತ್ಮಶಕ್ತಿಯುಳ್ಳವನೂ ಆದುದರಿಂದ, ಇನ್ನು ತಾನು ಈ ಸ್ಥಳದಲ್ಲಿರಬಾರದೆಂದು ಆ ಅಪ್ಸರಸೆಯ ಕಣ್ಣಿಗೆ ಮರೆಯಾಗಿರಲು, ತನ್ನ ಧನುಸ್ಸನ್ನೂ ಕೃಷ್ಣಾಜಿನವನ್ನೂ ಅಲ್ಲಿಯೇ ಬಿಟ್ಟು ಹೊರಟುಹೋದನು. ಆದರೂ ಅವಳ ದರ್ಶನ ಮಾತ್ರದಿಂದ ಆ ಮಹರ್ಷಿಯ ಎರಡು ತೇಜೋಬಿಂದುಗಳು ಮಾರ್ಗದಲ್ಲಿದ್ದ ಒಂದು ಪೊದೆಯ ಮೇಲೆ ಬಿದ್ದು ಎರಡು ಮಕ್ಕಳಾದುವು. ಹೀಗಿರುವಲ್ಲಿ ಬೇಟೆಗಾಗಿ ಆ ವನಕ್ಕೆ ಬಂದಿದ್ದ ಶಂತನು ಮಹಾರಾಜನ ಸೇವಕನೊಬ್ಬನು ಅವಳಿಜವಳಿಯಾಗಿದ್ದ ಈ ಗಂಡು ಮತ್ತು ಹೆಣ್ಣು ಶಿಶುಗಳೆರಡನ್ನೂ ತಂದು, ಮಹಾರಾಜನಿಗೆ ಒಪ್ಪಿಸಿದನು. ರಾಜನು ಅನಾಥರಾಗಿದ್ದ ಆ ಮಕ್ಕಳನ್ನು ಪ್ರೀತಿಯಿಂದ ತನ್ನ ಪೋಷಣೆಯಲ್ಲಿಯೇ ಇಟ್ಟುಕೊಂಡು ಅಭಿವೃದ್ಧಿಗೆ ತಂದನು. ರಾಜನ ಕೃಪೆಯಿಂದ ಬೆಳೆದ ಈ ಮಕ್ಕಳಿಗೆ ಕೃಪ, ಕೃಪಿ ಎಂಬ ಹೆಸರುಗಳೇ ರೂಢಿಗೆ ಬಂದವು.

ಈ ವಿಚಾರವೆಲ್ಲವನ್ನೂ ಧ್ಯಾನಯೋಗದಿಂದ ತಿಳಿದ ಇವರ ತಾತನಾದ ಗೌತಮ ಮುನಿಯು, ಶಂತನುಮಹಾರಾಜನ ಬಳಿಗೆ ಬಂದು ಆ ಮಕ್ಕಳ ವಂಶಕ್ರಮವನ್ನು ತಿಳಿಸಿ ಕೃಪನಿಗೆ ಧನುರ್ವೇದವನ್ನೂ ಅಸ್ತ್ರಶಾಸ್ತ್ರವೇ ಮೊದಲಾದವುಗಳ ಮರ್ಮಗಳೆಲ್ಲವನ್ನೂ ವಿಸ್ತಾರವಾಗಿ ಬೋಧಿಸಿ ಹೊರಟುಹೋದನು. ಅಯೋನಿಜನಾದ ಈ ಕೃಪಾಚಾರ್ಯನು, ಅತಿರಥ ಮಹಾರಥರೆನಿಸಿದ ಕೌರವ ಪಾಂಡವರಿಗೂ ಯಾದವ ಕೃಷ್ಣಕುಮಾರರುಗಳಿಗೂ ಧನುರ್ವೇದವನ್ನೂ ಅಸ್ತ್ರ ಶಾಸ್ತ್ರವನ್ನೂ ಬೋಧಿಸಿ ಧನುರ್ವೇದಾಚಾರ್ಯನೆನಿಸಿದನು. ಹೀಗೆ ಕೌರವ ಪಾಂಡವರು ಕೃಪಾಚಾರ್ಯನ ಶಿಷ್ಯರಾಗಿ ಅಸ್ತ್ರ ಶಸ್ತ್ರ ವಿದ್ಯೆಗಳಲ್ಲಿ ವಿಶೇಷ ಪಾಂಡಿತ್ಯವನ್ನು ಪಡೆಯುತ್ತಿರುವಾಗ ಭೀಷ್ಮನು ತನ್ನ ಮೊಮ್ಮಕ್ಕಳಿಗೆ ಇನ್ನೂ ಅತಿಶಯವಾದ ಪಾಂಡಿತ್ಯವುಂಟಾಗುವಂತೆ ಮಾಡಬೇಕೆಂದುದ್ದೇಶಿಸಿ, ಬುದ್ಧಿಶಕ್ತಿ ದೇಹಶಕ್ತಿ ಕಾರ್ಯೋತ್ಸಾಹಾದಿಗಳಲ್ಲಿ ಅದ್ವಿತೀಯನೆನಿಸಿದ ಮತ್ತೊಬ್ಬ ಅಸ್ತ್ರಾಚಾರ್ಯನನ್ನು ನಿಯಮಿಸಬೇಕೆಂದಾಲೋಚಿಸಿ ಕೊಂಡನು.

## ದ್ರೋಣಾಚಾರ್ಯ

ಈ ಸಮಯದಲ್ಲಿ, ಕೃಪಾಚಾರ್ಯನ ತಂಗಿ ಕೃಪೆಯ ಗಂಡನಾದ ದ್ರೋಣನು, ಭಾವಮೈದುನನ ಮನೆಗೆ ಬಂದು ಅಲ್ಲಿಯೇ ನಿಂತಿದ್ದನು. ಒಂದಾನೊಂದು ದಿನ ದ್ರೋಣನು, ಹಸ್ತಿನಾಪುರದ ಹೊರಗಡೆಯಲ್ಲಿ ಸಂಚಾರ ಹೋಗಿದ್ದಾಗ, ಅಲ್ಲಿ ಕೌರವ ಪಾಂಡವ ಬಾಲಕರು ಚೆಂಡಾಟ ವನ್ನಾಡುತ್ತಿದ್ದುದನ್ನು ನೋಡುತ್ತ ನಿಂತನು. ಆಟವಾಡುವಾಗ ಚೆಂಡು ಅಲ್ಲಿದ್ದ ಒಂದು ಆಳವಾದ ಬಾವಿಯಲ್ಲಿ ಬಿತ್ತು. ಅದನ್ನು ಹೊರಗೆ ತೆಗೆಯಬೇಕೆಂದು ಆ ಬಾಲಕರೆಲ್ಲರೂ ಎಷ್ಟೋ ಸಾಹಸಮಾಡಿದರೂ ಸಾಧ್ಯವಾಗಲಿಲ್ಲ. ಎಲ್ಲರೂ ನಿರಾಶರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಂತಿರುವಾಗ ಅಲ್ಲಿ ಮುದುಕನಾಗಿ ತೆಳ್ಳಗಿದ್ದ ಒಬ್ಬ ಕರಿಯ ಬ್ರಾಹ್ಮಣನು ಮುಗುಳ್ನಗೆ ನಗುತ್ತ ನಿಂತಿದ್ದುದನ್ನು ಕಂಡು ಎಲ್ಲರೂ ಅತನ ಬಳಿಗೆ ಬಂದರು. ಆಗ ಆ ಬ್ರಾಹ್ಮಣನು ಅವರನ್ನು ನೋಡಿ ನಗುತ್ತ, "ನೀವು ಕ್ಷತ್ರಿಯರಾಗಿ, ಅದರಲ್ಲಿಯೂ ಭರತವಂಶದಲ್ಲಿ ಜನಿಸಿ, ಅಸ್ತ್ರ ವಿದ್ಯಾಭ್ಯಾಸಮಾಡಿ, ಆ ಚೆಂಡನ್ನು ಮೇಲಕ್ಕೆ ಎತ್ತಲಾರದೆ ಹೋದಿರಲ್ಲಾ ! ನಿಮಗೆ ನಾಚಿಕೆಯಾಗುವುದಿಲ್ಲವೇ ? ನೋಡುತ್ತಿರಿ, ನಿಮ್ಮ ಆ ಚೆಂಡನ್ನು ಮಾತ್ರವೇ ಅಲ್ಲ ; ಈ ನನ್ನ ಉಂಗುರವನ್ನೂ ಸಹ ಆ ಬಾವಿಯಿಂದ ಈ ಹುಲ್ಲುಕಡ್ಡಿಗಳ ಮೂಲಕ ಮೇಲಕ್ಕೆ ಎತ್ತಿಕೊಡುತ್ತೇನೆ," ಎಂಬುದಾಗಿ ಹೇಳುತ್ತ ತನ್ನ ಬೆರಳಿನಲ್ಲಿದ್ದ ಉಂಗುರವನ್ನು ಆ ಬತ್ತಿದ್ದ ಆಳವಾದ ಬಾವಿಯೊಳಕ್ಕೆ ಎಸೆದನು. ಅನಂತರ ಆ ರಾಜಪುತ್ರರೆಲ್ಲರೂ ನೋಡುತ್ತಿರುವಂತೆಯೇ ಅಲ್ಲಿದ್ದ ಉದ್ದವಾದ ಜಂಡುಹುಲ್ಲನ್ನು ಕಿತ್ತು ತಂದು ಮಂತ್ರಗಳಿಂದ ಆ ಕಡ್ಡಿಗಳಲ್ಲಿ ಅಸ್ತ್ರಗಳನ್ನಾವಾಹನೆಮಾಡಿ ದ್ರೋಣನು ಬಾವಿಯೊಳಗೆ ಅವುಗಳನ್ನು ಬಿಟ್ಟನು. ಆಗ ಒಂದು ಜಂಡು ಚೆಂಡಿಗೆ ಚುಚ್ಚಿಕೊಂಡಿತು. ಆ ಜಂಡಿಗೆ ಮತ್ತೊಂದು ಜಂಡು ಚುಚ್ಚಿಕೊಂಡಿತು. ಹೀಗೆ ಜಂಡುಗಳು ಸರಪಣಿಯಂತೆ ಒಂದಕ್ಕೊಂದು ಚುಚ್ಚಿಕೊಂಡು ಆ ಚೆಂಡನ್ನು ಮೇಲಕ್ಕೆಳೆದು ತಂದವು. ಇದನ್ನು ನೋಡಿ ಆ ರಾಜಪುತ್ರರಿಗೆ ಅತ್ಯಾಶ್ಚರ್ಯವಾಯಿತು. ಅನಂತರ, ಅಲ್ಲಿದ್ದ ಧನುಸ್ಸೊಂದನ್ನು ತೆಗೆದುಕೊಂಡು ದ್ರೋಣನು ಶರಸಂಧಾನಮಾಡಿ ಬಾವಿಯೊಳಕ್ಕೆ ಬಿಡಲು, ಆ ಬಾಣವು ಉಂಗುರವನ್ನು ಎತ್ತಿಕೊಂಡು

ಬಂದಿತು. ಇದೆಲ್ಲವನ್ನೂ ನೋಡಿ, ಈ ಕರಿಯ ಬಡ ಬ್ರಾಹ್ಮಣನ ಶಕ್ತಿಯಿಂದ ಆಶ್ಚರ್ಯಪಟ್ಟ ಆ ರಾಜಕುಮಾರರು, ಆತನಿಗೆ ನಮಸ್ಕರಿಸಿ, "ಮಹಾನುಭಾವಾ, ನಿಮ್ಮಂತಹ ಶಕ್ತರನ್ನು ನಾವೆಲ್ಲಿಯೂ ನೋಡಲಿಲ್ಲ. ನೀವು ಯಾರು? ನಮ್ಮಿಂದ ನಿಮಗೆ ಏನಾಗಬೇಕು? ದಯವಿಟ್ಟು ಹೇಳಿ," ಎಂಬದಾಗಿ ವಿನಯ ವಿಧೇಯತೆಗಳಿಂದ ಕೇಳಿಕೊಂಡರು. ಅದಕ್ಕೆ ದ್ರೋಣನು, "ಮಕ್ಕಳಿರಾ, ನೀವೀಗಲೇ ಭೀಷ್ಮರ ಬಳಿಗೆ ಹೋಗಿ, ಇಲ್ಲಿ ನಡೆದ ವಿಚಾರವನ್ನೂ ನನ್ನ ಕುರುಹುಗಳನ್ನೂ ಆತನಿಗೆ ವಿವರವಾಗಿ ತಿಳಿಸಿ. ಆಗ ಆತನು, ನಾನು ಯಾರೆಂಬುದನ್ನು ತಿಳಿದುಕೊಳ್ಳುವನು" ಎಂದು ಹೇಳಿದನು. ಆ ಕೂಡಲೇ ಬಾಲಕರು ಹೋಗಿ ಭೀಷ್ಮನಿಗೆ ಈ ಬ್ರಾಹ್ಮಣನ ವಿಚಾರವೆಲ್ಲವನ್ನೂ ತಿಳಿಸಿದರು. ಆಗ ಭೀಷ್ಮನು ತನ್ನ ಮೊಮ್ಮಕ್ಕಳಿಗೆ ಈತನಿಗಿಂತಲೂ ಬುದ್ಧಿಶಾಲಿಯಾದ ಗುರುವೇ ದೊರೆಯಲಾರನೆಂದರಿತು ಬಹಳ ಸಂತೋಷದಿಂದ, ದ್ರೋಣನ ಬಳಿಗೆ ಬಂದು, ಆತನನ್ನು ಬಹಳ ಮರ್ಯಾದೆಯಿಂದ ಅರಮನೆಗೆ ಕರೆತಂದು ಉಪಚರಿಸಿ, ಆತನನ್ನು ಕುರಿತು, "ಸ್ವಾಮೀ ತಾವು ಯಾರು? ತಮ್ಮ ವೃತ್ತಾಂತವೇನು? ನಮ್ಮ ರಾಜಧಾನಿಗೆ ತಾವು ಬಂದ ಕಾರಣವೇನು," ಎಂದು ವಿನಯದಿಂದ ಪ್ರಶ್ನೆಮಾಡಿದನು.

ಆಗ ದ್ರೋಣನು, ಭೀಷ್ಮನನ್ನು ಕುರಿತು, "ವೀರಾಗ್ರಣಿಯಾದ ಭೀಷ್ಮರೇ, ಕೇಳಿ: ನಾನು ನಮ್ಮ ತಂದೆಯಾದ ಭರದ್ವಾಜಮುನಿಯಾಜ್ಞೆಯಂತೆ ಬಾಲ್ಯದಲ್ಲಿ ಅಗ್ನಿವೇಶನೆಂಬ ಮಹಾ ಮುನಿವರನ ಬಳಿಯಲ್ಲಿ ಬ್ರಹ್ಮಚರ್ಯಾಶ್ರಮದಲ್ಲಿದ್ದು ವೇದ ವೇದಾಂಗಗಳೆಲ್ಲವನ್ನೂ ಸಮಗ್ರವಾಗಿ ಅಭ್ಯಾಸಮಾಡಿದೆನು. ಅನಂತರ ಅವರಲ್ಲಿ ಧನುರ್ವೇದವನ್ನಭ್ಯಾಸ ಮಾಡುತ್ತಿರುವಾಗ, ಪಾಂಚಾಲ ದೇಶಾಧಿಪತಿಯಾದ ಪೃಷತರಾಜನ ಪುತ್ರ ದ್ರುಪದನೆಂಬಾತನು ನನ್ನೊಡನೆಯೇ ವಿದ್ಯಾರ್ಥಿಯಾಗಿದ್ದನು. ನಾವಿಬ್ಬರೂ ಪರಮಾಪ್ತ ಸ್ನೇಹಿತರಾಗಿ ಬಹಳ ಹೊಂದಿಕೆಯಿಂದಿದ್ದೆವು. ಆಗ ಆತನು ನನ್ನನ್ನು ನೋಡಿ, 'ದ್ರೋಣಾ, ನಾನು ಪಾಂಚಾಲ ರಾಜ್ಯಕ್ಕೆ ಅರಸನಾದಾಗ, ನನ್ನ ಪಾಲಿಗೆ ಬಂದ ಸಕಲ ಭೋಗಗಳನ್ನೂ ನೀನೂ ಅನುಭವಿಸುವೆ. ಮಿತ್ರಾ! ನಿನಗೆ ಬೇಕಾದ ಉಪಕಾರವನ್ನು ನಾನು ಮಾಡುವೆನು. ಇದು ನನ್ನ ನಿಶ್ಚಯವಾದ ವಾಗ್ದಾನವೆಂದು ತಿಳಿ,' ಎಂಬುದಾಗಿ ಹೇಳಿದ್ದನು.

ಅನಂತರ ನಾನು ವಿದ್ಯಾಭ್ಯಾಸವನ್ನು ಪೂರಯಿಸಿ, ಪೂಜ್ಯರಾದ ಪರಶು ರಾಮರ ಅನುಗ್ರಹದಿಂದ ಅನೇಕ ಮಹಾಸ್ತ್ರಗಳನ್ನು ಪಡೆದು, ಕೃಪಾ ಚಾರ್ಯನ ಸೋದರಿಯಾದ ಕೃಪೆಯನ್ನು ವಿವಾಹಮಾಡಿಕೊಂಡು, ಅವಳಲ್ಲಿ ಅಶ್ವತ್ಥಾಮನೆಂಬ ತೇಜಸ್ವಿಯಾದ ಪುತ್ರನನ್ನು ಪಡೆದೆನು. ಈ ಪುತ್ರನು ಹುಟ್ಟಿದಕೂಡಲೆ ಉಚ್ಚೈಶ್ರವದಂತೆ ಧ್ವನಿಮಾಡಿದನು. ಆ ಕೂಡಲೇ 'ಇವನು ಅಶ್ವದಂತೆಯೂ ಬಹಳ ದೂರಕ್ಕೆ ಕೇಳು ವಂತೆಯೂ ಕೂಗಿದ ಕಾರಣ, ಇವನು ಅಶ್ವತ್ಥಾಮನೆಂಬ ಹೆಸರಿನಿಂದ ಪ್ರಖ್ಯಾತನಾಗುವನು,' ಎಂಬದಾಗಿ ಅಶರೀರವಾಣಿಯು ನುಡಿಯಿತು. ಅದನ್ನು ಕೇಳಿ ಸಂತೋಷಪಟ್ಟು, ನಾನು ಅಶ್ವತ್ಥಾಮನೆಂದೇ ಅವನಿಗೆ ನಾಮಕರಣಮಾಡಿದೆನು. ಅನಂತರ, ಒಂದಾನೊಂದು ದಿನ ಧನಿಕರ ಮಕ್ಕಳಾದ ಕೆಲವರು ಹುಡುಗರು ಹಾಲುಕುಡಿಯುತ್ತಿದ್ದುದನ್ನು ನೋಡಿ ಬಾಲ ಅಶ್ವತ್ಥಾಮನು ತಾನೂ ಹಾಲು ಕುಡಿಯಬೇಕೆಂದು ಅಳುವುದ ಕ್ಕಾರಂಭಿಸಿದನು. ದರಿದ್ರನಾದ ನಾನು ಆ ಮಗುವಿಗೆ ಹಾಲನ್ನು ತಂದುಕೊಡಲು ಸಾಧ್ಯವಾಗಲಿಲ್ಲ. ಆಗ ನೀರಿಗೆ ಅಕ್ಕಿಯ ಹಿಟ್ಟನ್ನು ಕಲೆಸಿ, ಹಾಲೆಂದು ಹೇಳಿ ಪಿಷ್ಟೋದಕವನ್ನು ಕೊಡಲು, ಮಗುವು ಅದನ್ನೇ ಕುಡಿದು ಸಂತೋಷದಿಂದ ತಾನೂ ಹಾಲು ಕುಡಿದೆನೆಂದು ಕುಣಿದಾಡಿದನು. ಇದನ್ನು ನೋಡಿ ನನಗೆ ಬಹಳ ವ್ಯಥೆಯಾಯಿತು. ಆದರೂ ನಾನು ಧನಾರ್ಜನೆಗಾಗಿ ಪರರ ಸೇವೆಮಾಡಲಿಷ್ಟಪಡಲಿಲ್ಲ. ಆ ಸಮಯದಲ್ಲಿ ನನ್ನ ಆಪ್ತಮಿತ್ರನಾಗಿದ್ದ ದ್ರುಪದನು ಪಾಂಚಾಲ ದೇಶದ ಅರಸನಾಗಿರುವನೆಂದು ತಿಳಿದುಬಂತು. ಇದು ನನ್ನ ಸುದೈವ ವೆಂದು ಸಂತೋಷ ಪಟ್ಟು, ಆತನ ಪೂರ್ವದ ವಾಗ್ದಾನವನ್ನು ನೆನೆದು, ನಾನು ನನ್ನ ಪತ್ನಿಯನ್ನೂ ಪುತ್ರನಾದ ಅಶ್ವತ್ಥಾಮನನ್ನೂ ಕರೆದು ಕೊಂಡು, ಆತನ ರಾಜಧಾನಿಗೆ ಹೋದೆನು. ಅಲ್ಲಿ ಅರಮನೆಯಲ್ಲಿ ಸ್ನೇಹಧರ್ಮಕ್ಕೆ ತಕ್ಕಂತೆ ಗುಟ್ಟಾಗಿ ಆತನ ದರ್ಶನಮಾಡಿ, 'ಮಿತ್ರಾ, ನಾನು ನಿನ್ನ ಪೂರ್ವ ಸ್ನೇಹಿತನಾದ ದ್ರೋಣನು. . .' ಎಂದು ಹೇಳುವಷ್ಟರಲ್ಲಿ ಐಶ್ವರ್ಯಪದವೀಮದಮೋಹಿತನಾದ ದ್ರುಪದರಾಜನಿಗೆ ಕೋಪವು ಮಿತಿಮೀರಿತು. ಹುಬ್ಬುಗಳನ್ನು ಗಂಟಿಟ್ಟು, ಕಣ್ಣುಗಳನ್ನು ಕೆಂಡಗಳಂತೆ ಮಾಡಿಕೊಂಡು, ನನ್ನನ್ನು ದುರದುರನೆ ನೋಡಿ, 'ಛೀ!

ಅವಿವೇಕೀ, ನೀನು ನನ್ನನ್ನು ಮಿತ್ರನೆಂದು ಸಂಬೋಧಿಸುವೆಯಾ? ನಿನ್ನಂತಹ ಬುದ್ಧಿಯಿಲ್ಲದ ಅದೃಷ್ಟಹೀನರಿಗೆ ನನ್ನಂತಹ ಮಹಾರಾಜ ರೆಂದಿಗೂ ಮಿತ್ರರಾಗಲಾರರು! ಐಶ್ವರ್ಯ ಪದವಿ ಶಕ್ತಿಗಳಲ್ಲಿ ಅಸಮಾನ ರಾದವರು ಪರಸ್ಪರ ಸ್ನೇಹಿತರೆಂದಿಗೂ ಆಗಲಾರರು. ರಾಜರಿಗೆ ರಾಜರೇ ಸ್ನೇಹಿತರಲ್ಲದೆ ನಿನ್ನಂತಹ ಪಾಮರರು ಸ್ನೇಹಿತರೆನಿಸುವರೇ? ನಾವುಗಳು ಪರಸ್ಪರ ಸಮಾನಸ್ಥಿತಿಯಲ್ಲಿದ್ದಾಗ ಸ್ನೇಹಿತರಾಗಿದ್ದಿರಬಹುದು. ಆ ಕಾಲವು ಕಳೆದು ಹೋಯಿತು. ಆ ಕಾಲದಂತೆಯೇ ಮೈತ್ರಿಯೂ ಕಳೆದು ಹೋಯಿತು. ಹೋಗು ಹೋಗು. ನಾನು ನಿನಗೆ ಯಾವ ವಾಗ್ದಾನ ವನ್ನೂ ಮಾಡಿದಂತೆ ನನಗೆ ಜ್ಞಾಪಕವಿಲ್ಲ. ಬೇಕಾದರೆ ಈ ರಾತ್ರಿ ಒಪ್ಪತ್ತು ನಿನಗೆ ಅನ್ನಹಾಕಿ ಮಲಗಲು ಸ್ಥಳವನ್ನು ಕೊಡಬಲ್ಲೆ!' ಎಂದು ತುಚ್ಛೀಕರಿಸಿ ಮಾತನಾಡಿಬಿಟ್ಟನು. ಅದನ್ನು ಕೇಳಿ ಬೇಸರ ದಿಂದ ನಾನು 'ಆಗಲಿ! ಇದಕ್ಕೆ ತಕ್ಕ ಪ್ರತೀಕಾರವನ್ನು ಕ್ಷಿಪ್ರದಲ್ಲಿಯೇ ಮಾಡುತ್ತೇನೆ' ಎಂದು ಶಪಥಮಾಡಿ ಅಲ್ಲಿಂದ ಕೋಪಾವಿಷ್ಟನಾಗಿ, ನನಗೆ ತಕ್ಕ ಶಿಷ್ಯರು ದೊರೆಯಬೇಕೆಂದು ಬಯಸಿ ಇಲ್ಲಿಗೆ ಬಂದೆನು. ಭೀಷ್ಮರೇ, ನಿಮ್ಮ ಇಷ್ಟದಂತೆ ನಡೆಯಲು ನಾನು ಬಂದಿರುತ್ತೇನೆ. ನನಗೆ ಕರ್ತವ್ಯವನ್ನು ತಿಳಿಸಬೇಕು," ಎಂದನು.

ಇದೆಲ್ಲವನ್ನೂ ಕೇಳಿ ಭೀಷ್ಮನು, ಬಹಳ ಪ್ರೀತಿಯಿಂದ, "ವಿಪ್ರ ವರ್ಯ, ಇದೋ! ಈ ನಮ್ಮ ಕೌರವ ಪಾಂಡವ ಬಾಲಕರೆಲ್ಲರೂ ನಿಮಗೆ ಶಿಷ್ಯರಾಗಿದ್ದಾರೆ— ಇವರಿಗೆ ನೀವು ಧನುರ್ವಿದ್ಯೆಯನ್ನು ಕಲಿಸಿ. ಅಲ್ಲದೆ, ಈ ರಾಜ್ಯಕೋಶ ವೈಭವಗಳು ಸರ್ವವೂ ನಿಮಗೇ ಸೇರಿದುವೆಂದು ತಿಳಿದು, ಬೇಕಾದ ಐಶ್ವರ್ಯ ವೈಭವದಲ್ಲಿ ಸುಖವಾಗಿ ಆನಂದದಿಂದ ಅರಮನೆಯಲ್ಲಿರಿ. ನೀವು ದೊರೆತುದು ನಮ್ಮ ಪುಣ್ಯವಿಶೇಷವು. ನಿಮ್ಮ ಮನಸ್ಸಿನ ಬಯಕೆಯನ್ನು ನಿಮ್ಮಿಷ್ಟಾನುಸಾರವಾಗಿ ನೆರ ವೇರಿಸಿಕೊಳ್ಳಬಹುದು," ಎಂದು ಹೇಳಿ, ಅನುಕೂಲವಾದ ಮನೆ ಯೊಂದರಲ್ಲಿ ಆತನಿಗೆ ನಿಲ್ಲಲು ತಕ್ಕಂತೆ ಎಲ್ಲ ಸೌಕರ್ಯಗಳನ್ನೂ ಮಾಡಿಸಿ ಕೊಟ್ಟನು. ಅನಂತರ ದ್ರೋಣನು ಕೌರವ ಪಾಂಡವರೆಲ್ಲರನ್ನೂ ಪ್ರೀತಿ ಯಿಂದ ಬಳಿಗೆ ಕರೆದು, "ಮಕ್ಕಳಿರಾ, ನನ್ನ ಮನಸ್ಸಿನಲ್ಲಿ ಒಂದು ಸಂಕಲ್ಪವಿದೆ. ನೀವು ಧನುರ್ವೇದದಲ್ಲಿ ಪಾರಂಗತರಾದ ಮೇಲೆ

ಆದನ್ನು ನೆರವೇರಿಸಿ ಕೊಡುವಿರಾ? ಹಾಗಿದ್ದರೆ, ನನಗೆ ವಾಗ್ದಾನ ಮಾಡಿ" ಎಂದನು. ಇದನ್ನು ಕೇಳಿ ಕೌರವರೆಲ್ಲರೂ ಸ್ತಬ್ಧರಾಗಿ ಸುಮ್ಮ ನಿದ್ದರು. ಪಾಂಡವರಲ್ಲಿ ಅರ್ಜುನನು ಮುಂದೆ ಬಂದು ತಾನು ಆ ಸಂಕಲ್ಪವನ್ನು ನೆರವೇರಿಸಿ ಕೊಡುವೆನೆಂಬುದಾಗಿ ಪ್ರತಿಜ್ಞೆಮಾಡಿದನು. ಆದನ್ನು ಕೇಳಿ, ದ್ರೋಣನು ಅತ್ಯಾನಂದಭರಿತನಾಗಿ, ಅರ್ಜುನನನ್ನು ಪ್ರೀತಿಯಿಂದಾಲಿಂಗಿಸಿ ಅಭಿನಂದಿಸಿದನು. ಧನುರ್ವಿದ್ಯಾವಿಶಾರದನಾದ ದ್ರೋಣನು ಅಲ್ಲಿಂದ ಮುಂದೆ ಕೌರವ ಪಾಂಡವ ಬಾಲಕರೆಲ್ಲರಿಗೂ ಆಚಾರ್ಯನಾಗಿ ನಾನಾಸ್ತ್ರಶಸ್ತ್ರಗಳ ಪ್ರಯೋಗಗಳನ್ನೂ ಧನುರ್ವಿದ್ಯಾ ಮರ್ಮಗಳನ್ನೂ ಬೋಧಿಸುತ್ತಿದ್ದನು. ಆಗ ವೃಷ್ಣಿಕುಮಾರರೇ ಮೊದ ಲಾಗಿ ಇನ್ನೂ ಅನೇಕ ದೇಶಗಳ ರಾಜಕುಮಾರರೂ ಧನುರ್ವಿದ್ಯೆಯನ್ನು ಕಲಿಯಲು ಬಂದು ದ್ರೋಣಾಚಾರ್ಯನ ಶಿಷ್ಯರಾದರು. ಸೂತಪುತ್ರನಾದ ವಸುಸೇನನೂ ಸಹ ಈ ಕೌರವ ಪಾಂಡವರೊಡನೆ ಸೇರಿ ದ್ರೋಣಾ ಚಾರ್ಯನ ಶಿಷ್ಯನಾಗಿ ಅಸ್ತ್ರಶಸ್ತ್ರ ವಿದ್ಯಾಭ್ಯಾಸ ಮಾಡತೊಡಗಿದನು. ಈ ವಸುಸೇನನಿಗೆ ಈವರೆಗೆ ಕರ್ಣನೆಂಬ ಹೆಸರು ರೂಢಿಗೆ ಬಂದಿತ್ತು. ಕರ್ಣನಿಗೆ ಅರ್ಜುನನನ್ನು ಕಂಡರೆ ವಿಶೇಷವಾದ ಅಸೂಯೆಯಿತ್ತು. ಇದರ ಜೊತೆಗೆ ದುರ್ಯೋಧನನ ಬೆಂಬಲವು ಇವನಿಗೆ ವಿಶೇಷವಾಗಿದ್ದು ದರಿಂದ ಇವನು ಪಾಂಡವರನ್ನು ಕಂಡರೆ ಬಹಳ ಉದಾಸೀನ ಭಾವದಿಂದ ವರ್ತಿಸುತ್ತಿದ್ದನು.

ಅರ್ಜುನನು ವಿಶೇಷವಾದ ಆಸಕ್ತಿಯಿಂದ ಧನುರ್ವಿದ್ಯಾಭ್ಯಾಸ ಮಾಡುತ್ತ ಯುಕ್ತಿ ಶಕ್ತಿ ಸಾಹಸ ಕೌಶಲಗಳಲ್ಲಿ ತನ್ನ ಸಹಪಾಠಿಗಳೆಲ್ಲ ರನ್ನೂ ಮೀರಿಸಿದ್ದನು. ದ್ರೋಣಾಚಾರ್ಯನು ಎಲ್ಲರಿಗೂ ಒಂದೇ ಸಮ ನಾಗಿ ವಿದ್ಯಾಭ್ಯಾಸಮಾಡಿಸಿದರೂ, ಅರ್ಜುನನ ಸಮಾನ ವೀರನು ಆ ಗುಂಪಿನಲ್ಲಿ ಮತ್ತೆಯಾವನೂ ಇರಲಿಲ್ಲ. ಈ ವಿಚಾರವು ದ್ರೋಣಾ ಚಾರ್ಯನ ಮನಸ್ಸಿಗೂ ಗೋಚರವಾಗಿತ್ತು.

ಒಂದು ದಿನ ರಾತ್ರಿ ಅರ್ಜುನನು ಕತ್ತಲಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸ ಮಾಡುತ್ತಿರುವಾಗ ಧನುಷ್ಟಂಕಾರವನ್ನು ಕೇಳಿದ ದ್ರೋಣನು, ಆಶ್ಚರ್ಯ ಸಂತೋಷಗಳಿಂದ ಅವನ ಬಳಿಗೆ ಬಂದು ನೋಡಿ, "ಅರ್ಜುನಾ! ನಿನ್ನ ಉತ್ಸಾಹಾಸಕ್ತಿಗಳಿಂದ ನನಗತ್ಯಂತಸಂತೋಷವಾಯಿತು.

ಲೋಕದಲ್ಲಿ ನಿನ್ನ ಸಮಾನನಾದ ಬಿಲ್ಗಾರನು ಮತ್ತೆ ಯಾವನೂ ಇಲ್ಲದಿರುವಂತೆ ನಿನಗೆ ನಾನು ಶಿಕ್ಷಣವನ್ನು ಕೊಡುವೆನು," ಎಂಬುದಾಗಿ ವಾಗ್ದಾನಮಾಡಿ ಅಭಿನಂದಿಸಿದನು.

ಅನಂತರ ಅವನಿಗೆ ದ್ರೋಣಾಚಾರ್ಯನು, ಕುದುರೆಯ ಮೇಲೆಯೂ ಆನೆಯ ಮೇಲೆಯೂ ರಥದ ಮೇಲೆಯೂ ಕುಳಿತಾಗಲಿ, ನೆಲದ ಮೇಲೆ ನಿಂತಾಗಲಿ, ಧೈರ್ಯ ಶೌರ್ಯ ಕೌಶಲಗಳಿಂದ ಯುದ್ಧಮಾಡತಕ್ಕ ಕ್ರಮಗಳೆಲ್ಲವನ್ನೂ ಕಲಿಸಿದುದು ಮಾತ್ರವಲ್ಲದೆ, ಗದಾಯುದ್ಧ, ಖಡ್ಗಯುದ್ಧ, ಶಲ್ಯಯುದ್ಧ ಮೊದಲಾದ ನಾನಾ ವಿಧವಾದ ಶಸ್ತ್ರಯುದ್ಧದ ರೀತಿಗಳನ್ನೂ ಬೋಧಿಸಿ, ಅವನನ್ನು ಸುಶಿಕ್ಷಿತನನ್ನಾಗಿ ಮಾಡಿದನು. ಅರ್ಜುನನ ಕಲಾ ಕೌಶಲದ ಕೀರ್ತಿಯನ್ನು ಕೇಳಿ, ಇನ್ನೂ ಸಾವಿರಾರು ಮಂದಿ ರಾಜಕುಮಾರರುಗಳು ಅಸ್ತ್ರಶಸ್ತ್ರ ವಿದ್ಯೆಗಳನ್ನು ಕಲಿಯುವ ಕುತೂಹಲದಿಂದ ಬಂದು ದ್ರೋಣಾಚಾರ್ಯನಿಗೆ ಶಿಷ್ಯರಾದರು.

## ಏಕಲವ್ಯ

ಹಿರಣ್ಯಧನ್ವನೆಂಬ ನಿಷಾಧಾಧಿಪತಿಯ ಪುತ್ರನಾದ ಏಕಲವ್ಯನು ದ್ರೋಣಾಚಾರ್ಯನ ಕೀರ್ತಿಯನ್ನು ಕೇಳಿ, ಒಂದಾನೊಂದು ದಿನ ಆತನ ಬಳಿಗೆ ಬಂದು, ತನಗೂ ಧನುರ್ವಿದ್ಯೆಯನ್ನು ಬೋಧಿಸಬೇಕೆಂದು ಕೇಳಿಕೊಂಡನು. ದ್ರೋಣಾಚಾರ್ಯನು ಆಲೋಚಿಸಿ, ರಾಜಪುತ್ರರ ಜೊತೆಯಲ್ಲಿ ಬೇಡರವನಿಗೆ ವಿದ್ಯೆಹೇಳುವುದರಿಂದ ಆ ರಾಜಕುಲಕ್ಕೆ ತಾನು ಅವಮಾನ ಮಾಡಿದಂತಾಗುವುದೆಂದೆಣಿಸಿ, ಏಕಲವ್ಯನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ವಿದ್ಯಾಭ್ಯಾಸಮಾಡಿಸಲು ಸಾಧ್ಯವಿಲ್ಲವೆಂದು ಹೇಳಿಬಿಟ್ಟನು. ಇದನ್ನು ಕೇಳಿದ ಏಕಲವ್ಯನು ದ್ರೋಣಾಚಾರ್ಯನ ಪಾದಗಳಿಗೆ ನಮಸ್ಕಾರಮಾಡಿ, ಅರಣ್ಯಕ್ಕೆ ಹೋಗಿ, ಅಲ್ಲಿ ಜೇಡಿಯ ಮಣ್ಣಿನಿಂದ ದ್ರೋಣಾಚಾರ್ಯನಂತೆ ಒಂದು ಬೊಂಬೆಯನ್ನು ಮಾಡಿಟ್ಟುಕೊಂಡು, ಅದನ್ನೇ ತನ್ನ ಗುರುವೆಂದು ಭಾವಿಸಿ ಪೂಜಿಸುತ್ತ ಅದರ ಎದುರಾಗಿ ನಿಂತು, ಪ್ರತಿ ನಿತ್ಯವೂ ಕ್ರಮವಾಗಿ ಬಹಳ ಆಸಕ್ತಿಯಿಂದ ಧನುರ್ವಿದ್ಯೆಯನ್ನು ಅಭ್ಯಾಸಮಾಡುತ್ತ ಬಂದನು. ಹೀಗೆ ಅವನ ವಿಶೇಷವಾದ ಗುರುಭಕ್ತಿಯಿಂದಲೂ, ವಿದ್ಯಾಸಕ್ತಿಯಿಂದಲೂ, ಅವನಿಗೆ ಶರಗಳ

ಸಂಧಾನ ಆಧಾನ ವಿಕ್ಷೇಪಣಾದಿಗಳು ಬಹಳ ಸುಲಭವಾ ಬಂದುಬಿಟ್ಟವು.

ಒಂದಾನೊಂದು ದಿನ ಕೌರವ ಪಾಂಡವ ಕುಮಾ ದ್ರೋಣಾಚಾರ್ಯನ ಅಪ್ಪಣೆಯನ್ನು ಪಡೆದು, ಬೇಟೆಗೆಂದು ರಥಾ ರಾಗಿ ಹೊರಟರು. ಅವರಿಗೆ ಬೇಕಾದ ಪದಾರ್ಥಗಳನ್ನು ತೆ ಕೊಂಡು ಒಬ್ಬ ಸೇವಕನು ನಾಯಿಯೊಂದನ್ನು ಕರೆದುಕೊಂಡು ಅವ ಹಿಂದೆ ಹೋದನು. ರಾಜಕುಮಾರರೆಲ್ಲರೂ ಬೇಟೆಯಾಡಿಕೊಂಡು ಅರಣ್ಯವನ್ನೆಲ್ಲವನ್ನೂ ಸುತ್ತುತ್ತಿರುವಾಗ ಆ ನಾಯಿಯೂ ಸಹ ಒಂಟಿ ಯಾಗಿ ಅಲ್ಲಲ್ಲಿ ಅಲೆಯುತ್ತ ನಿಷಾದ ಪುತ್ರನಾದ ಏಕಲವ್ಯನಿದ್ದ ಕಡೆಗೆ ಬಂತು. ಅಲ್ಲಿ ಮೈಯೆಲ್ಲವೂ ಕೊಳೆಯಾಗಿ, ಕರಿಯ ಚರ್ಮವನ್ನು ಹೊದ್ದು, ಜಡೆಗಟ್ಟಿದ್ದ ಕೂದಲಿನಿಂದಲೂ ಕರ್ರಗೂ ಇದ್ದ ಅವನನ್ನು ನೋಡಿ, ಅದು ಬಗುಳುವುದಕ್ಕಾರಂಭಿಸಿತು. ಆಗ ಏಕಲವ್ಯನು ತನ್ನ ಹಸ್ತಲಾಘವವನ್ನು ತೋರಿಸಲು, ಬಗುಳುತ್ತಿದ್ದ ಆ ನಾಯಿಯ ಬಾಯಿ ಯೊಳಕ್ಕೆ ಸರಿಯಾಗಿ ಏಳು ಬಾಣಗಳನ್ನು ಗುರಿತಪ್ಪದೆ ಹೊಡೆದನು. ಆಗ ನಾಯಿಯು, ಬಾಯಿ ತುಂಬ ಚುಚ್ಚಿಕೊಂಡಿದ್ದ ಬಾಣಗಳ ಸಹಿತ ವಾಗಿ ಪಾಂಡವರಿದ್ದ ಕಡೆಗೆ ಬರಲು, ಅವರು ಅದನ್ನು ನೋಡಿ, ಏಕ ಕಾಲದಲ್ಲಿ ಒಂದೇ ಗುರಿಯಿಂದ ಏಳು ಬಾಣಗಳನ್ನು ಹೊಡೆದ ವೀರನ ಕರಕೌಶಲವನ್ನು ಮೆಚ್ಚಿ, ಅವನು ಯಾರಿರಬಹುದೆಂದು ಅವನನ್ನು ಕಂಡುಹಿಡಿಯಲು ಅರಣ್ಯದಲ್ಲೆಲ್ಲ ಹುಡುಕುತ್ತ ಬಂದರು. ಒಂದೆಡೆ ಯಲ್ಲಿ, ಧನುಸ್ಸಿಗೆ ಬಾಣಗಳನ್ನು ಸಂಧಾನಮಾಡಿ ಶರಪರಂಪರೆಗಳನ್ನು ಅತಿವೇಗವಾಗಿ ಬಿಡುತ್ತಿದ್ದ ವೀರನನ್ನು ನೋಡಿ, "ನೀನು ಯಾರು? ಯಾರ ಮಗನು?" ಎಂಬದಾಗಿ ಪ್ರಶ್ನೆಮಾಡಿದರು. ಅದಕ್ಕೆ ಅವನು, "ನಾನು ನಿಷಾಧಾಧಿಪತಿಯಾದ ಹಿರಣ್ಯಧನ್ವನ ಮಗನು, ದ್ರೋಣಾ ಚಾರ್ಯರ ಶಿಷ್ಯನು. ಅವರ ಸನ್ನಿಧಿಯಲ್ಲಿ ಅಸ್ತ್ರ ವಿದ್ಯಾಭ್ಯಾಸಮಾಡು ತ್ತಿರುವೆನು," ಎಂದು ಮೊದಲಾಗಿ ತನ್ನ ವೃತ್ತಾಂತವನ್ನು ಹೇಳಿದನು. ಅನಂತರ ಅವರೆಲ್ಲರೂ ಹಸ್ತಿನಾಪುರಕ್ಕೆ ಬಂದು, ಅರಣ್ಯದಲ್ಲಿ ತಾವು ನೋಡಿದ ಧನುರ್ವಿದ್ಯಾ ಕೌಶಲವನ್ನು ಕುರಿತು ದ್ರೋಣಾಚಾರ್ಯ ನೊಡನೆ ವಿವರವಾಗಿ ಹೇಳಿದರು.

..ರ್ಜನನಿಗಾದರೋ ಪ್ರತಿಕ್ಷಣದಲ್ಲಿಯೂ ಏಕಲವ್ಯನ ವಿಚಾರ ..ಂತೆಯೇ ಆಗಿತ್ತು. ಅವನು ಗುಟ್ಟಾಗಿ ದ್ರೋಣಾಚಾರ್ಯನ ..ಎಂದು, ನಮಸ್ಕರಿಸಿ, "ಸ್ವಾಮೀ, ಆ ದಿನ ರಾತ್ರಿ ತಾವು ನನ್ನ ..ಬಂದು ಬಹಳ ಸಂತೋಷದಿಂದ, ಲೋಕದಲ್ಲಿ ನನ್ನ ಸಮಾನ ..ವ ಬಿಲ್ಗಾರನು ಯಾರೂ ಇಲ್ಲದಿರುವಂತೆ ನನಗೆ ಶಿಕ್ಷಣ ಕೊಡುವೆ ..ಂದು ಅಪ್ಪಣೆ ಕೊಡಿಸಿ ಅಭಿನಂದಿಸಿ ಆಶೀರ್ವದಿಸಿದಿರಲ್ಲವೇ ? ಈಗ ಒಬ್ಬ ನಿಷಾದನ ಪುತ್ರನು ನಿಮ್ಮ ಶಿಷ್ಯನಾಗಿ ನನ್ನಂತೆಯೇ ಧನುರ್ವಿದ್ಯಾ ಕೌಶಲವನ್ನು ಪಡೆದಿರುವನಲ್ಲಾ ! ಇದರ ಅರ್ಥವೇನು ?" ಎಂಬದಾಗಿ ಪ್ರಶ್ನೆಮಾಡಿದನು.

ಇದನ್ನು ಕೇಳಿ ದ್ರೋಣಾಚಾರ್ಯನು ಸ್ವಲ್ಪ ಹೊತ್ತು ಆಲೋಚಿಸಿ, ಅರ್ಜುನನನ್ನೂ ಕರೆದುಕೊಂಡು ಆಗಲೇ ಹೊರಟು, ಆ ನಿಷಾದ ಪುತ್ರನಾದ ಏಕಲವ್ಯನಿದ್ದ ಕಡೆಗೆ ಬಂದನು. ಇದನ್ನು ನೋಡಿ, ಹರುಕು ಬಟ್ಟೆಗಳನ್ನು ಧರಿಸಿ ವಿಕಾರಸ್ವರೂಪನಾಗಿದ್ದ ಏಕಲವ್ಯನು ಮುಂದಕ್ಕೆ ಬಂದು, ದ್ರೋಣಾಚಾರ್ಯನ ಪಾದಗಳಿಗೆ ನಮಸ್ಕಾರಮಾಡಿ, ಆತನನ್ನು ಪೂಜಿಸಿ, ತಾನು ಆತನ ಶಿಷ್ಯನೆಂಬದಾಗಿ ಹೇಳಿಕೊಂಡು ವಿಧೇಯತೆಯಿಂದ ಕೈಮುಗಿದು ನಿಂತನು.

ಆಗ ದ್ರೋಣಾಚಾರ್ಯನು ಅವನನ್ನು ಕುರಿತು, "ಏಕಲವ್ಯಾ, ನೀನು ನಿಜವಾಗಿಯೂ ನನ್ನ ಶಿಷ್ಯನಾದರೆ, ನನಗೆ ಗುರುದಕ್ಷಿಣೆಯನ್ನು ಕೊಡುವೆಯಾ ?" ಎಂದು ಪ್ರಶ್ನೆಮಾಡಿದನು. ಇದನ್ನು ಕೇಳಿ, ದ್ರೋಣಾಚಾರ್ಯನು ತನ್ನನ್ನು ಶಿಷ್ಯನೆಂಬದಾಗಿ ಒಪ್ಪಿಕೊಂಡನಲ್ಲಾ ಎಂಬ.. ಉಕ್ಕಿಬಂದ ಸಂತೋಷದಿಂದ, ಆತನನ್ನು ಕುರಿತು, "ಸ್ವಾಮೀ, ಬ್ರಹ್ಮಜ್ಞಾನಿಗಳೂ ನನ್ನ ಗುರುವರ್ಯರೂ ಆದ ತಮಗೆ ಕೊಡಲಾಗದ ವಸ್ತುವು ಯಾವುದುತಾನೇ ಇರುವುದು ? ನನ್ನಿಂದ ಗುರುದಕ್ಷಿಣೆಗಾಗಿ ಏನನ್ನಪೇಕ್ಷಿಸುವಿರಿ ? ಅಪ್ಪಣೆಯಾಗಬೇಕು," ಎಂಬುದಾಗಿ ವಿನಯ ವಿಧೇಯತೆಗಳಿಂದ ಪ್ರಶ್ನೆಮಾಡಿದನು.

ಆದಕ್ಕೆ ದ್ರೋಣನು, ತಾನು ಅರ್ಜುನನಿಗೆ ಮಾಡಿದ್ದ ವಾಗ್ದಾ..ನವನ್ನು ಸಾರ್ಥಕಗೊಳಿಸುವ ಉದ್ದೇಶದಿಂದ, ಅವನನ್ನು ಕುರಿತು.. "ಏಕಲವ್ಯಾ, ಗುರುದಕ್ಷಿಣೆಗಾಗಿ ನನಗೆ ನಿನ್ನ ಹೆಬ್ಬೆರಳನ್ನು ಕೊಡು,"

ಸಂಧಾನ ಆಧಾನ ವಿಕ್ಷೇಪಣಾದಿಗಳು ಬಹಳ ಸುಲಭವಾ ಕೇಳಿ ಸತ್ಯ ಬಂದುಬಿಟ್ಟವು. ನೂ ಆದ

ಒಂದಾನೊಂದು ದಿನ ಕೌರವ ಪಾಂಡವ ಕುಮಾರರಂತೋಷ ದ್ರೋಣಾಚಾರ್ಯನ ಅಪ್ಪಣೆಯನ್ನು ಪಡೆದು, ಬೇಟೆಗೆಂದು ರಥಾ ತನ್ನ ರಾಗಿ ಹೊರಟರು. ಅವರಿಗೆ ಬೇಕಾದ ಪದಾರ್ಥಗಳನ್ನು ತೆಗೆಂತರ ಕೊಂಡು ಒಬ್ಬ ಸೇವಕನು ನಾಯಿಯೊಂದನ್ನು ಕರೆದುಕೊಂಡು ಅವೇಗ ಹಿಂದೆ ಹೋದನು. ರಾಜಕುಮಾರರೆಲ್ಲರೂ ಬೇಟೆಯಾಡಿಕೊಂಡು ಅರಣ್ಯವನ್ನೆಲ್ಲವನ್ನೂ ಸುತ್ತುತ್ತಿರುವಾಗ ಆ ನಾಯಿಯೂ ಸಹ ಒಂಟಿ ಯಾಗಿ ಅಲ್ಲಲ್ಲಿ ಅಲೆಯುತ್ತ ನಿಷಾದ ಪುತ್ರನಾದ ಏಕಲವ್ಯನಿದ್ದ ಕಡೆಗೆ ಬಂತು. ಅಲ್ಲಿ ಮೈಯೆಲ್ಲವೂ ಕೊಳೆಯಾಗಿ, ಕರಿಯ ಚರ್ಮವನ್ನು ಹೊದ್ದು, ಜಡೆಗಟ್ಟಿದ್ದ ಕೂದಲಿನಿಂದಲೂ ಕರ್ರಗೂ ಇದ್ದ ಅವನನ್ನು ನೋಡಿ, ಅದು ಬಗುಳುವುದಕ್ಕಾರಂಭಿಸಿತು. ಆಗ ಏಕಲವ್ಯನು ತನ್ನ ಹಸ್ತಲಾಘವವನ್ನು ತೋರಿಸಲು, ಬಗುಳುತ್ತಿದ್ದ ಆ ನಾಯಿಯ ಬಾಯಿ ಯೊಳಕ್ಕೆ ಸರಿಯಾಗಿ ಏಳು ಬಾಣಗಳನ್ನು ಗುರಿತಪ್ಪದೆ ಹೊಡೆದನು. ಆಗ ನಾಯಿಯು, ಬಾಯಿ ತುಂಬ ಚುಚ್ಚಿಕೊಂಡಿದ್ದ ಬಾಣಗಳ ಸಹಿತ ವಾಗಿ ಪಾಂಡವರಿದ್ದ ಕಡೆಗೆ ಬರಲು, ಅವರು ಅದನ್ನು ನೋಡಿ, ಏಕ ಕಾಲದಲ್ಲಿ ಒಂದೇ ಗುರಿಯಿಂದ ಏಳು ಬಾಣಗಳನ್ನು ಹೊಡೆದ ವೀರನ ಕರಕೌಶಲವನ್ನು ಮೆಚ್ಚಿ, ಅವನು ಯಾರಿರಬಹುದೆಂದು ಅವನನ್ನು ಕಂಡುಹಿಡಿಯಲು ಅರಣ್ಯದಲ್ಲೆಲ್ಲ ಹುಡುಕುತ್ತ ಬಂದರು. ಒಂದೆಡೆ ಯಲ್ಲಿ, ಧನುಸ್ಸಿಗೆ ಬಾಣಗಳನ್ನು ಸಂಧಾನಮಾಡಿ ಶರಪರಂಪರೆಗಳನ್ನು ಅತಿವೇಗವಾಗಿ ಬಿಡುತ್ತಿದ್ದ ವೀರನನ್ನು ನೋಡಿ, "ನೀನು ಯಾರು? ಯಾರ ಮಗನು?" ಎಂಬದಾಗಿ ಪ್ರಶ್ನೆಮಾಡಿದರು. ಅದಕ್ಕೆ ಅವನು, "ನಾನು ನಿಷಾಧಾಧಿಪತಿಯಾದ ಹಿರಣ್ಯಧನ್ವನ ಮಗನು, ದ್ರೋಣಾ ಚಾರ್ಯರ ಶಿಷ್ಯನು. ಅವರ ಸನ್ನಿಧಿಯಲ್ಲಿ ಅಸ್ತ್ರ ವಿದ್ಯಾಭ್ಯಾಸಮಾಡು ತ್ತಿರುವೆನು," ಎಂದು ಮೊದಲಾಗಿ ತನ್ನ ವೃತ್ತಾಂತವನ್ನು ಹೇಳಿದನು. ಅನಂತರ ಅವರೆಲ್ಲರೂ ಹಸ್ತಿನಾಪುರಕ್ಕೆ ಬಂದು, ಅರಣ್ಯದಲ್ಲಿ ತಾವು ನೋಡಿದ ಧನುರ್ವಿದ್ಯಾ ಕೌಶಲವನ್ನು ಕುರಿತು ದ್ರೋಣಾಚಾರ್ಯ ನೊಡನೆ ವಿವರವಾಗಿ ಹೇಳಿದರು.

ಅಪ್ಪಣೆಯನ್ನು ಪಡೆದು, ಹಸ್ತಿನಾಪುರದ ಹೊರಗಣ ಬಯಲಿನಲ್ಲಿ, ಅವರೆಲ್ಲರ ಅಸ್ತ್ರಶಸ್ತ್ರ ವಿದ್ಯಾಪ್ರದರ್ಶನವನ್ನೇರ್ಪಡಿಸಿದನು. ಅಲ್ಲಿನ ಪ್ರೇಕ್ಷಕರಿಗಾಗಿ ಅನೇಕ ಜಗುಲಿಗಳೂ ವೇದಿಕೆಗಳೂ ಅಂತಸ್ತಿನ ಪೀಠಗಳೂ ಅಸಂಖ್ಯಾತವಾಗಿ ಏರ್ಪಡಿಸಲ್ಪಟ್ಟವು. ಅಲ್ಲಿಗೆ ರಾಜರ ಮನೆತನದವರೂ ಪುರದ ಶ್ರೀಮಂತರಾದಿಯಾಗಿ ಅಸಂಖ್ಯಾತ ಜನರೂ ಬಂದು ಪ್ರೇಕ್ಷಕರಾಗಿದ್ದರು. ರಾಜಕುಮಾರರೆಲ್ಲರೂ ತಮ್ಮ ತಮ್ಮ ವಿದ್ಯಾಕೌಶಲಗಳನ್ನು ಬಹಳ ಚೆನ್ನಾಗಿ ತೋರ್ಪಡಿಸಿದರು. ಭೀಮಸೇನನಿಗೂ ದುರ್ಯೋಧನನಿಗೂ ಗದಾಯುದ್ಧವು ನಡೆಯಿತು. ರಾಜಕುಮಾರರು ಮಾಡಿ ತೋರಿಸಿದ ಸಾಹಸ ಕೃತ್ಯಗಳೆಲ್ಲವನ್ನೂ ವಿದುರನು ಧೃತರಾಷ್ಟ್ರನಿಗೂ, ಕುಂತಿ ಗಾಂಧಾರಿಯರಿಗೂ ವಿವರಿಸಿ ಹೇಳುತ್ತಿದ್ದನು. ಈ ಸಮಯದಲ್ಲಿ ಆವೇಶಪೂರಿತವಾಗಿ ಗದಾಯುದ್ಧ ಮಾಡುತ್ತಿದ್ದ ದುರ್ಯೋಧನ ಭೀಮಸೇನರ ಪಕ್ಷಗಳನ್ನು ವಹಿಸಿ ಬಿಟ್ಟು ಪ್ರೇಕ್ಷಕರ ಗುಂಪೇ ಎರಡು ಭಾಗವಾಗಿ, ಎಲ್ಲೆಲ್ಲಿಯೂ ಉಂಟಾದ ಅದ್ಭುತ ಕೋಲಾಹಲದಿಂದ ಆ ಸ್ಥಳವೆಲ್ಲವೂ ಪ್ರಕ್ಷುಬ್ಧಸಾಗರದಂತಾಯಿತು

ಆಗ ದ್ರೋಣಾಚಾರ್ಯನು ತನ್ನ ಮಗನಾದ ಅಶ್ವತ್ಥಾಮನನ್ನು ಕರೆದು, "ಅದ್ಭುತ ಪರಾಕ್ರಮಶಾಲಿಗಳಾದ ಇವರಿಬ್ಬರ ಪಕ್ಷಗಳನ್ನು ವಹಿಸಿರುವ ಪ್ರೇಕ್ಷಕರ ಮನಸ್ಸಿನಲ್ಲಿ ವೀರಾವೇಶವು ಉಕ್ಕಬಹುದು. ಆದುದರಿಂದ ನೀನು ಮೊದಲು ಈ ವೀರರಿಬ್ಬರನ್ನೂ ಶಾಂತಗೊಳಿಸಿ ಗದಾಯುದ್ಧವನ್ನು ನಿಲ್ಲಿಸುವಂತೆ ಮಾಡು," ಎಂಬುದಾಗಿ ಹೇಳಲು, ಅದರಂತೆ ಅಶ್ವತ್ಥಾಮನು ದುರ್ಯೋಧನಭೀಮಸೇನರಿಬ್ಬರನ್ನೂ ಶಾಂತಗೊಳಿಸಿದನು.

ಅನಂತರ ಇಂದ್ರಪುತ್ರನಾದ ಅರ್ಜುನನು ರಂಗಕ್ಕೆ ಬಂದು ನಿಂತು ಚಿತ್ರ ವಿಚಿತ್ರಗಳಾದ ಅಸ್ತ್ರಗಳನ್ನು ಪ್ರಯೋಗಿಸಿ, ಪ್ರೇಕ್ಷಕರಿಗೆ ಆನೇಕಾಶ್ಚರ್ಯಕರವಾದ ಸಾಹಸಗಳನ್ನು ತೋರಿಸಿ ಎಲ್ಲರ ಮೆಚ್ಚಿಕೆಗೂ ಪಾತ್ರನಾದನು.

## ಕರ್ಣ

ಈ ಸಮಯದಲ್ಲಿ ಮಹಾ ತೇಜಸ್ವಿಯಾದ ಕರ್ಣನು ಭುಜವನ್ನು ತಟ್ಟುತ್ತ ಅಲ್ಲಿಗೆ ಪ್ರವೇಶಿಸಿ, ಅರ್ಜುನನನ್ನು ಕುರಿತು,

“ಪಾರ್ಥಾ! ನೀನು ಮಾಡಿದ ಕಾರ್ಯಗಳೇನೂ ಅಸಾಧ್ಯವಲ್ಲ. ನಾನು ಅವಕ್ಕಿಂತಲೂ ಅತಿಶಯವಾದ ಸಾಹಸ ಚಮತ್ಕಾರ ಕಾರ್ಯಗಳನ್ನು ಮಾಡಿ ತೋರಿಸುವೆನು. ನೀನೇ ನೋಡಿ ಆಶ್ಚರ್ಯಪಡುವೆ!” ಎಂಬದಾಗಿ ಮೇಘ ಗರ್ಜನೆಯಂತೆ ಗಟ್ಟಿಯಾಗಿ ಕೂಗಿ ಹೇಳಿದನು. ಇದನ್ನು ಕೇಳಿದೊಡನೆಯೇ ಪ್ರೇಕ್ಷಕರು ತಟ್ಟನೆ ಮೇಲಕ್ಕೆ ಎದ್ದು ಉತ್ಸಾಹದಿಂದಲೂ ಸಂತೋಷದಿಂದಲೂ ಕೂಗಿಕೊಂಡರು. ಅರ್ಜುನನ ಮನಸ್ಸಿನಲ್ಲಿ, ಮಹಾ ರೋಷಾವೇಶವೂ ದುರ್ಯೋಧನನ ಮನಸ್ಸಿನಲ್ಲಿ ಸಂತೋಷೋತ್ಸಾಹಗಳೂ ಉಕ್ಕಿಬಂದವು. ಅನಂತರ, ತಾನು ಜನಿಸಿದಾಗಲೇ ತನಗಿದ್ದ ದಿವ್ಯ ಕವಚ ಕುಂಡಲಗಳಿಂದ ಕೂಡಿ, ಅಸ್ತ್ರ ಶಸ್ತ್ರಗಳನ್ನೂ ಮಹಾ ಧನುಸ್ಸನ್ನೂ ಧರಿಸಿ ಬಂದ ಕರ್ಣನಿಗೆ ದುರ್ಯೋಧನನು ಸಂತೋಷದಿಂದ ಆಲಿಂಗನವನ್ನು ಕೊಟ್ಟು, “ಎಲೈ, ವೀರಶಿಖಾಮಣೀ, ನೀನು ನಮಗೆ ದೊರೆತುದು ನಮ್ಮ ಪುಣ್ಯವಿಶೇಷ. ನಾನೂ ಈ ನನ್ನ ಕುರುರಾಜ್ಯವೂ ಸಹ ನಿನ್ನವೇ ಎಂದು ತಿಳಿ. ನೀನು ಬೇಕಾದಂತೆ ಸುಖಭೋಗಗಳನ್ನನುಭವಿಸಿಕೊಂಡು, ನಿನ್ನ ಆಪ್ತಮಿತ್ರರಾದ ನಮಗೆ ಸಹಾಯಕನಾಗಿ, ನಮ್ಮ ಶತ್ರುಗಳನ್ನು ಧ್ವಂಸಮಾಡು,” ಎಂಬುದಾಗಿ ಹೇಳಿದನು. ಅದನ್ನು ಕೇಳಿ, ಸಂತೋಷಪಟ್ಟು, ಕರ್ಣನು, “ಪ್ರಭೂ, ನಿಮ್ಮ ಪ್ರೀತಿಗೆ ನಾನು ಅತ್ಯಂತ ಕೃತಜ್ಞನಾಗಿರುವೆನು. ನಾನು ಅರ್ಜುನನೊಡನೆ ಯುದ್ಧಮಾಡಲು ಬಯಸಿ ಬಂದಿರುತ್ತೇನೆ,” ಎಂದನು.

ಕರ್ಣನ ಈ ಯುದ್ಧಾಹ್ವಾನವನ್ನು ಕೇಳಿ ಅರ್ಜುನನಿಗೆ ಕೋಪವು ಉಕ್ಕಿಬಂತು. ಆಗ, ಅವನು, “ಕರ್ಣಾ, ನಿನ್ನನ್ನು ಈ ಸಭಾಂಗಣಕ್ಕೆ ಯಾರೂ ಕರೆಯಿಸಲಿಲ್ಲ. ಹೀಗೆ ನೀನಾಗಿ ಬಂದು ಅನಾವಶ್ಯವಾಗಿ ಹರಟತಕ್ಕುದಲ್ಲ,” ಎಂದು ಕಠಿನವಾಗಿ ನುಡಿದನು. ಅದಕ್ಕೆ ಕರ್ಣನು, “ಎಲೈ ಫಲ್ಗುಣಾ, ಈ ಮಲ್ಲರಂಗವು ನಿನಗೊಬ್ಬನಿಗಾಗಿ ಮಾತ್ರವೇ ರಚಿತವಾದುದಲ್ಲ. ಇಲ್ಲಿ ಸಕಲ ವೀರರಿಗೂ ಅವಕಾಶವಿರುವುದು. ಅಧಿಕಾರ ಶಕ್ತಿಗಳಲ್ಲಿ ಅಧಿಕವಾದವರೇ ಅರಸರು. ಕ್ಷತ್ರಿಯ ಧರ್ಮವು ಶೌರ್ಯ ಪರಾಕ್ರಮಗಳಿಗನುಸಾರವಾಗಿರುವುದು. ಬರಿಯ ಮಾತಿನಿಂದ ಫಲವೇನು? ಬಾಣಗಳಿಂದ ಮಾತನಾಡು. ಈ ದಿನ ಈ ನಮ್ಮ ಗುರುಗಳೆದುರಲ್ಲಿಯೇ ನಿನ್ನ ತಲೆಯನ್ನು ಹಾರಿಸಿಬಿಡುವೆನು,” ಎಂದನು.

ಇದನ್ನು ಕೇಳಿದ ಪ್ರೇಕ್ಷಕರಲ್ಲಿ ಆಗಲೇ ಎರಡು ಪಕ್ಷಗಳಾದವು. ಕೆಲವರು ಅರ್ಜುನನ ಪಕ್ಷವಾಗಿಯೂ ಕೆಲವರು ಕರ್ಣನ ಪಕ್ಷವಾಗಿಯೂ ಮಾತನಾಡಲುದ್ಯುಕ್ತರಾದರು. ಅದರಂತೆಯೇ ಅಲ್ಲಿ ಸೇರಿದ್ದ ಸ್ತ್ರೀಯರಲ್ಲಿಯೂ ಎರಡು ಪಂಗಡಗಳೇರ್ಪಟ್ಟವು. ಕರ್ಣನು ತನ್ನ ಮಗನೆಂದು ಗುರುತು ಹಿಡಿದ ಕುಂತಿಯು ಈ ಯುದ್ಧ ಪ್ರಸಂಗ ವನ್ನು ಕೇಳಿ ಮೂರ್ಛಿತಳಾದಳು. ಆಗಲೇ ವಿದುರನು ದಾದಿಯರ ಮೂಲಕ ಆಕೆಗೆ ಉಪಚಾರಮಾಡಿ ಎಬ್ಬಿಸಿ ಸಮಾಧಾನಪಡಿಸಿದನು. ಆದರೂ ತನ್ನ ಪುತ್ರರಿಬ್ಬರೂ ಯುದ್ಧಸನ್ನದ್ಧರಾಗಿರುವುದನ್ನು ನೋಡಿ ಆಕೆ ಏನು ಮಾಡುವುದಕ್ಕೂ ಸಾಧ್ಯವಿಲ್ಲದೆ ಇದ್ದಳು. ಅರ್ಜುನನು ಧರ್ಮರಾಜಾದಿಗಳನ್ನು ಆಲಿಂಗಿಸಿ ದ್ರೋಣಾಚಾರ್ಯನಿಗೆ ನಮಸ್ಕರಿಸಿ, ಯುದ್ಧಕ್ಕೆ ಸಿದ್ಧನಾಗಿ ರಂಗಕ್ಕೆ ಬಂದು ನಿಂತನು. ಕರ್ಣನು ದುರ್ಯೋಧನನಿಂದ ಆಲಿಂಗನವನ್ನು ಪಡೆದು ಧನುರ್ಬಾಣಧರನಾಗಿ ಕಾಳಗಕ್ಕೆ ಅನುವಾಗಿ ಬಂದನು. ಇವರಿಬ್ಬರೂ ಧನುಸ್ಸುಗಳನ್ನು ಹಿಡಿಯುವ ಸಮಯಕ್ಕೆ ಸರಿಯಾಗಿ ದ್ವಂದ್ವಯುದ್ಧ ವಿಶಾರದನಾದ ಕೃಪಾಚಾರ್ಯನು ಅಲ್ಲಿಗೆ ಬಂದು ಕರ್ಣನನ್ನು ನೋಡಿ, "ವೀರವರ್ಯ, ಈ ಅರ್ಜುನನು ಪಾಂಡುರಾಜನ ಮಗನು ಮತ್ತು ಕುಂತೀದೇವಿಯ ಕನಿಷ್ಠ ಪುತ್ರನು. ಕುರುವಂಶ ರಾಜಕುಮಾರನಾದ ಈತನು ನಿನ್ನೊಡನೆ ಈಗ ದ್ವಂದ್ವ ಯುದ್ಧಮಾಡಲು ಸಿದ್ಧನಾಗಿರುವನು. ನೀನು ಯಾವ ರಾಜವಂಶ ವನ್ನಲಂಕರಿಸಿರುವೆ? ನಿನ್ನ ತಾಯಿ ತಂದೆಗಳು ಯಾರು? ಎಂಬುದನ್ನು ತಿಳಿಸು. ಕುಲಾಚಾರಗಳಲ್ಲಿ ಸಮಾನರಲ್ಲದೆ ಕೀಳಾದವರೊಡನೆ ದ್ವಂದ್ವ ಯುದ್ಧಮಾಡುವುದು ರಾಜಕುಮಾರರ ಪದ್ಧತಿಯಲ್ಲ," ಎಂದನು.

ಈ ಪ್ರಶ್ನೆಯನ್ನು ಕೇಳಿದೊಡನೆಯೇ ಕರ್ಣನ ಮುಖವು, ಬಿರು ಮಳೆಯಿಂದ ರೇಕುಗಳುದಿರಿ ವಿಕಾರವಾದ ತಾವರೆಯಂತೆ ನಾಚಿಕೆಯಿಂದ ಬಾಗಿ ಜೋಲುಬಿದ್ದಿತು. ಇದನ್ನು ಕೇಳಿ ದುರ್ಯೋಧನನು ತಟ್ಟನೆ ಎದ್ದು, "ಸ್ವಾಮೀ, ಸದ್ವಂಶಜರೂ, ಮಹಾವೀರರೂ, ಸೇನಾನಿಗಳೂ ಅರಸರಾಗಬಹುದೆಂದು ಶಾಸ್ತ್ರವೇ ಹೇಳುತ್ತಿರುವುದು. ಆದುದರಿಂದ, ರಾಜನಲ್ಲದಿರುವ ಮಹಾ ವೀರ ಕರ್ಣನೊಡನೆ ದ್ವಂದ್ವಯುದ್ಧಮಾಡಲು ಅರ್ಜುನನು ಒಪ್ಪದಿದ್ದರೆ, ನಾನೀಗಲೇ ಕರ್ಣನಿಗೆ ಅಂಗದೇಶದ ರಾಜ

ಪಟ್ಟವನ್ನು ಕಟ್ಟುವೆನು," ಎಂದು ಹೇಳಿದನು. ಈ ಮಾತನ್ನು ಕೇಳಿದ ಕೂಡಲೇ ಸಂತೋಷ ಸೂಚಕವಾದ ಪ್ರೇಕ್ಷಕರ ಜಯಜಯಕಾರಧ್ವನಿಗಳು ದಿಕ್ತಟಗಳನ್ನೇ ತುಂಬಿದವು. ಈ ಗದ್ದಲವು ನಿಂತ ಕೂಡಲೇ, ದುರ್ಯೋಧನನು, ರಾಜಕಿರೀಟ, ಹಾರ ಸಿಂಹಾಸನ ಛತ್ರಚಾಮರ ಪತಾಕಾದಿ ಸಮಸ್ತ ಸಾಮಗ್ರಿಗಳನ್ನೂ ಅಲ್ಲಿಗೇ ತರಿಸಿ, ಭೀಷ್ಮ ದ್ರೋಣ ಧೃತರಾಷ್ಟ್ರಾದಿಗಳ ಎದುರಲ್ಲಿಯೇ ಬ್ರಾಹ್ಮಣರ ವೇದ ಘೋಷಾಶೀರ್ವಾದಗಳಲ್ಲಿ ಕರ್ಣನಿಗೆ ಅಂಗರಾಜ್ಯದ ರಾಜಾಭಿಷೇಕವನ್ನು ಮಾಡಿಸಿದನು.

ಆಗ ಕರ್ಣನು, ದುರ್ಯೋಧನನನ್ನು ನೋಡಿ, "ಮಹಾ ಪುರುಷನಾದ ದುರ್ಯೋಧನಾ, ನನಗಾಗಿ ಒಂದು ರಾಜ್ಯವನ್ನೇ ಕೊಟ್ಟು ನನಗೆ ರಾಜಪದವಿಯನ್ನು ಅನುಗ್ರಹಿಸಿದ ನಿನಗೆ ನಾನು ಯಾವ ಪ್ರತ್ಯುಪಕಾರವನ್ನು ತಾನೇ ಮಾಡಬಲ್ಲೆನು! ನಿನ್ನ ಅಪ್ಪಣೆಯನ್ನು ಶಿರಸ್ಸಿನಲ್ಲಿ ಧರಿಸಿ ನಡೆಯಿಸಲು ಸಿದ್ಧನಾಗಿರುವೆನು," ಎಂದು ವಿನಯದಿಂದ ಹೇಳಲು, ದುರ್ಯೋಧನನು ಬಹಳ ಸಂತೋಷಪಟ್ಟು "ಕರ್ಣಾ, ನೀನು ನನ್ನ ಆಪ್ತ ಸ್ನೇಹಿತನಾಗಿರಬೇಕು," ಎಂದನು. ಅದಕ್ಕೆ ಕರ್ಣನು ಸಂತೋಷದಿಂದ ಸಂಮತಿಸಲು, ಉಭಯರೂ ಆನಂದ ಪರವಶರಾದರು.

ಆಗ ಕರ್ಣನ ಸಾಕು ತಂದೆಯಾದ ವೃದ್ಧ ಸಾರಥಿಯು ನಡುಗುತ್ತ ಕೋಲೂರಿಕೊಂಡು ಭಯದಿಂದ ಬೆವರಿ ಆ ರಂಗದೊಳಕ್ಕೆ ಬಂದನು. ಅದನ್ನು ನೋಡಿದೊಡನೆಯೇ ಕರ್ಣನು, ತಂದೆಯಲ್ಲಿ ತನಗಿದ್ದ ಸ್ವಾಭಾವಿಕ ಗೌರವ ಪ್ರೇಮಗಳಿಂದ ಪ್ರೇರಿತನಾಗಿ ಧನುಸ್ಸನ್ನು ಬಿಟ್ಟು ತಲೆಬಾಗಿ ಆತನಿಗೆ ನಮಸ್ಕರಿಸಿದನು. ಆಗ ಅತ್ಯಂತ ಸಂತೋಷ ಭರಿತನಾದ ಸಾರಥಿಯು, "ಅಪ್ಪಾ ಮಗೂ," ಎಂದು ಮಗನನ್ನು ತಬ್ಬಿಕೊಂಡು, ಅಭಿಷೇಚನದಿಂದ ನೆನೆದಿದ್ದ ಕರ್ಣನ ತಲೆಯ ಮೇಲೆ ತನ್ನ ಆನಂದ ಬಾಷ್ಪಗಳನ್ನೂ ಸುರಿಸಿದನು.

ಇದೆಲ್ಲವನ್ನೂ ನೋಡಿದ ಪಾಂಡವರಿಗೆ, ಕರ್ಣನು ಸೂತನ ಪುತ್ರನೆಂಬುದು ತಿಳಿಯಿತು. ಆಗ ಭೀಮಸೇನನು ನಕ್ಕು ಪರಿಹಾಸ್ಯ ಮಾಡಿ, "ಎಲವೋ ಸೂತಪುತ್ರಾ! ನೀನು ಪಾರ್ಥನೊಡನೆ ಯುದ್ಧಮಾಡಿ ಹತನಾಗಲು ಅರ್ಹನಲ್ಲ, ನಿನ್ನ ಕುಲಧರ್ಮಾನುಸಾರವಾಗಿ ಕೈಗೆ,

ಧನುಸ್ಸಿಗೆ ಪ್ರತಿಯಾಗಿ ಕಶಾದಂಡ (ಚಾವಟಿ) ವನ್ನು ತೆಗೆದುಕೋ," ಎಂದು ಅವಹೇಳನದಿಂದ ನುಡಿದನು. ಇದನ್ನು ಕೇಳಿ ನಾಚಿಕೆ ದುಃಖ ಕೋಪಗಳಿಂದ ಕೂಡಿದ ಕರ್ಣನು, ತುಟಿಗಳನ್ನು ಅದಿರಿಸುತ್ತ ಏನು ಮಾಡುವುದಕ್ಕೂ ತೋರದೆ, ಆಕಾಶಕ್ಕೆ ತಲೆಯೆತ್ತಿ ಸೂರ್ಯದೇವನನ್ನು ನೋಡಿ ನಿಟ್ಟುಸಿರು ಬಿಟ್ಟು ಸುಮ್ಮನಾದನು. ಭೀಮಸೇನನ ಮಾತನ್ನು ಕೇಳಿ ದುರ್ಯೋಧನನಿಗೆ ಮಿತಿಮೀರಿದ ಕೋಪವು ಉಕ್ಕಿಬಂತು. ಆಗಲೇ ಅವನು ದಿಗ್ಗನೆ ಎದ್ದು, "ಎಲೈ ವೃಕೋದರಾ, ಕ್ಷತ್ರಿಯನಾಗಿ ನೀನು ಇಂತಹ ಮಾತನ್ನಾಡಬಾರದು. ಶಕ್ತಿ ಪ್ರದರ್ಶನವೇ ಕ್ಷತ್ರಿಯನ ನೈಜಗುಣಗಳು. ಆದರಿಂದ ಎದುರಾಳು ಕೀಳಾದ ವಂಶದಲ್ಲಿ ಹುಟ್ಟಿದ್ದರೂ, ಅವನೊಡನೆ ಯುದ್ಧಮಾಡಲೇ ಬೇಕು. ವೀರರ ಮೂಲವನ್ನೂ ನದಿಗಳ ಮೂಲವನ್ನೂ ವಿಚಾರಿಸಿ ತಿಳಿಯಬೇಕಾಗಿಲ್ಲ. ದಾನವರನ್ನು ವಧಿಸಿದ ಇಂದ್ರನ ವಜ್ರಾಯುಧವು ದಧೀಚಿಮುನಿಯ ಬೆನ್ನಿನ ಮೂಳೆಯಲ್ಲವೇ? ನಮ್ಮ ಆಚಾರ್ಯರಾದ ದ್ರೋಣರು ಕುಂಭದಲ್ಲಿಯೂ ಕೃಪಾಚಾರ್ಯರು ಒಂದು ಪೊದೆಯಲ್ಲಿಯೂ ಹುಟ್ಟಿದವರೆಂದು ನಾವು ಕೇಳಿಲ್ಲವೇ? ಹಾಗಾದ ಮಾತ್ರಕ್ಕೇ ಅವರ ಪೌರುಷವೂ ಶಕ್ತಿಯೂ ವಿದ್ಯೆಯೂ ಸಾಮಾನ್ಯವಾದುವೇ? ನಾನು ಕರ್ಣನಿಗೆ ಈಗ ಮಾಡಿದ ಅಂಗರಾಜ್ಯಾಭಿಷೇಕವು ಇಲ್ಲಿ ಯಾರಿಗೆ ಸಂಮತವಿಲ್ಲವೋ ಅಂಥವರು ಯಾರಿದ್ದರೂ ಬಂದು ಕರ್ಣನ ರಥವನ್ನೇರಿ ಅವನ ಧನುಸ್ಸನ್ನು ಬಾಗಿಸಲಿ, ನೋಡುವ" ಎಂದು ಗರ್ಜಿಸಿದನು. ಇದನ್ನು ಕೇಳಿದ ಪ್ರೇಕ್ಷಕರೆಲ್ಲರೂ ದುರ್ಯೋಧನನ ಗುಣ ಪಕ್ಷಪಾತಕ್ಕೆ ಮೆಚ್ಚಿ ಕೋಲಾಹಲಮಾಡಿದರು. ಇಷ್ಟುಹೊತ್ತಿಗೆ ಸೂರ್ಯಾಸ್ತಮಯವಾಗಿ ಕತ್ತಲಾಗುತ್ತಬಂತು. ಆಗ ದುರ್ಯೋಧನನು, ಅಸಂಖ್ಯಾತ ದೀಪಗಳ ಬೆಳಕಿನಲ್ಲಿ ಕರ್ಣನನ್ನು ಕೈಹಿಡಿದು ಮಲ್ಲರಂಗದಿಂದ ಹೊರಕ್ಕೆ ಕರೆದುಕೊಂಡು ಹೋದನು.

ಪಾಂಡವರೂ ಸಹ ದ್ರೋಣಾಚಾರ್ಯ ಕೃಪಾಚಾರ್ಯ ಭೀಷ್ಮಾದಿಗಳೊಡಗೂಡಿ ಮನೆಗೆ ಬಂದರು. ಪ್ರೇಕ್ಷಕರಲ್ಲಿ ಕೆಲವರು ಕರ್ಣನನ್ನೂ ಕೆಲವರು ದುರ್ಯೋಧನನನ್ನೂ ಮತ್ತೆ ಕೆಲವರು ಅರ್ಜುನನನ್ನೂ ಹೊಗಳುತ್ತ ಅವರವರ ಮನೆಗಳಿಗೆ ಹೋದರು.

ಕುಂತೀ ದೇವಿಯು ತನ್ನ ಮಗನಾದ ಕರ್ಣನಿಗೆ ಇದ್ದ ಶುಭ ಲಕ್ಷಣ

ಗಳನ್ನು ಅನುಸರಿಸಿ, ಅವನು ಅಂಗದೇಶದ ರಾಜನಾದನೆಂದು ಮಾತೃ ವಾತ್ಸಲ್ಯದಿಂದ ಪರಮಾನಂದ ಭರಿತಳಾದಳು.

ದುರ್ಯೋಧನನು, ಕರ್ಣನ ಬೆಂಬಲದಿಂದ, ಇನ್ನು ತನಗೆ ಪಾಂಡವರಿಂದ ಲೇಶವೂ ಭಯವಿಲ್ಲವೆಂದು ನಿರ್ಧರಿಸಿಕೊಂಡನು. ಅದ ರಂತೆ ಕರ್ಣನೂ ದುರ್ಯೋಧನನಿಗೆ ತಕ್ಕ ಧೈರ್ಯವನ್ನು ಹೇಳಿ ಅವನನ್ನು ಸಂತೋಷ ಪಡಿಸಿದನು. ಕರ್ಣನಂತಹ ಮಹಾವೀರನು ಲೋಕದಲ್ಲಿ ಮತ್ತೆ ಯಾವನೂ ಇಲ್ಲವೆಂದು ಯುಧಿಷ್ಠಿರನೂ ಮನಸ್ಸಿನಲ್ಲಿ ನಿರ್ಧರಿಸಿಕೊಂಡನು.

## ಗು ರು ದ ಕ್ಷಿ ಣೆ

ಕೌರವರೂ ಪಾಂಡವರೂ ಅಸ್ತ್ರಶಸ್ತ್ರ ಯುದ್ಧ ಕಲೆಗಳಲ್ಲಿ ಪಾರಂಗತ ರಾಗಿರುವುದನ್ನು ಕಂಡು ದ್ರೋಣಾಚಾರ್ಯನು, ತಾನು ಗುರುದಕ್ಷಿಣೆ ಯನ್ನಪೇಕ್ಷಿಸುವ ಸಮಯವೊದಗಿತೆಂದಾಲೋಚಿಸಿದನು. ಅನಂತರ ಒಂದು ದಿನ ಶಿಷ್ಯರೆಲ್ಲರನ್ನೂ ಒಂದೆಡೆಯಲ್ಲಿ ಕೂಡಿಸಿ, "ಮಕ್ಕಳಿರಾ, ನಿಮ್ಮ ವಿದ್ಯಾಭ್ಯಾಸವು ಮುಗಿದು, ನೀವೆಲ್ಲರೂ ಈಗ ಸಮರ ವಿದ್ಯಾ ಪಾರಂಗತರಾಗಿರುವಿರಿ. ಆದಕಾರಣ, ನೀವು ಗುರುದಕ್ಷಿಣೆಯನ್ನು ಒಪ್ಪಿಸಬೇಕಾದ ಸಮಯವು ಬಂದಿರುವುದು. ಈಗ ಪಾಂಚಾಲ ದೇಶದ ಅರಸನಾದ ದ್ರುಪದರಾಜನನ್ನು ನೀವುಗಳು ಯುದ್ಧದಲ್ಲಿ ಸೋಲಿಸಿ ಹಿಡಿದು ತಂದು ನನಗೊಪ್ಪಿಸುವುದಾದರೆ, ಅದೇ ನನಗೆ ತೃಪ್ತಿಕರವಾದ ಅಮೋಘ ಗುರುದಕ್ಷಿಣೆಯಾಗುವುದು," ಎಂದು ಹೇಳಿದನು.

ಇದನ್ನು ಕೇಳಿದೊಡನೆಯೇ ಉತ್ಸಾಹ ಶೀಲರೂ ಮಹಾಸಾಹಸಿ ಗಳೂ ಆದ ಎಲ್ಲ ಶಿಷ್ಯರಿಗೂ ಸಮರೋತ್ಸಾಹವು ಉಕ್ಕಿ, "ಆಗಬಹುದು," ಎಂದು ಸಂಮತಿಸಿದರು. ಅನಂತರ ಅವರು ತಮ್ಮ ತಮ್ಮ ರಥಗಳನ್ನೇರಿ, ಸಾಯುಧರಾಗಿ ಪಾಂಚಾಲ ದೇಶದ ಮೇಲೆ ದಂಡಯಾತ್ರೆ ಹೊರಟರು. ದುರ್ಯೋಧನ, ಕರ್ಣ, ದುಶ್ಯಾಸನ, ಯುಯುತ್ಸು ಮೊದಲಾದ ಮಹಾ ವೀರರೆಲ್ಲರೂ ಸೈನ್ಯಸಹಿತರಾಗಿ ಹೋಗಿ ದ್ರುಪದರಾಜನ ರಾಜಧಾನಿ ಯನ್ನು ಮುತ್ತಿದರು. ಇದನ್ನು ಕೇಳಿ ಮಹಾಪರಾಕ್ರಮಿಯಾದ ದ್ರುಪದ ರಾಜನು ವೀರಾವೇಶದಿಂದ ಸೈನ್ಯದೊಡನೆ ಹೊರಟು ಶತ್ರುಗಳ ಸಂಗಡ ಅದ್ಭುತ ಯುದ್ಧಮಾಡಿದನು. ಈ ಸಮಯದಲ್ಲಿ ಪಾಂಡವರು ಪಾಂಚಾಲ

ನಗರದ ಹೊರಗಡೆಯಲ್ಲಿಯೇ ದ್ರೋಣಾಚಾರ್ಯನೊಡನೆ ನಿಂತಿದ್ದರು. ಅರ್ಜುನನು, ಗುರುವನ್ನು ನೋಡಿ, "ಸ್ವಾಮೀ, ದುರ್ಯೋಧನ ಕರ್ಣಾದಿಗಳು ತಾವು ದ್ರುಪದರಾಜನನ್ನು ಹಿಡಿದು ತರುವುದಾಗಿ ಜಂಬವನ್ನು ಕೊಚ್ಚಿಕೊಂಡು ಹೋಗಿರುವರು. ದ್ರುಪದನು ಸಾಮಾನ್ಯನಲ್ಲ, ಇವರ ಕೈಗೆ ಸಿಕ್ಕತಕ್ಕವನಲ್ಲ; ಆದರೂ ಅವರು ತಮ್ಮ ಸಾಹಸವೆಲ್ಲವನ್ನೂ ಮಾಡಿ ಬರಲಿ, ಅನಂತರ ನಾವು ನಮ್ಮ ಸಾಹಸವನ್ನು ತೋರಿಸುವೆವು," ಎಂದು ಹೇಳಿದನು. ದ್ರುಪದನಿಗೂ ದುರ್ಯೋಧನಾದಿಗಳಿಗೂ ಪ್ರಬಲ ಯುದ್ಧವೇ ನಡೆಯುತ್ತಿದ್ದಿತು. ಮಹಾ ಸಾಹಸಿಯಾದ ದ್ರುಪದನು ವಾಯು ವೇಗದಿಂದ ಶತ್ರು ಸೈನ್ಯದಲ್ಲಿ ನುಗ್ಗಿ, ಭಯಂಕರ ಯುದ್ಧ ಮಾಡುತ್ತ, ಎಲ್ಲೆಲ್ಲಿಯೂ ಅವನೇ ಕಾಣಿಸಿಕೊಂಡು ಕೌರವರನ್ನು ಭ್ರಾಂತಿಪಡಿಸಿದನು. ಕಡೆಗೆ ಅವನ ಕೈಯೇ ಬಲವಾಗಿ ದುರ್ಯೋಧನ ದುಶ್ಶಾಸನ ಕರ್ಣಾದಿಗಳೆಲ್ಲರೂ ಪಲಾಯನ ಮಾಡಬೇಕಾಯಿತು. ಹೀಗೆ ದುರ್ಯೋಧನಾದಿ ಕೌರವರೆಲ್ಲರೂ ಬೆದರಿ ತಮ್ಮ ಬಳಿಗೆ ಓಡಿಬರುತ್ತಿದ್ದುದನ್ನು ನೋಡಿ, ಪಾಂಡವರು ಆ ಕೂಡಲೇ ದ್ರೋಣಾಚಾರ್ಯನಿಗೆ ನಮಸ್ಕರಿಸಿ ತಮ್ಮ ರಥಗಳನ್ನೇರಿದರು. ಅರ್ಜುನನು ಯುಧಿಷ್ಠಿರನಿಗೆ ಯುದ್ಧದಲ್ಲಿ ತೊಡಗಬೇಡವೆಂದು ಕಡ್ಡಾಯವಾಗಿ ಹೇಳಿ, ತಾನು ತನ್ನ ರಥರಕ್ಷಣೆಗಾಗಿ ಜೊತೆಗೆ ನಕುಲ ಸಹದೇವರನ್ನು ಕರೆದುಕೊಂಡು, ರಥಾರೂಢನಾಗಿ ವೀರಾವೇಶದಿಂದ ಯುದ್ಧಮಾಡಲು ನುಗ್ಗಿದನು. ಅವನಿಗಿಂತಲೂ ಮೊದಲೇ ಭೀಮಸೇನನು ಗದೆಯನ್ನು ತಿರುಗಿಸುತ್ತ ಮುಂದೆ ಹೊರಟನು.

ಇವರು ಬರುವುದನ್ನು ನೋಡಿ ದ್ರುಪದರಾಜನು ಸತ್ಯಜಿತ್ತೆಂಬ ತನ್ನ ಸೇನಾಪತಿಯೊಡಗೂಡಿ, ರೋಷಾವೇಶದಿಂದ ಬಂದು ಅರ್ಜುನನ ಮೇಲೆ ಶರವೃಷ್ಟಿಯನ್ನು ಸುರಿಸಿದನು. ಭಯಂಕರ ಯುದ್ಧವು ನಡೆದು, ಪಾರ್ಥನ ಶರಾಹತಿಗಳಿಂದ ರಥವನ್ನೂ ಅಶ್ವಗಳನ್ನೂ ಸಾರಥಿಯನ್ನೂ ಕಳೆದುಕೊಂಡು, ಸತ್ಯಜಿತ್ಸೇನಾಪತಿಯು ಯುದ್ಧಮಾಡಲಾರದೆ ನಿಂತುಬಿಟ್ಟನು. ಅದನ್ನು ನೋಡಿ ದ್ರುಪದನು ಇಮ್ಮಡಿಸಿದ ರೋಷಾವೇಶದಿಂದ ನುಗ್ಗಿ, ಅರ್ಜುನನೊಡನೆ ಪ್ರಬಲ ಯುದ್ಧವನ್ನೇ ಮಾಡಿದನು. ಆದರೂ ಪಾರ್ಥನು ದ್ರುಪದ ರಾಜನ ಧನುಸ್ಸನ್ನೇ ಕತ್ತರಿಸಿ, ಧ್ವಜವನ್ನು

ಮುರಿದು ನೆಲಕ್ಕೆ ಕೆಡಹಿ, ರಥದ ಕುದುರೆಗಳನ್ನೂ ಸಾರಥಿಯನ್ನೂ ವಧಿಸಿ, ತಟ್ಟನೆ ಅವನ ರಥದೊಳಕ್ಕೆ ಹಾರಿ, ಗರುಡನು ಸರ್ಪವನ್ನು ಹಿಡಿಯುವಂತೆ ಅವನನ್ನು ಬಲವಾಗಿ ಹಿಡಿದುಕೊಂಡನು. ಇದನ್ನು ನೋಡಿ ಪಾಂಚಾಲನ ರಕ್ಷಣೆಗೆ ಬಂದಿದ್ದ ಸೈನ್ಯವೆಲ್ಲವೂ ಬೆದರಿ ಪಲಾಯನ ಮಾಡಿತು. ಅರ್ಜುನನೂ ಭೀಮಸೇನನೂ ವಿಜಯ ಶಾಲಿಗಳಾಗಿ ದ್ರುಪದ ರಾಜನನ್ನೂ ಅವನ ಮಂತ್ರಿಗಳನ್ನೂ ಹಿಡಿದು ತಂದು ದ್ರೋಣಾಚಾರ್ಯನಿಗೆ ಗುರುದಕ್ಷಿಣೆಯಾಗಿ ಒಪ್ಪಿಸಿದರು. ಆಗ ದ್ರೋಣಾಚಾರ್ಯನು ದ್ರುಪದ ರಾಜನನ್ನು ನೋಡಿ, " ದ್ರುಪದ ಮಹಾರಾಜಾ, ಈಗ, ನೀನು ನಿನ್ನ ರಾಜ್ಯ ಕೋಶಾದಿಗಳೊಂದಿಗೆ ನನ್ನ ವಶವಾಗಿರುವೆ. ನಿನ್ನ ಪ್ರಾಣವು ನನ್ನ ಕೈಯಲ್ಲಿದೆ. ಈಗಲಾದರೂ ನಮ್ಮ ಪೂರ್ವ ಸ್ನೇಹವನ್ನು ಕಾಪಾಡುವೆಯಾ ? " ಎಂದು ಪ್ರಶ್ನೆಮಾಡಿ, ಮುಗುಳ್ನಗೆಯಿಂದ, " ವೀರ ಭೂವರಾ, ಹೆದರಬೇಡ, ನಿನ್ನ ಪ್ರಾಣಕ್ಕೆ ಭಯವಿಲ್ಲ. ಬ್ರಾಹ್ಮಣರಾದ ನಾವು ಸದಾ ಕ್ಷಮಿಸತಕ್ಕ ಸ್ವಭಾವದವರು. ಆದರೆ, ನಮ್ಮ ಪೂರ್ವ ಸ್ನೇಹವನ್ನು ನೀನು ಮರೆಯದೆಯಿರಬೇಕೆಂಬುದೇ ನನ್ನ ಕೋರಿಕೆ. ಈಗ ನಾನು ನಿನಗೆ, ನಿನ್ನ ಅರ್ಧ ರಾಜ್ಯವನ್ನು ದಯೆಯಿಂದಲೂ ಸ್ನೇಹಭಾವದಿಂದಲೂ ಕೊಟ್ಟುಬಿಡುವೆನು. ನಾನು ಉಳಿದ ಅರ್ಧವನ್ನಿಟ್ಟುಕೊಳ್ಳುವೆನು. ಏತಕ್ಕೆಂದರೆ: ರಾಜನಿಗೆ ಸ್ನೇಹಿತರಾಗಲು ರಾಜರು ಮಾತ್ರವೇ ಅರ್ಹರೆಂದು ಹಿಂದೆ ನೀನೇ ಹೇಳಿರುವೆಯಷ್ಟೆ ! ಆದರಿಂದ ನೀನು ಗಂಗಾನದಿಯ ದಕ್ಷಿಣ ಭಾಗದ ರಾಜ್ಯಕ್ಕೆ ರಾಜನಾಗಿ ಅದನ್ನು ಆಳುತ್ತಿರು. ನಾನು ಭಾಗೀರಥಿಯ ಉತ್ತರ ಭಾಗದ ರಾಜ್ಯಕ್ಕೆ ರಾಜನಾಗಿರುವೆನು. ಈಗಲಾದರೂ ಆಲೋಚಿಸಿ ನಿನಗೆ ಸಂಮತವಾದರೆ ನನ್ನನ್ನು ನಿನ್ನ ಸ್ನೇಹಿತನೆಂದು ಭಾವಿಸು," ಎಂದನು. ಇದನ್ನು ಕೇಳಿ ದ್ರುಪದ ರಾಜನು, " ಭೂಸುರೋತ್ತಮಾ, ಘನತೆಯೂ ಶಕ್ತಿಯೂ ಉಳ್ಳ ನಿನ್ನಂತಹ ಮಹನೀಯರು ಹೀಗೆ ಪರಾಜಿತರಲ್ಲಿ ಕೃಪೆಯನ್ನು ತೋರಿಸುವುದೇ ಸ್ವಭಾವ. ನಿನ್ನ ವಾಕ್ಯಗಳಿಂದ ನನಗೆ ಅತ್ಯಾನಂದವಾಯಿತು. ನಾನು ನಿನಗೆ ಹಿಂದಿನಂತೆ ಸ್ನೇಹಿತನು. ನಿನಗೆ ಸದಾ ಸಂತೋಷವಾಗುವಂತೆ ನಡೆದುಕೊಳ್ಳಲು ಸಿದ್ಧನಾಗಿರುವೆನು," ಎಂದನು. ಇದನ್ನು ಕೇಳಿ ದ್ರೋಣಾಚಾರ್ಯನು ದ್ರುಪದನನ್ನು ಆಗಲೇ ನಿರ್ಬಂಧದಿಂದ ಬಿಡಿಸಿ,

ಅರ್ಧ ರಾಜ್ಯವನ್ನಾತನಿಗೆ ಕೊಟ್ಟು, ಸಕಲ ರಾಜ ಮರ್ಯಾದೆಗಳೊಡನೆ ಆತನನ್ನು ಬೀಳ್ಕೊಟ್ಟನು.

ದ್ರುಪದನಿಗೆ ದ್ರೋಣಾಚಾರ್ಯನ ಶಕ್ತಿಯು ಈಗ ಚನ್ನಾಗಿ ಗೋಚರಕ್ಕೆ ಬಂತು. ಪ್ರಬಲವಾದ ಬ್ರಹ್ಮತೇಜಸ್ಸಿನಿಂದ ತುಂಬಿರುವ ದ್ರೋಣನ ಮುಂದೆ, ಕೇವಲ ಕ್ಷಾತ್ರತೇಜಸ್ಸನ್ನು ಮಾತ್ರವೇ ಪಡೆದ ತನ್ನ ಶಕ್ತಿಯು ಸ್ವಲ್ಪವೂ ಗಣ್ಯವೇ ಅಲ್ಲವೆಂದು ಆತನು ತಿಳಿದು ಕೊಂಡನು. ಆದರಿಂದ ಹೇಗಾದರೂ ದ್ರೋಣನಿಗೆ ಪ್ರತಿಕ್ರಿಯೆ ಮಾಡಲು, ಆತನನ್ನು ಯುದ್ಧದಲ್ಲಿ ಪರಾಭವಿಸತಕ್ಕ ಪುತ್ರನನ್ನೂ, ತನ್ನನ್ನು ಜಯಿಸಿ ಹಿಡಿದು ತಂದು ದ್ರೋಣಾಚಾರ್ಯನಿಗೆ ಒಪ್ಪಿಸಿದ ಅರ್ಜುನನನ್ನು ವಿವಾಹವಾಗತಕ್ಕ ಪುತ್ರಿಯನ್ನೂ ಸಹ, ತಾನು ಪಡೆಯ ಬೇಕೆಂದು ಬಯಸಿ, ನಾನಾ ವ್ರತಗಳನ್ನಾಚರಿಸುತ್ತ ಗಂಗಾನದಿಯ ದಕ್ಷಿಣ ಭಾಗದಲ್ಲಿದ್ದ "ಮಾಕಂದಿ" ಎಂಬ ರಾಜ್ಯವನ್ನಾಳಿಕೊಂಡು "ಕಾಮ್ಪಿಲ್ಯ" ವೆಂಬ ರಾಜಧಾನಿಯಲ್ಲಿ ವಾಸಿಸುತ್ತಿದ್ದನು. ದ್ರೋಣಾ ಚಾರ್ಯನು, ತನಗೆ ಅರ್ಜುನನ ಸಾಹಸದಿಂದ ಲಭಿಸಿದ ಅಹಿಚ್ಛತ್ರ ರಾಜ್ಯದಲ್ಲಿ ಸುಖವಾಗಿದ್ದನು.

## ಅಧ್ಯಾಯ ೧೦

## ಪಾಂಡವರ ರಾಜ್ಯದ ಆಡಳಿತ

ಇದಾದ ಸುಮಾರು ಒಂದು ವರ್ಷದನಂತರ ಯುಧಿಷ್ಠಿರನಿಗೆ ಯುವರಾಜ ಪಟ್ಟಾಭಿಷೇಕವಾಯಿತು. ಆತನು ಸತ್ಯಸಂಧತೆ, ಧರ್ಮ ನಿಷ್ಠೆ, ಶಾಂತಿ, ಔದಾರ್ಯ, ಧೈರ್ಯ, ಗಾಂಭೀರ್ಯಾದಿಗುಣಗಳಿಂದ, ರಾಜ್ಯ ವಾಳಲು ತಕ್ಕವನೆನಿಸಿ, ಸ್ವಲ್ಪ ಕಾಲದಲ್ಲಿಯೇ ಪಾಂಡುರಾಜನಿಗಿಂತಲೂ ಶಕ್ತನೆನಿಸಿದನು. ಭೀಮಸೇನನು ಪರಾಕ್ರಮ ಶಾಲಿಯಾದ ಬಲರಾಮನ ಶಿಷ್ಯನಾಗಿ ಆತನಲ್ಲಿ ಖಡ್ಗಯುದ್ಧ, ಗದಾಯುದ್ಧ, ರಥಯುದ್ಧಗಳಲ್ಲಿ ವಿಶೇಷವಾದ ಪರಿಶ್ರಮವನ್ನು ಪಡೆದನು.

ಒಂದಾನೊಂದು ದಿನ ದ್ರೋಣಾಚಾರ್ಯನು ಕೌರವ ಪಾಂಡವ ರೆಲ್ಲರೂ ಸೇರಿರುವಾಗ ಅರ್ಜುನನನ್ನು ಕುರಿತು, "ಪಾರ್ಥಾ, ಹಿಂದೆ ಅಗಸ್ತ್ಯಮುನಿವರನ ಶಿಷ್ಯರಾದ ಅಗ್ನಿವಾದ ಮುನಿಗಳಲ್ಲಿ ನಾನು ಅಸ್ತ್ರ

ವಿದ್ಯಾಭ್ಯಾಸವನ್ನು ಮಾಡಿದೆನು. ಆ ನಮ್ಮ ಗುರುಗಳು ನನಗೆ ಅದ್ವಿತೀಯವಾದ "ಬ್ರಹ್ಮಶಿರಸ್" ಎಂಬ ಮಹಾಸ್ತ್ರವನ್ನು ಅನುಗ್ರಹಿಸಿದರು. ಅದು ಒಂದೇ ಸಲಕ್ಕೆ ಈ ಭೂಮಂಡಲವೆಲ್ಲವನ್ನೂ ದಹಿಸಿ ಬಿಡಬಲ್ಲದು. ಅದನ್ನು ಸಾಮಾನ್ಯ ಮನುಷ್ಯರ ಮೇಲೆಯೂ ದುರ್ಬಲರ ಮೇಲೆಯೂ ಪ್ರಯೋಗಿಸಲಾಗದು. ಧನುರ್ವಿದ್ಯಾ ಕೌಶಲದಲ್ಲಿಯೂ ಹಸ್ತಲಾಘವದಲ್ಲಿಯೂ ನಿನ್ನಂತಿರುವ ವೀರನು ಈ ಭೂಮಿಯ ಮೇಲೆ ಮತ್ತೆ ಯಾವನೂ ಇಲ್ಲ. ಆದರಿಂದ ಆ ಬ್ರಹ್ಮ ಶಿರೋಸ್ತ್ರವನ್ನು ಪಡೆಯಲು ನೀನಲ್ಲದೆ ಮತ್ತೆ ಯಾರೂ ಅರ್ಹರಲ್ಲ. ನಾನು ನಿನಗೆ ಆ ಅಸ್ತ್ರವನ್ನು ಕೊಡುವೆನು. ನೀನು ಅದನ್ನು ಅಗ್ನಿವಾದರು ಅಪ್ಪಣೆ ಕೊಟ್ಟಂತೆ ಸಾಮಾನ್ಯ ಮಾನವರ ಮೇಲೆ ಪ್ರಯೋಗಿಸಬೇಡ. ಇದಕ್ಕಾಗಿ ನೀನು, ಗುರುವಾದ ನನಗೆ ಪ್ರತ್ಯೇಕವಾಗಿ ಗುರುದಕ್ಷಿಣೆಯನ್ನು ಕೊಡಬೇಕು. ಏನೆಂದರೆ:— ನಾನು ನಿನ್ನೊಡನೆ ಯುದ್ಧಮಾಡಬೇಕಾಗಿ ಬಂದಾಗ ನೀನು ಹಿಂಜರಿಯದೆ ನನ್ನೊಡನೆ ಯುದ್ಧಮಾಡಬೇಕು. ಇದರಂತೆ ನೀನು ನನಗೆ ಈ ಸಭೆಯಲ್ಲಿ ವಾಗ್ದಾನಮಾಡು," ಎಂದನು. ಅದರಂತೆ ಒಪ್ಪಿ ಅರ್ಜುನನು ಸಭೆಯಲ್ಲಿ ದ್ರೋಣಾಚಾರ್ಯನಿಗೆ ವಾಗ್ದಾನ ಮಾಡಿ ಗುರುವಿನ ಪಾದಗಳಿಗೆ ನಮಸ್ಕರಿಸಿ ಹೊರಟುಹೋದನು.

ಭೀಮಾರ್ಜುನ ನಕುಲ ಸಹದೇವರು ಅಸ್ತ್ರಶಸ್ತ್ರ ವಿದ್ಯಾಪಾರಂಗತರೂ ಸಮರಕಲಾವಿಶಾರದರೂ ಆಗಿ, ಉದ್ಧತರಾಗಿದ್ದ ಸೌವೀರ ಯವನಾದಿ ಪ್ರಬಲರಾಜರೆಲ್ಲರನ್ನೂ ಜಯಿಸಿ, ದಿಗ್ವಿಜಯವನ್ನು ಪಡೆದರು. ಅರ್ಜುನನೊಬ್ಬನೇ ದಕ್ಷಿಣದಿಕ್ಕಿನ ಅರಸರೆಲ್ಲರನ್ನೂ ಜಯಿಸಿ, ತಾನು ಗೆಲಿದ ರಾಜ್ಯಗಳಿಂದ ವಿಶೇಷವಾದ ಐಶ್ವರ್ಯವನ್ನು ತಂದು ಕುರುರಾಜ್ಯಕ್ಕೆ ಸೇರಿಸಿದನು. ಹೀಗೆ ಧರ್ಮರಾಜನ ಆಳಿಕೆಯು ಅತ್ಯುತ್ತಮವೆನಿಸಿ, ಪಾಂಡವರ ಕೀರ್ತಿಯು ಎಲ್ಲೆಲ್ಲಿಯೂ ಹರಡಿತು. ಇದನ್ನು ಕೇಳಿ ಧೃತರಾಷ್ಟ್ರನ ಮನಸ್ಸಿನಲ್ಲಿ ಅಸೂಯೆಯೂ ಅಸಮಾಧಾನವೂ ವ್ಯಸನವೂ ಉಂಟಾದವು. ದುರ್ಯೋಧನನಿಗೆ ಉಂಟಾದ ಅಸೂಯಾ ಕ್ರೋಧ ವ್ಯಸನಗಳಿಗಾದರೋ ಪಾರವೇ ಇಲ್ಲವಾಯಿತು.

ಹೀಗಿರುವಲ್ಲಿ, ಪ್ರಜೆಗಳೆಲ್ಲರೂ ಧರ್ಮರಾಜನ ಗುಣ ಗಾಂಭೀರ್ಯ ಧೈರ್ಯ ಶೌರ್ಯ ಸತ್ಯಸಂಧತೆಗಳನ್ನೂ, ಪಾಂಡವರ ಪರಾಕ್ರಮವನ್ನೂ,

ಎಲ್ಲೆಲ್ಲಿಯೂ ವಿಶೇಷವಾಗಿ ಹೊಗಳುತ್ತಿದ್ದರು. ಧೃತರಾಷ್ಟ್ರನು ಹುಟ್ಟು ಕುರುಡನಾದುದರಿಂದ ರಾಜ್ಯಭಾರವನ್ನು ವಹಿಸಲು ಅನರ್ಹನೆಂತಲೂ, ತಾನು ರಾಜ್ಯಭಾರವನ್ನು ವಹಿಸುವುದಿಲ್ಲವೆಂದು ಭೀಷ್ಮನು ಸತ್ಯ ಪ್ರತಿಜ್ಞೆ ಮಾಡಿರುವ ಮೇರೆಗೆ ಆತನು ರಾಜನಾಗದಿರುವ ಕಾರಣದಿಂದಲೂ, ಮುಂದೆ ತಮಗೆ ಧರ್ಮರಾಜನೇ ದೊರೆಯಾಗುವುದು ನ್ಯಾಯವೂ ಸುಖ ಕರವೂ ಎಂದು ಜನರು ಮಾತನಾಡಿಕೊಳ್ಳುತ್ತಿದ್ದುದು ಸಹ ದುರ್ಯೋಧನನ ಕಿವಿಯನ್ನು ಮುಟ್ಟಿತು. ಆಗ ತನಗೆ ರಾಜ್ಯವಿಲ್ಲದೆ ಹೋಗುವುದೆಂಬ ದುಃಖವೂ ಪಾಂಡವರ ಮೇಲಣ ಅಸೂಯಾ ಕ್ರೋಧಗಳೂ ದುರ್ಯೋಧನನ ಮನಸ್ಸಿನಲ್ಲಿ ಇಮ್ಮಡಿಸಿದವು. ಅದರಿಂದ, ಅವನು, ಧೃತರಾಷ್ಟ್ರನನ್ನು ಆತಂರ್ಯದಲ್ಲಿ ಕಂಡು, "ತಂದೆಯೇ, ಜನರು ನಾನಾ ವಿಧವಾಗಿ ನಮಗೆ ಅಮಂಗಳಕರವಾದ ಮಾತುಗಳನ್ನು ನುಡಿಯುತ್ತಿರುವರು. ನಿನ್ನನ್ನೂ ಭೀಷ್ಮನನ್ನೂ ದೂರೀಕರಿಸಿ, ಪಾಂಡುಕುಮಾರನಾದ ಯುಧಿಷ್ಠಿರನೇ ತಮಗೆ ರಾಜನಾಗಬೇಕೆಂದು ಅವರು ಅಪೇಕ್ಷಿಸುತ್ತಿದ್ದಾರೆ. ಭೀಷ್ಮನಿಗೆ ರಾಜ್ಯಾಪೇಕ್ಷೆಯಿಲ್ಲದಿರುವ ಕಾರಣ, ಆತನು ಇದಕ್ಕೆ ತನ್ನ ಒಪ್ಪಿಕೆಯನ್ನು ಕೂಡಲೇ ಕೊಡುವನು. ಇದರಿಂದ ಪ್ರಜೆಗಳು ನಮಗೆ ಕೆಡುಕನ್ನೂ ಪಾಂಡವರಿಗೆ ಹಿತವನ್ನೂ ಬಯಸುತ್ತಿರುವರು. ನೀನು ಅಂಧನಾದ ಕಾರಣ, ಎಂತಹ ರಾಜಕರಣ ಶಕ್ತಿಯಿದ್ದರೂ, ನಿನಗೆ ರಾಜ್ಯವು ದೊರೆಯಲಿಲ್ಲ. ಹಿಂದೆ ಪಾಂಡು ರಾಜನು ದೊರೆಯಾಗಿದ್ದನೆಂದು, ಈಗ ಅವನ ಮಗನಿಗೇ ರಾಜ್ಯವು ಬರುವುದಾದರೆ, ಅವನ ತರುವಾಯ ಸಿಂಹಾಸನವು ಅವನ ಮಗನಿಗೇ ಲಭಿಸುವುದು. ಅನಂತರ ಈ ಕುರುವಂಶದ ಸಿಂಹಾಸನವು ಅವನ ವಂಶಕ್ಕೇ ಸ್ಥಿರವಾಗಿ, ತಂದೆಯಿಂದ ಮಗನಿಗೆ ಪಾರಂಪರ್ಯವಾಗಿ ಲಭಿಸುವುದು. ಇದರಿಂದ ನಮಗೂ ನಮ್ಮ ಮಕ್ಕಳಿಗೂ ರಾಜ್ಯದ ಸಂಬಂಧವೇ ಇಲ್ಲದಂತಾಗುವುದು. ಆಗ ಜನರೆಲ್ಲರೂ ನಮ್ಮನ್ನು ಅಲಕ್ಷ್ಯವಾಗಿ ಕಾಣುವುದು ಮಾತ್ರವಲ್ಲದೆ, ನಮಗೆ ವಿರೋಧವಾಗಿ ನಡೆದು, ನಮ್ಮಲ್ಲಿ ವೈರವನ್ನೂ ಸಹ ಸಾಧಿಸಬಹುದು. ಆದಿಯಲ್ಲಿಯೇ ನಿನಗೆ ಸಿಂಹಾಸನವು ಲಭಿಸಿದ್ದರೆ, ರಾಜ್ಯಕ್ಕೆ ನಾವುಗಳೇ ಉತ್ತರಾಧಿಕಾರಿಗಳಾಗುತ್ತಿದ್ದೆವು. ಈಗ ನಮಗೆ ಎಂತಹ ಅವಮಾನವೂ ನಷ್ಟವೂ ಒದಗಿತು! ಇದಕ್ಕಿಂತಲೂ ನರಕವೇ ಲೇಸಲ್ಲವೇ?" ಎಂದು ಹೇಳಿಕೊಂಡು ಗೋಳಾಡಿದನು.

ಇದೆಲ್ಲವನ್ನೂ ಕೇಳಿದ ಧೃತರಾಷ್ಟ್ರನ ಮನಸ್ಸಿಗೆ ಬಹಳ ವ್ಯಥೆಯಾಯಿತು. ನಾನಾ ವಿಧವಾದ ಆಲೋಚನೆಗಳು ಮನಸ್ಸಿನಲ್ಲಿ ಉದಿಸಿದವು. ಆದರಿಂದ ದಿಕ್ಕು ತೋರದಂತಾಗಿ ಸ್ವಲ್ಪ ಹೊತ್ತು ಸ್ತಬ್ಧನಾಗಿರಲು, ದುರ್ಯೋಧನನು ತಮ್ಮನಾದ ದುಶ್ಶಾಸನನನ್ನೂ ಮಾವನಾದ ಶಕುನಿಯನ್ನೂ ಕರೆದು ಅವರೊಡನೆ ಆಲೋಚಿಸಿ, ತಂದೆಯನ್ನು ಕುರಿತು, "ಅಪ್ಪಾ, ಏನಾದರೂ ಉಪಾಯಮಾಡಿ, ಪಾಂಡವರನ್ನು ವಾರಣಾವತಕ್ಕೆ ಕಳುಹಿಸಿಬಿಡು. ಅನಂತರ ನಮಗೆ ಅವರಿಂದ ಯಾವ ಭೀತಿಯೂ ಇರಲಾರದು," ಎಂದನು. ಇದನ್ನು ಕೇಳಿ ಧೃತರಾಷ್ಟ್ರನು ಸ್ವಲ್ಪಹೊತ್ತು ಆಲೋಚಿಸಿ, ಮಗನನ್ನು ನೋಡಿ, "ಮಗೂ ದುರ್ಯೋಧನಾ, ಪಾಂಡುವು ಪರಮಸತ್ಯವಂತನು. ಯಾರಲ್ಲಿಯೂ ಅವನು ಸತ್ಯ ಧರ್ಮಗಳನ್ನು ಮೀರಿ ನಡೆದವನಲ್ಲ. ನನ್ನ ವಿಷಯದಲ್ಲಿ ಅವನು ಅತ್ಯಂತ ಪ್ರೀತಿ ವಿಶ್ವಾಸಗಳನ್ನಿಟ್ಟು ನನಗೆ ಸೇವೆಮಾಡಿ ಕರ್ತವ್ಯಗಳನ್ನು ನಡೆಯಿಸಿದನು. ಅವನ ಮಗನಾದ ಯುಧಿಷ್ಠಿರನೂ ಸಹ ಅವನಂತೆಯೇ ಸತ್ಯ ಧರ್ಮ ನಿರತನಾಗಿಯೂ ಸದ್ಗುಣ ಸಂಪನ್ನನಾಗಿಯೂ ಕೀರ್ತಿಯನ್ನು ಪಡೆದಿದ್ದಾನೆ. ಜನರೆಲ್ಲರಿಗೂ ಅವನಲ್ಲಿ ಅತ್ಯಂತ ಪ್ರೇಮವುಂಟಾಗಿದೆ. ಪಾಂಡುವು ಮಂತ್ರಿಗಳನ್ನೂ ಸೇನಾನಾಯಕರನ್ನೂ ವೀರಭಟರುಗಳನ್ನೂ ಮತ್ತು ಅವರ ಮಕ್ಕಳು ಮೊಮ್ಮಕ್ಕಳು ಮೊದಲಾಗಿ ಅವರುಗಳ ಕುಟುಂಬದವರೆಲ್ಲರನ್ನೂ ಅತ್ಯಂತ ಪ್ರೀತಿಯಿಂದ ಆದರಿಸಿ ಕಾಪಾಡುತ್ತಿದ್ದನು. ಹೀಗೆ ಅವನಿಂದ ಸಹಾಯ ಪಡೆದ ಪ್ರಜೆಗಳೆಲ್ಲರೂ ಯುಧಿಷ್ಠಿರನ ಪಕ್ಷವಾಗಿ, ಅವನ ಗುಣದಿಂದಲೂ ತಮ್ಮ ಕೃತಜ್ಞತೆಯಿಂದಲೂ ಅವನಿಗೆ ಹಿತಚಿಂತಕರಾಗಿಯೇ ಇದ್ದಾರೆ. ಇದರಿಂದ ಯುಧಿಷ್ಠಿರನಿಗೆ ಪ್ರಜೆಗಳ ಸಹಾಯವಿದೆ. ನಾವೇನಾದರೂ ಬಲಾತ್ಕಾರದಿಂದ ಪಾಂಡವರಿಗೆ ರಾಜ್ಯವನ್ನು ತಪ್ಪಿಸಿ ಹೊರಗೆ ನೂಕುವುದಾದರೆ, ಅವರ ಪಕ್ಷವಾಗಿರುವ ಅಧಿಕಾರಿಗಳೂ ಪ್ರಜೆಗಳೂ ನಮ್ಮನ್ನು ದ್ವೇಷಿಸಿ, ನಮಗೇ ಕೆಡುಕನ್ನು ಮಾಡಿದರೂ ಮಾಡಬಹುದು; ಅಥವಾ ನಮ್ಮನ್ನೂ ನಮ್ಮ ಬಂಧು ಮಿತ್ರರನ್ನೂ ಕೊಲ್ಲಲೂ ಬಹುದು. ಹೀಗಿರುವಲ್ಲಿ, ನಾವು ಪಾಂಡವರನ್ನು ಎದುರುಹಾಕಿಕೊಂಡು, ಲೋಕಾಪವಾದವನ್ನೂ ಪಡೆದು, ಅನರ್ಥಕ್ಕೂ ಗುರಿಯಾಗಲು ಸಾಧ್ಯವೇ?"

ಎಂದನು. ಅದಕ್ಕೆ ದುರ್ಯೋಧನನು, "ಅಪ್ಪಾ, ನಾವು ಹೀಗೆ ಭಯ ಪಡಬೇಕಾಗಿಲ್ಲ. ಮುಂದೆ ಒದಗ ಬಹುದಾದ ಅಪಾಯಗಳನ್ನು ತಪ್ಪಿಸಿ ಕೊಳ್ಳಲು ನಾವು ಈಗ ಪ್ರಜೆಗಳನ್ನು ನಮ್ಮ ಪಕ್ಷವಾಗಿ ತಿರುಗಿಸಿಕೊಳ್ಳ ಬೇಕು. ಅದಕ್ಕಾಗಿ ನಾವು ಅವರುಗಳಿಗೆ ವಿಶೇಷವಾಗಿ ಧನವನ್ನೂ ಬಹುಮಾನ ಮರ್ಯಾದೆಗಳನ್ನೂ ಕೊಡುವುದಾದರೆ, ಅವರು ನಮ್ಮ ಕಡೆಗೇ ಸೇರಿಕೊಳ್ಳುವರು. ಮಂತ್ರಿಗಳೂ ಭಂಡಾರವೂ ನಮ್ಮ ವಶವಾಗಿಯೇ ಇರುವವು. ಇಷ್ಟು ಮಾತ್ರವಲ್ಲದೆ, ಭೀಷ್ಮನು ಯಾವ ಪಕ್ಷಕ್ಕೂ ಸೇರ ತಕ್ಕವನಲ್ಲ. ದ್ರೋಣಪುತ್ರನಾದ ಅಶ್ವತ್ಥಾಮನು ನನ್ನ ಪರಮ ಮಿತ್ರನು; ಅವನು ನಮ್ಮ ಪಕ್ಷವಾಗಿಯೇ ಇರುವನು. ಮಗನು ನಮ್ಮ ಕಡೆಯಲ್ಲಿದ್ದ ಮೇಲೆ ದ್ರೋಣಾಚಾರ್ಯರೂ ಸಹ ನಮ್ಮ ಪರವಾಗಿಯೇ ಇರುವರಲ್ಲದೆ ಅವರು ವಿರೋಧ ಪಕ್ಷವನ್ನು ಸೇರುವುದೇ ಇಲ್ಲ. ಇವರಿಬ್ಬರೂ ಯಾವ ಕಡೆಯಿದ್ದರೆ, ಕೃಪಾಚಾರ್ಯರೂ ಆ ಪಕ್ಷದಲ್ಲಿಯೇ ಇರುವರು. ಅವರು ದ್ರೋಣಾಚಾರ್ಯರನ್ನು ಬಿಟ್ಟು ಬೇರೆಯಾಗ ತಕ್ಕವರೇ ಅಲ್ಲ. ವಿದುರನು ನಮ್ಮಾಶ್ರಯದಲ್ಲಿಯೇ ಇರುವನು. ಅವನಿಗೆ ಅಂತರ್ಯದಲ್ಲಿ ಪಾಂಡವರ ಮೇಲೆ ಪ್ರೀತಿಯಿದ್ದರೂ, ಅವನೊಬ್ಬನೇ ಪಾಂಡವಪಕ್ಷವಾಗಿ ನಮ್ಮನ್ನೇನನ್ನೂ ಮಾಡಲಾರನು. ಇದರಿಂದ ನಾವು ಈಗ ಸ್ವಲ್ಪವೂ ಭಯ ಪಡಬೇಕಾಗಿಲ್ಲ. ಕುಂತಿಯನ್ನೂ ಪಾಂಡವರನ್ನೂ ಹೇಗಾದರೂ ಮಾಡಿ ಈ ದಿನವೇ ವಾರಣಾವತಕ್ಕೆ ಕಳುಹಿಸಿ ಬಿಡಬೇಕು. ನಿನ್ನ ಈ ಭಯ ಚಿಂತೆಗಳನ್ನು ತೊಲಗಿಸು. ಅವರಿಲ್ಲಿ ಇರುವುದಾದರೆ ನನಗೆ ನಿದ್ರಾಹಾರಗಳೇ ಬೇಕಿಲ್ಲವಾಗಿ ದುಃಖ ಶಲ್ಯವು ನನ್ನ ಎದೆಯನ್ನಿರಿಯುತ್ತಿರುವುದು," ಎಂದು ಹೇಳಿದನು.

ಇದನ್ನು ಕೇಳಿ ಧೃತರಾಷ್ಟ್ರನು, "ಕುಮಾರಾ, ನನಗೂ ಇದೇ ಆಲೋಚನೆಯು ಹೊಳೆಯಿತು. ಆದರೆ ಇದು ಪಾಪಕಾರ್ಯವೆಂದು ನಾನು ಸುಮ್ಮನಿದ್ದೇನೆ," ಎಂದನು. ಆಗ ದುರ್ಯೋಧನನು ಕೆಲವರು ರಾಜನೀತಿ ನಿಪುಣರನ್ನು ತನ್ನ ಕಡೆಗೆ ಸೇರಿಸಿಕೊಂಡು ಅವರಿಂದಲೂ ತಂದೆಗೆ, ತನಗನುಕೂಲವಾಗಿ, ಬೋಧನೆ ಮಾಡಿಸಿದನು. ಅಲ್ಲದೆ, ಶಕುನಿಯು ಆಪ್ತ ಮಂತ್ರಿಯಾಗಿದ್ದ **ಗಣಿಕ**ನೆಂಬುವನಿಂದ ಧೃತರಾಷ್ಟ್ರನಿಗೆ ಅನೇಕ ವಿಧವಾಗಿ ತನಗನುಕೂಲವಾದ ರೀತಿಯಲ್ಲಿ ರಾಜನೀತಿಯನ್ನು

ಹೇಳಿಸಿದನು. ಗಣಿಕನು ಧೃತರಾಷ್ಟ್ರನನ್ನು ನೋಡಿ, "ಪ್ರಭೂ, ತಾವು ಅರಿಯದೆ ಇರುವ ರಾಜನೀತಿ ಯಾವುದೂ ಇಲ್ಲ. ಆದರೂ ಈ ಸಮಯ ದಲ್ಲಿ ತಮ್ಮ ಹಿತಚಿಂತಕನಾಗಿ ನಾನು ವಿಜ್ಞಾಪಿಸುವುದನ್ನು, ಕೋಪಿಸದೆ, ಲಾಲಿಸಬೇಕು. ಏನೆಂದರೆ: ಶತ್ರುಗಳು ನಮ್ಮ ವಶದಲ್ಲಿರುವುದಾದರೆ, ಅವರನ್ನು ನಂಬದೆ ನಾವು ನಿಷ್ಕರುಣರಾಗಿ ಹೇಗಾದರೂ ಅವರನ್ನು ನಾಶಪಡಿಸಬೇಕು. ರಾಜನು ತನ್ನ ಪರಾಕ್ರಮವನ್ನು ಆಗಾಗ ಪ್ರಕಟ ಮಾಡುತ್ತಲೇ ಇರಬೇಕು. ತನ್ನ ಶಕ್ತಿಗೆ ಲೋಪಬಾರದಂತೆ ಸದಾ ಎಚ್ಚರಿಕೆಯಿಂದಿರಬೇಕು. ತನ್ನ ರಾಜಕಾರ್ಯಗಳನ್ನು ರಹಸ್ಯವಾಗಿಟ್ಟು ಕೊಂಡಿರಬೇಕು. ಒಂದು ಕಾರ್ಯವನ್ನಾರಂಭಿಸಿದರೆ ಅದನ್ನು ಯಾವ ರೀತಿಯಿಂದಲಾದರೂ ಪೂರ್ತಿಮಾಡಿ ತನ್ನ ಇಷ್ಟವನ್ನು ನೆರವೇರಿಸಿ ಕೊಳ್ಳದೆ ಬಿಡಲೇಬಾರದು. ಬೆಂಕಿಯು ಸ್ವಲ್ಪವಾದರೂ, ಮಹಾರಣ್ಯ ವನ್ನೇ ಆವರಿಸಿ ದಹಿಸುವಂತೆ, ಶತ್ರುವು ಬಲಹೀನನಾಗಿ ಕಂಡರೂ, ಅವನಿಂದ ತನಗೆ ಅಪಾಯವು ತಪ್ಪುವುದೇ ಇಲ್ಲವೆಂದು ತಿಳಿದು ಮೊದಲು ಆ ಶತ್ರುಶೇಷವನ್ನು ನಿವಾರಣೆ ಮಾಡಿಕೊಳ್ಳಲೇ ಬೇಕು. ಇನ್ನು ಪ್ರಬಲ ಶತ್ರುವಿನ ವಿಷಯದಲ್ಲಿ ಹೇಳತಕ್ಕದೇನು? ಶತ್ರುವನ್ನು ಧ್ವಂಸ ಮಾಡದೆ ಬಿಡಲೇ ಕೂಡದು. ಆದುದರಿಂದ, ರಾಜೇಂದ್ರಾ, ಪಾಂಡು ಪುತ್ರರು ನಿಮ್ಮ ಹಾಸಿಗೆಯಲ್ಲಿ ಸೇರಿಕೊಂಡಿರುವ ಹಾವುಗಳು, ಅವರು ಬಲಶಾಲಿಗಳು ಮತ್ತು ಸಹಾಯವುಳ್ಳವರು. ಆದರಿಂದ ಅವರ ವಿಚಾರ ದಲ್ಲಿ ನೀವು ಬಹಳ ಎಚ್ಚರದಿಂದಿದ್ದು, ಸಮಯನೋಡಿ ಅವರನ್ನು ನಿವಾರಣೆ ಮಾಡಿಕೊಂಡು, ನಿಮ್ಮನ್ನೂ ನಿಮ್ಮ ಸಾಮ್ರಾಜ್ಯವನ್ನೂ ಕಾಪಾಡಿಕೊಳ್ಳಿ," ಎಂದು ಮೊದಲಾಗಿ ನಾನಾ ವಿಧವಾದ ಉದಾಹರಣೆ ಗಳ ಸಹಿತವಾಗಿಯೂ ಬಹು ಚಾತುರ್ಯದಿಂದಲೂ ಬೋಧನೆಮಾಡಿದನು.

ಅಧ್ಯಾಯ ೧೧

## ಪಾಂಡವರ ವಾರಣಾವತ ಪ್ರಯಾಣ

ಅನಂತರ ದುರ್ಯೋಧನನು ಸಮಯ ನೋಡಿ, ಗುಟ್ಟಾಗಿ ಧೃತ ರಾಷ್ಟ್ರನನ್ನು ಕುರಿತು, "ಅಪ್ಪಾ, ನಾನು ಸೇವಕರಿಗೆ ಯಥೇಷ್ಟವಾಗಿ

ದ್ರವ್ಯವನ್ನೂ ಬಹುಮಾನಗಳನ್ನೂ ಕೊಟ್ಟು ಅವರನ್ನು ಸಂತೋಷ ಪಡಿಸಿರುತ್ತೇನೆ. ಅವರೆಲ್ಲರೂ ಈಗ ನಮ್ಮ ಪಕ್ಷವಾಗಿಯೇ ಇರುವರು. ಮಂತ್ರಿಗಳೆಲ್ಲರನ್ನೂ ನನ್ನ ವಶಮಾಡಿಕೊಂಡಿರುತ್ತೇನೆ. ಆದರಿಂದ ನೀನು ಏನಾದರೂ ಉಪಾಯ ಮಾಡಿ ಕ್ಷಿಪ್ರದಲ್ಲಿ ಪಾಂಡವರನ್ನು ವಾರಣಾವತಕ್ಕೆ ಸಾಗಿಸಿ ಬಿಟ್ಟರೆ, ಆಗ ರಾಜ್ಯಕೋಶಗಳೆಲ್ಲವೂ ನಮ್ಮ ಸ್ವಾಧೀನವಾಗುವವು. ಅಧಿಕಾರಿಗಳೂ ಪ್ರಜೆಗಳೂ ಎಲ್ಲರೂ ನಮ್ಮ ಪಕ್ಷವನ್ನೇ ಸೇರುವರು. ನಾವು ರಾಜ್ಯವನ್ನು ಸ್ಥಿರಪಡಿಸಿಕೊಂಡ ಮೇಲೆ, ಪಾಂಡವರು ಹಿಂದಿರುಗಿ ಬಂದರೆ ಬರಲಿ, ಆಗ ಅವರಿಂದ ನಮಗೆ ಯಾವ ಅಪಾಯವೂ ಒದಗಲಾರದು. ಆದುದರಿಂದ ಮೊದಲು ಪಾಂಡವರನ್ನು ವಾರಣಾವತಕ್ಕೆ ಕಳುಹಿಸು," ಎಂದು ಹೇಳಿದನು. ಇದೇ ಅಭಿಪ್ರಾಯವನ್ನೇ ದುರ್ಯೋಧನನ ಪಕ್ಷದ ಇನ್ನೂ ಕೆಲವರು ಹೇಳಿದರು. ಇವೆಲ್ಲವನ್ನೂ ಕೇಳಿ ಧೃತರಾಷ್ಟ್ರನ ಮನಸ್ಸೂ ಮಗನಂತೆಯೇ ಸಂಪೂರ್ಣವಾಗಿ ತಿರುಗಿ ಬಿಟ್ಟಿತು. ಅದಕ್ಕೆ ತಕ್ಕಂತೆಯೇ ದುರ್ಯೋಧನಾದಿಗಳು ಒಳಗೊಳಗೇ ಏರ್ಪಾಟುಗಳನ್ನು ಮಾಡುತ್ತಿದ್ದರು. ಹೀಗಿರುವಲ್ಲಿ,

ಒಂದು ದಿನ ರಾಜಾಸ್ಥಾನದಲ್ಲಿ ಧೃತರಾಷ್ಟ್ರನಿಂದ ಪ್ರೇರಿತರಾದ ಕೆಲವರು ಚತುರರಾದ ಮಂತ್ರಿಗಳು, ವಾರಣಾವತದಂತಹ ಸ್ಥಳವೇ ಮತ್ತೆಲ್ಲಿಯೂ ಇಲ್ಲವೆಂತಲೂ ಅದನ್ನು ನೋಡದ ಕಣ್ಣು ಕಣ್ಣಲ್ಲವೆಂತಲೂ ಮೊದಲಾಗಿ ವರ್ಣಿಸಿದುದಲ್ಲದೆ, ಆಗ ಆ ಊರಿನಲ್ಲಿ ಪಶುಪತಿಯ (ಶಿವನ) ಉತ್ಸವವು ಅತಿ ವಿಜೃಂಭಣೆಯಿಂದ ನಡೆಯಲಾರಂಭವಾಗಿದೆಯೆಂತಲೂ, ಜನರು ಅದನ್ನು ನೋಡಲು ದಿಕ್ಕು ದಿಕ್ಕುಗಳಿಂದಲೂ ಅಸಂಖ್ಯಾತರಾಗಿ ಬಂದು ಸೇರುತ್ತಿರುವರೆಂತಲೂ, ಅಲ್ಲಿ ನಡೆಯುವ ದೇವರ ಮೆರೆವಣಿಗೆಯಂತಹ ಮನೋಹರ ದೃಶ್ಯವು ಪ್ರಪಂಚದಲ್ಲಿಯೇ ಮತ್ತೆಲ್ಲಿಯೂ ಇಲ್ಲವೆಂತಲೂ ವಿಧ ವಿಧವಾಗಿ ಹೊಗಳುತ್ತ, ಆ ದೇವರಿಗೆ ಧರಿಸುವ ನಾನಾ ವಿಧವಾದ ಅಮೂಲ್ಯ ರತ್ನಾಭರಣಗಳನ್ನು ನೋಡದಿದ್ದವರ ಜನ್ಮವೇತಕ್ಕೆಂದು ಮೊದಲಾಗಿ ಹೇಳಿದರು.

ಇದೆಲ್ಲವನ್ನೂ ಕೇಳಿದ ಪಾಂಡವರಿಗೆ ತಾವೂ ವಾರಣಾವತಕ್ಕೆ ಹೋಗಿ ಅಲ್ಲಿನ ಸೊಬಗನ್ನು ನೋಡಬೇಕೆಂಬ ಕುತೂಹಲವು ಹುಟ್ಟಿರಲೇಬೇಕೆಂದಾಲೋಚಿಸಿ ಧೃತರಾಷ್ಟ್ರನು, ಅವರನ್ನು ನೋಡಿ,

"ಮಕ್ಕಳಿರಾ, ಈಗ ವಾರಣಾವತದಲ್ಲಿ ನಡೆಯುವ ಮಹೋತ್ಸವವು ಅದ್ಭುತವಾದುದೆಂತಲೂ, ಇಂತಹ ದೃಶ್ಯವು ಪ್ರಪಂಚದಲ್ಲಿಯೇ ಮತ್ತೆಲ್ಲಿಯೂ ಇಲ್ಲವೆಂತಲೂ, ಪದೇ ಪದೇ ನಮ್ಮ ಜನರು ಹೇಳುತ್ತಿದ್ದಾರೆ. ನಿಮಗೂ ಅದನ್ನು ನೋಡಬೇಕೆಂದಪೇಕ್ಷೆಯಿದ್ದರೆ, ನೀವುಗಳೆಲ್ಲರೂ ಪರಿವಾರ ಸಹಿತವಾಗಿ ಅಲ್ಲಿಗೆ ಹೋಗಿ ಆ ಮಹೋತ್ಸವವನ್ನು ನೋಡಿ ಆನಂದ ಪಟ್ಟು, ಬ್ರಾಹ್ಮಣರಿಗೆ ಧನಕನಕರತ್ನಾಭರಣಾದಿಗಳನ್ನು ದಾನಮಾಡಿ, ದೇವೇಂದ್ರ ವೈಭವದಿಂದ ನಿಮ್ಮ ಇಷ್ಟ ಬಂದಷ್ಟು ದಿನಗಳು ಅಲ್ಲಿ ಸಂತೋಷದಿಂದಿದ್ದು, ಅನಂತರ ಹಸ್ತಿನಾಪುರಕ್ಕೆ ಹಿಂದಿರುಗಿ ಬನ್ನಿ," ಎಂಬುದಾಗಿ ಹೇಳಿದನು.

ಇದನ್ನು ಕೇಳಿದ ಯುಧಿಷ್ಠಿರನಿಗೆ ಧೃತರಾಷ್ಟ್ರನ ಉದ್ದೇಶ ವೇನೆಂಬುದು ಮನಸ್ಸಿಗೆ ಬಂದರೂ, ತಾನು ಸಹಾಯಹೀನನಾಗಿರುವುದ ರಿಂದ ಅದಕ್ಕೆ ಪ್ರತಿಯಾಗಿ ಹೇಳದೆ, ಆಗಬಹುದೆಂದು ಒಪ್ಪಿದನು. ಅನಂತರ ಭೀಷ್ಮ ದ್ರೋಣ ಕೃಪ ಅಶ್ವತ್ಥಾಮ ವಿದುರ ಮೊದಲಾದವರ ಅಪ್ಪಣೆಯನ್ನು ಪಡೆದು ಪಂಚಪಾಂಡವರು ಕುಂತಿಯೊಡಗೂಡಿ ವಾರ ಣಾವತಕ್ಕೆ ಪ್ರಯಾಣ ಮಾಡಲು ಸಿದ್ಧರಾದರು.

## ಲಾಕ್ಷಾಗೃಹನಿರ್ಮಾಣ

ಪಾಂಡವರನ್ನು ತೊಲಗಿಸುವ ತನ್ನ ಇಚ್ಛೆಯು ನೆರವೇರಿತೆಂದು ದುರ್ಯೋಧನನು ಆನಂದ ಭರಿತನಾದನು. ಆಗ ಅವನು ಕೂಡಲೇ ತನ್ನ ಆಪ್ತನಾದ ಪುರೋಚನನನ್ನು ಕರೆಯಿಸಿ, ಗೋಪ್ಯವಾಗಿ, "ಪುರೋ ಚನಾ! ಈ ಸಕಲೈಶ್ವರ್ಯಭರಿತ ಸಾಮ್ರಾಜ್ಯವೆಲ್ಲವೂ ಈಗ ನನ್ನ ವಶ ವಾಗಿದೆ. ಇದರಲ್ಲಿ ನಿನಗೂ ನನ್ನಂತೆ ಸರ್ವಸ್ವಾತಂತ್ರ್ಯವುಂಟು. ಆದ ಕಾರಣ ಇದನ್ನು ನಾವು ಕಾಪಾಡಿಕೊಳ್ಳಬೇಕಾದುದು ಅವಶ್ಯವು. ನನ್ನ ಗೋಪ್ಯಾಲೋಚನೆಗಳನ್ನು ತಿಳಿಸಿ ಸಹಾಯ ಪಡೆಯಲು ನನಗೆ ನಿನಗಿಂತಲೂ ಆಪ್ತರಾದವರು ಮತ್ತೆ ಯಾರೂ ಇಲ್ಲ. ಆದಕಾರಣ, ನಿನ್ನಲ್ಲಿ ಸಂಪೂರ್ಣವಾದ ನಂಬಿಕೆಯಿಟ್ಟು ಕೆಲವು ಗುಟ್ಟಾದ ವಿಚಾರ ಗಳನ್ನು ತಿಳಿಸುತ್ತೇನೆ. ಅದರಂತೆ ನೀನೂ ಸಹ ಗೋಪ್ಯವಾಗಿಯೂ, ಚಾತುರ್ಯದಿಂದಲೂ ಅವುಗಳನ್ನು ನಡೆಯಿಸಿ, ನನ್ನ ಶತ್ರುಗಳನ್ನು ನಾಶ

ಮಾಡಬೇಕು. ಈಗ ಪಾಂಡವರು ವಾರಣಾವತಕ್ಕೆ ಹೋಗುವರು, ಮತ್ತು ಧೃತರಾಷ್ಟ್ರ ರಾಜನ ಆಜ್ಞೆಯಂತೆ ಉತ್ಸವಗಳನ್ನು ನೋಡಿಕೊಂಡು ಅಲ್ಲಿಯೇ ವಿನೋದದಿಂದಿರುವರು. ನೀನು ಈಗಲೇ ಅತಿವೇಗವಾದ ಕುದುರೆಗಳನ್ನು ಕಟ್ಟಿದ ರಥದ ಮೇಲೆ ಹೊರಟು, ಈ ದಿನವೇ ವಾರಣಾವತವನ್ನು ಸೇರಿ, ಅಲ್ಲಿ ಊರಿನ ಹೊರಗಡೆಯಲ್ಲಿ ಚಚ್ಚೌಕವಾದ ಅಂಗಳದಿಂದ ಕೂಡಿದ ಒಂದು ದಿವ್ಯವಾದ ಅರಮನೆಯನ್ನು ಬಹಳ ಚನ್ನಾಗಿ ಕಟ್ಟಿಸಿ, ಅದರಲ್ಲಿ ಬೇಕು ಬೇಕಾದಂತಹ ಅಂದವಾದ ಸಾಮಾನುಗಳನ್ನೂ ಪೀಠೋಪಕರಣಗಳನ್ನೂ ಇಡಿಸಬೇಕು.

"ಆ ಮಂದಿರವನ್ನು ಕಟ್ಟಿಸುವುದರಲ್ಲಿ ಮಾತ್ರ, ಸಣಬು, ಗೋಣಿ, ಗುಗ್ಗುಳ, ಅರಗು ಮೊದಲಾದ, ಬೆಂಕಿಹತ್ತಿಕೊಳ್ಳುವ ವಸ್ತುಗಳನ್ನು ಸಾಧ್ಯವಾದಷ್ಟೂ ಸಂಗ್ರಹಿಸಿ ಉಪಯೋಗಿಸಬೇಕು. ಕಟ್ಟುವ ಮಣ್ಣಿಗೆ, ತುಪ್ಪ, ಎಣ್ಣೆ, ಕೊಬ್ಬು, ಹೆಚ್ಚಾಗಿ ಅರಗು ಮೊದಲಾದವುಗಳನ್ನು ಉಪಯೋಗಿಸಿ, ಗೋಡೆಗಳಿಗೂ ಮೆತ್ತಿ, ಗಾರೆ ಹಾಕಿಸಬೇಕು. ಅಲ್ಲದೆ, ಆ ಮನೆಯಲ್ಲಿ ಸಾಧ್ಯವಾದ ಮಟ್ಟಿಗೆ ಎಲ್ಲ ಕಡೆಗಳಲ್ಲಿಯೂ ಗೋಣಿ, ತುಪ್ಪ, ಎಣ್ಣೆ, ಮರ, ಅರಗು — ಇಂತಹ ಸಾಮಾನುಗಳನ್ನೇ ಬಹಳ ಎಚ್ಚರದಿಂದ, ಪಾಂಡವರಿಗೆ ಸಂದೇಹಕ್ಕವಕಾಶವಿಲ್ಲದಂತೆ, ಇಡಿಸಿರಬೇಕು. ಹೀಗೆ ಅರಮನೆಯನ್ನು ಕಟ್ಟಿಸಿ, ಪಾಂಡವರನ್ನೂ ಕುಂತಿಯನ್ನೂ ಬಹಳ ಮರ್ಯಾದೆಯಿಂದ ಸೇವಿಸಿ, ಅವರೆಲ್ಲರನ್ನೂ ಕರೆತಂದು ಆ ಮನೆಯಲ್ಲಿ ವಾಸಮಾಡುವಂತೆ ಇಡಬೇಕು. ಅಲ್ಲದೆ ನಮ್ಮ ಉದ್ದೇಶವು ಸಮಗ್ರವಾಗಿ ನೆರವೇರುವವರೆಗೂ ಈ ಗುಟ್ಟು ವಾರಣಾವತದಲ್ಲಿ ಸಹ ಒಬ್ಬರಿಗೂ ತಿಳಿಯಕೂಡದು. ಅದರಂತೆ ನೀನು ಬಹಳ ಜಾಗರೂಕತೆಯಿಂದ ಎಲ್ಲ ಕಾರ್ಯಗಳನ್ನೂ ನಿರ್ವಹಿಸಬೇಕು. ಅನಂತರ, ಪಾಂಡವರೂ ಕುಂತಿಯೂ, ನಿರ್ಭಯವಾಗಿ, ಆ ಮನೆಯಲ್ಲಿ ಮಲಗಿ ನಿದ್ರಿಸುತ್ತಿರುವುದನ್ನು ತಿಳಿದು, ಹೆಬ್ಬಾಗಿಲಿಂದಾರಂಭಿಸಿ ಸುತ್ತಲೂ ಆ ಮನೆಗೆ ಬೆಂಕಿಹಚ್ಚಿಬಿಡಬೇಕು. ಇದರಿಂದ ಪಾಂಡವರು, ಮನೆಗೆ ಉರಿಹತ್ತಿ ಬೆಂಕಿಗೆ ಸಿಕ್ಕಿ ಮೃತರಾದರೆಂದು ಜನರು ತಿಳಿದುಕೊಳ್ಳುವರೇ ಹೊರತು, ಅವರ ಮರಣಕ್ಕೆ ನಾವು ಕಾರಣರೆಂದು ಯಾರೂ ನಮ್ಮ ಮೇಲೆ ದೋಷಾರೋಪಣೆಮಾಡಲು ಅವಕಾಶವಿರುವುದಿಲ್ಲ," ಎಂಬುದಾಗಿ

ತನ್ನ ಮನೋಗತವನ್ನು ಅವನಿಗೆ ತಿಳಿಸಿದನು. ಆಗ ಪುರೋಚನನು, ಅದರಂತೆ ಒಪ್ಪಿ, ತಾನು ಕಾರ್ಯವನ್ನು ಚತುರತೆಯಿಂದ ನೆರವೇರಿಸುವ ನೆಂದು ದುರ್ಯೋಧನನಿಗೆ ಭರವಸೆಕೊಟ್ಟು, ವೇಗವಾದ ಕುದುರೆಗಳನ್ನು ಕಟ್ಟಿದ ರಥದಲ್ಲಿ ವಾರಣಾವತವನ್ನು ಕುರಿತು ಹೊರಟುಹೋದನು.

ಇದಾದನಂತರ ಪಾಂಡವರು ಧೃತರಾಷ್ಟ್ರನ ಮನೋಗತವನ್ನು ಗ್ರಹಿಸಿ, ವ್ಯಸನದಿಂದ ಕೂಡಿ, ಧೃತರಾಷ್ಟ್ರ, ಭೀಷ್ಮ, ದ್ರೋಣಾಚಾರ್ಯ, ಕೃಪಾಚಾರ್ಯ ಮತ್ತು ವಿದುರನೇ ಮೊದಲಾದ ಹಿರಿಯರಿಗೆಲ್ಲರಿಗೂ ನಮಸ್ಕಾರಮಾಡಿ, ಅವರೆಲ್ಲರ ಅಪ್ಪಣೆಯನ್ನೂ ಪಡೆದು ರಥಗಳನ್ನು ಹತ್ತಿದರು. ಪಾಂಡವರ ಪ್ರಯಾಣದಿಂದ ಆ ರಾಜಧಾನಿಯ ಜನಗಳೆಲ್ಲರಿಗೂ ಬಹಳ ವ್ಯಸನವುಂಟಾಯಿತು. ಅದರಿಂದ ಪುರ ಪ್ರಮುಖರು ಬಹುಮಂದಿ ತಮ್ಮ ತಮ್ಮಲ್ಲಿಯೇ, ಧೃತರಾಷ್ಟ್ರನು ಬಹು ಪಕ್ಷಪಾತಿಯೆಂತಲೂ, ಅನೂಚಾನವಾಗಿ ರಾಜ್ಯಭಾರಮಾಡಿದ ಪಾಂಡು ರಾಯ ಮತ್ತು ಯುಧಿಷ್ಠಿರಾದಿ ಪಾಂಡವರ ವಿಷಯದಲ್ಲಿ ಆತನು ಅನ್ಯಾಯ ಮಾಡಿ ಈ ರೀತಿಯಾಗಿ ಪಾಂಡವರನ್ನು ತೊಲಗಿಸಿ ತನ್ನ ಮಕ್ಕಳಿಗೆ ರಾಜ್ಯವನ್ನು ಕೊಟ್ಟಿರುವನೆಂತಲೂ, ಬಹಳ ಅಸಮಾಧಾನದಿಂದ ಮಾತ ನಾಡಿಕೊಳ್ಳುತ್ತಿದ್ದರು. ಇದನ್ನು ಕೇಳಿದ ಯುಧಿಷ್ಠಿರನು ಅವರನ್ನು ನೋಡಿ "ಅಯ್ಯಾ, ಧೃತರಾಷ್ಟ್ರರಾಜನು ನಮಗೆ ತಂದೆಯು, ಹಿರಿಯನು, ಗುರುವು ಮತ್ತು ಸ್ವಾಮಿಯು. ಆತನಾಜ್ಞೆಯಂತೆ ನಡೆಯುವುದು ನಮ್ಮ ಕರ್ತವ್ಯವು. ನೀವುಗಳು ಪರಮಸತ್ಯಶೀಲರಾಗಿ ನಮ್ಮ ವಿಷಯ ದಲ್ಲಿ ಇಟ್ಟಿರುವ ಪ್ರೀತಿ ವಿಶ್ವಾಸಗಳಿಗಾಗಿ ನಾವು ಕೃತಜ್ಞರಾಗಿರುವೆವು. ಸಮಯ ಬಂದಾಗ ನೀವು ನಮಗೆ ಸಹಾಯವನ್ನು ಮಾಡುವಿರೆಂದು ನಾವು ನಂಬಿದ್ದೇವೆ," ಎಂದು ಮೊದಲಾಗಿ ಹೇಳಲು, ಅವರು ಒಪ್ಪಿ ಪಾಂಡವರನ್ನು ಪೂಜಿಸಿ ಗೌರವದಿಂದ ಬೀಳ್ಕೊಟ್ಟರು.

ಪ್ರಜೆಗಳು ಹೊರಟು ಹೋದಮೇಲೆ, ವಿದುರನು ಪಾಂಡವರನ್ನು ಸಾಗಕಳುಹಿಸಲು ಅವರ ಜೊತೆಯಲ್ಲಿಯೇ ಮುಂದಕ್ಕೆ ಹೋದನು. ಈತನು ದುರ್ಯೋಧನನ ದುರಾಲೋಚನೆಗಳ ಮರ್ಮಗಳೆಲ್ಲವನ್ನೂ ಉಪಾಯದಿಂದ ತನ್ನವರ ಮೂಲಕ ತಿಳಿದುಕೊಂಡಿದ್ದ ಕಾರಣ, ಯುಧಿ ಷ್ಠಿರನಿಗೆ ಆ ವಿಚಾರಗಳನ್ನು ತಿಳಿಸಿ ಮುಂದೆಚ್ಚರಿಕೆಯನ್ನು ಕೊಡಲು

ಉದ್ದೇಶಿಸಿ, ತನಗೂ ಯುಧಿಷ್ಠಿರನಿಗೂ ಮಾತ್ರ ಪರಿಚಯವಿದ್ದ ಮ್ಲೇಚ್ಛ ಭಾಷೆಯಲ್ಲಿ ಕೆಲವು ಬುದ್ಧಿವಾದಗಳನ್ನು ಹೇಳಿದನು. ಮುಖ್ಯವಾಗಿ, ಶತ್ರುಗಳು ಲೋಹದ ಆಯುಧಗಳನ್ನಲ್ಲದೆ ಇತರ ಆಯುಧಗಳನ್ನು ಪ್ರಯೋಗಿಸಿ ನಮ್ಮನ್ನು ಕೊಲ್ಲಲು ಸಿದ್ಧರಾಗಿರುವರೆಂಬುದನ್ನರಿತ ಬುದ್ಧಿ ಶಾಲಿಯು, ಅಂತಹ ಅಪಾಯಗಳನ್ನು ತಪ್ಪಿಸಿಕೊಳ್ಳಲು ತಕ್ಕ ಉಪಾಯ ಗಳನ್ನು ಬಲ್ಲವನೇ ಆಗಿರುತ್ತಾನೆ. ಅದರಿಂದ ಅವನಿಗೆ ಯಾವ ಅಪಾ ಯವೂ ಆಗಲಾರದು, ಎಂಬುದಾಗಿ ಆರಂಭಿಸಿ ನಿಜಾಂಶಗಳೆಲ್ಲವನ್ನೂ ತಿಳಿಸಿ, ವಾರಣಾವತದ ಅರಮನೆಯು ಬೆಂಕಿಹತ್ತುವ ಸಾಮಗ್ರಿಗಳಿಂದ ರಚಿತವಾಗಿದೆಯೆಂತಲೂ, ಅದರಿಂದ ತಪ್ಪಿಸಿಕೊಳ್ಳುವ ಉಪಾಯವೂ ಸಹ ಕ್ಷಿಪ್ರದಲ್ಲಿಯೇ ಆತನಿಗೆ ಗೊತ್ತಾಗುವುದೆಂತಲೂ ಹೇಳಿ ಹೊರಟು ಹೋದನು. ಹೀಗೆ ಪಾಂಡವರೂ ಕುಂತಿಯೂ ಫಾಲ್ಗುಣ ಶುದ್ಧ ಅಷ್ಟಮೀ ರೋಹಿಣೀ ನಕ್ಷತ್ರದಲ್ಲಿ ಹಸ್ತಿನಾವತಿಯನ್ನು ಬಿಟ್ಟು ವಾರ ಣಾವತಕ್ಕೆ ಪ್ರಯಾಣಮಾಡಿದರು.

## ಲಾಕ್ಷಾಗೃಹ ದಹನ

ಪಾಂಡವರು ಬರುವರೆಂಬ ವಾರ್ತೆಯನ್ನು ತಿಳಿದು ವಾರಣಾವತದ ಪ್ರಜೆಗಳು ಅತ್ಯಾನಂದದಿಂದ ಅವರಿಗರ್ಪಿಸಲು ರಾಜಾರ್ಹವಾದ ಅನೇಕ ವಸ್ತುಗಳೊಡನೆ ಊರ ಮುಂದಕ್ಕೆ ಬಂದು ಜಯಘೋಷಗಳಿಂದ ಅವರನ್ನು ಎದುರುಗೊಂಡು ಕಾಣಿಕೆಗಳನ್ನೊಪ್ಪಿಸಿ ನಮಸ್ಕರಿಸಿದರು. ಮಹಾತೇಜಸ್ವಿಯಾದ ಯುಧಿಷ್ಠಿರನು ಆ ನಗರದ ಶ್ರೀಮಂತರಿಂದಲೂ, ಅಧಿಕಾರಿಗಳಿಂದಲೂ ಪರಿವೃತನಾಗಿ ದೇವತೆಗಳಿಂದೊಡಗೂಡಿದ ದೇವೇಂದ್ರನಂತೆ, ದಿವ್ಯಾಲಂಕಾರಗಳಿಂದ ಶೋಭಿತವಾಗಿದ್ದ ಆ ನಗರ ವನ್ನು ಪ್ರವೇಶಿಸಿದನು. ಪಾಂಡವರು ಬ್ರಾಹ್ಮಣರ ಆಶೀರ್ವಾದ ಘೋಷ ಗಳಿಂದ ಉಚಿತ ಮರ್ಯಾದೆಯ ಮೆರವಣಿಗೆಯಲ್ಲಿ, ಎಲ್ಲ ವೀಧಿಗಳನ್ನೂ ಅಲ್ಲಿನ ಮುಖಂಡರುಗಳನ್ನೂ ನೋಡಿಕೊಂಡು ತಮ್ಮ ಪೂರ್ವದ ಅರಮನೆಗೆ ಬಂದು ಇಳಿದರು. ಅಲ್ಲಿ ಪುರೋಚನನು ಅವರೆಲ್ಲರಿಗೂ ಅತ್ಯುತ್ತಮವಾದ ಔತಣವನ್ನು ಮಾಡಿಸಿ, ರಾಜಾರ್ಹವಾದ ಮಂಚ

ಗಳನ್ನೂ, ಆಸನಗಳನ್ನೂ, ಹಾಸಿಗೆ ಹೊದಿಕೆಗಳನ್ನೂ ಏರ್ಪಡಿಸಿ ಬಹಳ ವಾಗಿ ಸೇವೋಪಚಾರಗಳನ್ನು ನಡೆಯಿಸಿದನು. ಅನಂತರ, ಅವರೆಲ್ಲರಿಗೂ ನೂತನವಾದ ಮತ್ತು ರಾಜಯೋಗ್ಯವಾದ ಬೆಲೆಯುಳ್ಳ ಹೊಸ ಉಡುಪು ಗಳನ್ನು ತರಿಸಿಕೊಟ್ಟು, ಆ ಅರಮನೆಯಲ್ಲಿಯೇ ತಕ್ಕ ಉಪಚಾರಗಳಿಂದ ಇಟ್ಟುಕೊಂಡು ಅವರ ಸೇವೆಮಾಡಿಕೊಂಡಿದ್ದನು. ಅವರು ಹತ್ತು ದಿನಗಳು ಅಲ್ಲಿ ವಾಸಮಾಡಿದನಂತರ, ಪುರೋಚನನು ತಾನು ನೂತನ ವಾಗಿ ಕಟ್ಟಿಸಿ ಮುಗಿಸಿದ್ದ ಅರಮನೆಯ ವಿಷಯವಾಗಿ, ಯುಧಿಷ್ಠಿ ರಾದಿಗಳೊಡನೆ, ಬಹಳವಾಗಿ ಹೇಳಿ ಶ್ಲಾಘನೆಮಾಡಿ, ಅದರಲ್ಲಿ ವಾಸಿಸು ವುದಕ್ಕಾಗಿ ಅವರೆಲ್ಲರನ್ನೂ ಅಲ್ಲಿಗೆ ಕರೆದುಕೊಂಡು ಹೋದನು. ಯುಧಿಷ್ಠಿರನು ತಮ್ಮಂದಿರೊಡನೆ ಆ ಅರಮನೆಯೆಲ್ಲವನ್ನೂ ಚನ್ನಾಗಿ ಪರಿಶೀಲಿಸಿ ನೋಡಿ, ಅಲ್ಲಿನ ಕೊಬ್ಬು ತುಪ್ಪ ಅರಗುಗಳು ಮಿಶ್ರವಾದ ವಾಸನೆಯಿಂದ ವಿದುರನು ತನಗೆ ಹೇಳಿದಂತೆ ಇದು ಉರಿಯುವ ವಸ್ತು ಗಳಿಂದಲೇ ತನ್ನ ನಾಶಕ್ಕಾಗಿ ಕಟ್ಟಲ್ಪಟ್ಟಿದೆಂದು ನಿರ್ಧರಿಸಿಕೊಂಡನು. ಅನಂತರ ಭೀಮನೊಡನೆ ಗುಟ್ಟಾಗಿ ಆ ಅರಗಿನ ಮನೆಯ ವಿಚಾರವನ್ನೂ, ವಿದುರನು ಇದರ ರಹಸ್ಯವನ್ನು ಮೊದಲೇ ತನಗೆ ಹೇಳಿದ್ದ ವಿವರಗಳನ್ನೂ ತಿಳಿಸಲು, ಭೀಮಸೇನನು, ಅಲ್ಲಿವಾಸಿಸುವುದಕ್ಕೆ ಒಪ್ಪದೆ ತಾವು ಮೊದ ಲಿದ್ದ ಅರಮನೆಗೇ ಹೋಗೋಣವೆಂದನು. ಆಗ ಯುಧಿಷ್ಠಿರನು "ಭೀಮಸೇನಾ, ನಾವುಗಳು ಅವನ ರಹಸ್ಯವನ್ನು ತಿಳಿದುಕೊಂಡೆವೆಂಬ ಸೂಚನೆಯು ಪುರೋಚನನಿಗೆ ತಿಳಿದರೆ ಅವನು ನಮ್ಮನ್ನು ಹೇಗಾದರೂ ಕ್ಷಿಪ್ರದಲ್ಲಿಯೇ ಉರಿಸಿಬಿಡಬಲ್ಲನು. ಅದರಿಂದ ಏನೂ ಅರಿಯದವರಂತೆ ನಾವು ಇದರಲ್ಲಿ ಬಹಳ ಎಚ್ಚರಿಕೆಯಿಂದಿದ್ದು, ಉಪಾಯವಾಗಿ ತಪ್ಪಿಸಿ ಕೊಂಡು ಹೋಗಿ ದೇಶಾಂತರಗಳಿಂದ ಜೀವಿಸೋಣ. ನಮ್ಮ ಕೊಟಡಿ ಯಿಂದ ಹೊರಕ್ಕೆ ಈ ರಾತ್ರಿಯೇ ಗುಟ್ಟಾಗಿ ಒಂದು ಸುರಂಗವನ್ನು ಮಾಡಿಸಿ ಅದರ ಮೂಲಕ ತಪ್ಪಿಸಿಕೊಂಡು ಹೋಗೋಣ," ಎಂದು ಹೇಳುತ್ತಿರುವಷ್ಟರಲ್ಲಿಯೇ, ವಿದುರನ ಕಡೆಯಿಂದ ಒಬ್ಬ ಸುರಂಗ ರಚನಾ ಪ್ರವೀಣನಾದ ಅವನ ಸ್ನೇಹಿತನು ಬಂದು ಗುಟ್ಟಾಗಿ ಧರ್ಮರಾಜನೊಡನೆ ತನ್ನ ವೃತ್ತಾಂತವನ್ನು ತಿಳಿಸಿ, ಯುಧಿಷ್ಠಿರನ ಇಷ್ಟದಂತೆ, ಪುರೋಚ ನನಿಗೆ ಗೋಚರವೇ ಇಲ್ಲದೆ, ಆ ಮನೆಯಿಂದ ಹೊರಗೆ ಹೊರಟು

ಹೋಗಲು ಅನುಕೂಲವಾಗಿ ಒಂದು ಸುರಂಗದ ಮಾರ್ಗವನ್ನು ರಚಿಸಿ, ಪುರೋಚನನಿಗೆ ಸಂದೇಹ ಬಾರದಂತೆ ಅದನ್ನು ಬಾಗಿಲುಗಳಿಂದ ಮುಚ್ಚಿ, ನೆಲದಂತೆಯೇ ಮಾಡಿಬಿಟ್ಟನು. ಪಾಂಡವರು ಹಗಲೂ ರಾತ್ರಿಯೂ ತಮಗೆ ಯಾವ ಕ್ಷಣದಲ್ಲಿ ಏನು ಅಪಾಯವು ಬಂದೀತೋ ಎಂಬ ಎಚ್ಚರಿಕೆ ಯಿಂದ ಸದಾ ಆಯುಧ ಸಹಿತರಾಗಿ ಬಹಳ ಜಾಗರೂಕತೆಯಿಂದ ಆ ಮನೆಯಲ್ಲಿ ಒಂದು ವರ್ಷಕಾಲ ಪೂರ್ತಿಯಾಗಿ ವಾಸಮಾಡಿದರು. ಪುರೋಚನನು, ಪಾಂಡವರು ತಪ್ಪಿಸಿಕೊಂಡು ಹೋಗದಂತೆ, ಹೆಬ್ಬಾಗಿಲಿ ನಲ್ಲಿ ತನ್ನ ಕಡೆಯ ಕಾವಲನ್ನು ಇಟ್ಟೇ ಇದ್ದನು. ಇದೆಲ್ಲವೂ ಪಾಂಡ ವರಿಗೆ ತಿಳಿದಿದ್ದರೂ, ಅವರು ಪುರೋಚನನಿಗೆ ಸ್ವಲ್ಪವೂ ಸಂದೇಹ ಬಾರ ದಂತೆ ಅವನಲ್ಲಿ ವಿಶೇಷ ವಿಶ್ವಾಸವನ್ನೂ ನಂಬಿಕೆಯನ್ನೂ ನಟಿಸುತ್ತಲೂ, ಅಂತರ್ಯದಲ್ಲಿ ತಮ್ಮ ಮುಂದಿನ ಆಲೋಚನೆಗಳನ್ನು ಮಾಡಿಕೊಳ್ಳು ತ್ತಲೂ ಸಂತೋಷದಿಂದಿದ್ದರು. ಇದನ್ನು ನೋಡಿ ಪುರೋಚನನಿಗೆ ಬಹಳ ಸಂತೋಷವಾಯಿತು. ಯುಧಿಷ್ಠಿರನು ತಮ್ಮಂದಿರನ್ನು ಕರೆದು ತಾವಿನ್ನು ಅಲ್ಲಿಂದ ತಪ್ಪಿಸಿಕೊಂಡು ಹೊರಡಬೇಕೆಂದು, ತಕ್ಕಂತೆ ಆಲೋ ಚನೆ ಮಾಡಿ, ತೀರ್ಮಾನಿಸಿಕೊಂಡನು.

ಹೀಗಿರಲು ಕೃಷ್ಣಚತುರ್ದಶಿಯ ದಿನ ಕುಂತೀದೇವಿಯು ಆ ನಗರದ ಬ್ರಾಹ್ಮಣರಿಗೂ ಸುವಾಸಿನಿಯರಿಗೂ ಭೋಜನಕ್ಕೆ ಬರುವಂತೆ ಆಹ್ವಾನವನ್ನು ಕೊಟ್ಟು, ದೇವತಾರಾಧನೆಯೊಂದನ್ನು ಅತಿವಿಜೃಂಭಣೆ ಯಿಂದ ನಡೆಯಿಸಿ, ಅತಿಥಿ ಅಭ್ಯಾಗತರುಗಳಿಗೆ ಆನಂದವಾಗುವಂತೆ ದೊಡ್ಡ ಸಂತರ್ಪಣೆಯನ್ನು ಮಾಡಿಸಿದಳು. ಪುರೋಚನನು, ಪುತ್ರಸಹಿತಳಾಗಿ ಉತ್ಸವವನ್ನು ನೋಡಲು ಬಂದಿದ್ದ ಒಬ್ಬ ವ್ಯಾಧಸ್ತ್ರೀಯ ಸಂಗಡ ಅನೇಕ ಫಲಮೂಲಾದಿಗಳನ್ನು, ಕುಂತೀದೇವಿಯ ವ್ರತಾರಾಧನೆಗಾಗಿ, ಕೊಟ್ಟು ಕಳುಹಿಸಿದನು. ಅವುಗಳನ್ನು ಸ್ವೀಕರಿಸಿ, ಅವಳಿಗೂ ಅವಳ ಐವರು ಮಕ್ಕಳಿಗೂ ಕುಂತಿಯು ತೃಪ್ತಿಕರವಾಗಿ ಭೋಜನ ಮಾಡಿಸಿ ಕಳುಹಿಸಿದಳು. ಆ ರಾತ್ರಿ ಆ ವ್ಯಾಧಸ್ತ್ರೀಯು ನಗರದ ದೇವರ ಉತ್ಸವವನ್ನು ನೋಡಲು ಹೋಗಿ ಯಥೇಚ್ಛವಾಗಿ ಮದ್ಯಪಾನ ಮಾಡಿ, ಮಕ್ಕಳೊಂದಿಗೆ ಬಂದು ಈ ಲಾಕ್ಷಾಗೃಹದ ಒಂದು ಭಾಗದಲ್ಲಿ ಮಲಗಿ ಸತ್ತವಳಂತೆ ನಿದ್ದೆಹೋದಳು. ಪುರೋಚನನೂ ಅಲ್ಲಿಯೇ ತನ್ನ ಕೊಟಡಿ

ಯಲ್ಲಿ ಮಲಗಿದ್ದನು. ಹೀಗೆ ಎಲ್ಲರೂ ನಿದ್ದೆಮಾಡುತ್ತಿದ್ದ ಸಮಯದಲ್ಲಿ ಭೀಮಸೇನನು ಎದ್ದು ಮೊಟ್ಟಮೊದಲು ಪುರೋಚನನ ಕೊಟಡಿಗೂ ಅನಂತರ ಆ ಲಾಕ್ಷಾಗೃಹದ ಬಾಗಿಲಿಗೂ ಬೆಂಕಿಯನ್ನು ತಗಿಲಿಸಿದುದಲ್ಲದೆ ಆ ಮನೆಯ ಇನ್ನೂ ಅನೇಕ ಸ್ಥಳಗಳಿಗೆ ಉರಿಯನ್ನಿಟ್ಟನು. ಅನಂತರ ಆ ಪಂಚಪಾಂಡವರೂ ಕುಂತೀದೇವಿಯೊಡನೆ, ವಿದುರನ ಮಿತ್ರನು ರಚಿಸಿದ್ದ ಸುರಂಗವನ್ನು ಹೊಕ್ಕು ತಲೆ ತಪ್ಪಿಸಿಕೊಂಡು ಹೊರಟುಹೋದರು. ಆಗ ವಿಶೇಷವಾದ ಬಿರುಗಾಳಿ ಬೀಸಿದ್ದರಿಂದ ಉರಿಯು ಆ ಅರಮನೆಯ ಎಲ್ಲಾ ಕಡೆಗಳಿಗೂ ವೇಗವಾಗಿ ವ್ಯಾಪಿಸಿ ಮಂದಿರವೆಲ್ಲವೂ ಅದ್ಭುತವಾಗಿ ಉರಿಯಲಾರಂಭಿಸಿತು. ಈ ಉರಿಯ ಛಟಚ್ಛಟಾ ಶಬ್ದಗಳೂ, ಜ್ವಾಲೆಗಳ ಭಯಂಕರ ಘೋಷವೂ, ಅದರಿಂದುಂಟಾದ ಉಷ್ಣತೆಯೂ ನಗರದ ಜನರೆಲ್ಲರಿಗೂ ಎಚ್ಚರವನ್ನುಂಟುಮಾಡಿತು. ಅವರೆಲ್ಲರೂ ಎದ್ದು ಬಂದು, ಅರಮನೆಯು ಅಗ್ನಿಗಾಹುತಿಯಾದುದನ್ನು ನೋಡಿ, ತಮ್ಮ ತಮ್ಮಲ್ಲಿ, "ಅಯ್ಯೋ! ಆ ಅಯೋಗ್ಯ ಪುರೋಚನನು ದುಷ್ಟ ದುರ್ಯೋಧನನಿಂದ ಪ್ರೇರಿತನಾಗಿ, ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ಈ ಅರಮನೆಯನ್ನು ಕಟ್ಟಿಸಿದನಲ್ಲಾ! ಧೃತರಾಷ್ಟ್ರನು ತನ್ನ ಮಕ್ಕಳಲ್ಲಿಯ ಪಕ್ಷಪಾತದಿಂದ ಸತ್ಯವಂತರಾದ ಪಾಂಡವರನ್ನು ತನ್ನ ಶತ್ರುಗಳೆಂದೆಣಿಸಿ ಹೀಗೆ ಸುಡಿಸಿದನಲ್ಲಾ! ಎಂತಹ ಅನ್ಯಾಯವಿದು!" ಎಂದು ವಿಧ ವಿಧವಾಗಿ ಮಾತನಾಡಿಕೊಳ್ಳುತ್ತ ಪಾಂಡವರು ನಾಶವಾದರೆಂದು ಬಹಳ ದುಃಖಪಟ್ಟರು. ಆದರೆ ಪುರೋಚನನೇ ಆ ಉರಿಗೆ ಸಿಕ್ಕಿ ಭಸ್ಮವಾಗಿ ಹೋಗಿದ್ದನು.

ಇತ್ತಲಾ ಪಾಂಡವರು ದುಃಖಿತಳಾಗಿದ್ದ ಕುಂತೀದೇವಿಯೊಡಗೂಡಿ ಸುರಂಗದಿಂದ ಹೊರಗೆ ಬಂದು ಯಾರೂ ಕಾಣದಂತೆ ವೇಗವಾಗಿ ಓಡಿಹೋದರು. ಅವರು ಶಮಗೆ ರಾತ್ರಿ ನಿದ್ರೆಯಿಲ್ಲದಿದ್ದುದರಿಂದಲೂ, ದುರ್ಯೋಧನನ ಕಡೆಯವರು ತಮ್ಮನ್ನು ಕಂಡಾರೆಂಬ ಭಯದಿಂದಲೂ ಸಹ, ಕುಂತೀದೇವಿಯನ್ನು ಕರೆದುಕೊಂಡು ವೇಗವಾಗಿ ಹೋಗಲಾರದೆ ಹೋದರು. ಅದರಿಂಪ ಅವರಲ್ಲಿ ಅದ್ಭುತ ಬಲಶಾಲಿಯಾದ ಭೀಮಸೇನನು, ಕುಂತೀದೇವಿಯನ್ನು ತನ್ನ ಭುಜದ ಮೇಲೆ ಕುಳ್ಳಿರಿಸಿಕೊಂಡು, ನಕುಲ ಸಹದೇವರನ್ನು ಎರಡು ಕಂಕುಳುಗಳಲ್ಲಿಯೂ, ಧರ್ಮಾರ್ಜುನ

ರನ್ನು ಎರಡು ಬಾಹುಗಳಿಂದಲೂ ಎತ್ತಿಕೊಂಡು ಹೊರಟು, ಮಾರ್ಗದಲ್ಲಿದ್ದ ಮರ ಗಿಡಗಳ ಮೇಲೆಯೇ ನುಗ್ಗಿ, ಅವುಗಳನ್ನು ನುಚ್ಚು ನುರಿ ಮಾಡುತ್ತ ಅತಿವೇಗವಾಗಿ ಹೋಗಿ ಒಂದು ಅರಣ್ಯವನ್ನು ಸೇರಿದನು. ಅನಂತರ ಎಲ್ಲರೂ ಆ ಅರಣ್ಯದಲ್ಲಿ ಹರಿಯುತ್ತಿದ್ದ ಗಂಗಾ ಪ್ರವಾಹವನ್ನು ದಾಟಲು ಹೋಗುತ್ತಿರುವಲ್ಲಿ, ಅಲ್ಲಿಗೆ ವಿದುರನಿಂದ ಗುಟ್ಟಾಗಿ ಕಳುಹಿಸಲ್ಪಟ್ಟಿದ್ದ ಒಬ್ಬ ಪುರುಷನು ಬಂದು, ತನ್ನ ವೃತ್ತಾಂತವನ್ನು ಪಾಂಡವರಿಗೆ ತಿಳಿಸಿ, ವಿದುರನಪ್ಪಣೆಯಂತೆ ಅವರನ್ನು ತಾನು ತಂದಿದ್ದ ಭದ್ರವಾದ ದೋಣಿಯೊಂದರಲ್ಲಿ ಕುಳ್ಳಿರಿಸಿಕೊಂಡು ಗಂಗಾನದಿಯನ್ನು ದಾಟಿಸಿ ಆ ಕಡೆಯ ದಡಕ್ಕೆ ಬಿಟ್ಟನು. ತರುವಾಯ, ಆತನೂ ಪಾಂಡವರ ಶ್ರೇಯಸ್ಸನ್ನು ಬಯಸಿ, ವಿದುರನ ಆಶೀರ್ವಾದಗಳನ್ನು ತಿಳಿಸಿ ಹಸ್ತಿನಾವತಿಗೆ ಹಿಂದಿರುಗಿದನು.

ಇತ್ತಲಾ ವಾರಣಾವತದಲ್ಲಿ ಅರಮನೆಯು ಉರಿದು ಬಿದ್ದಿದ್ದುದನ್ನು ನೋಡಿ ಜನರೆಲ್ಲರೂ ಪರಮಾಶ್ಚರ್ಯ ಪಟ್ಟು, ವ್ಯಸನದಿಂದ ತಮ್ಮತಮ್ಮಲ್ಲಿ "ದುಷ್ಟ ದುರ್ಯೋಧನನು ತನ್ನ ತಂದೆಯ ಒಪ್ಪಿಗೆಯಿಂದಲೇ ಪಾಂಡವರನ್ನು ಈ ಅರಮನೆಯಲ್ಲಿ ಸುಟ್ಟುಬಿಟ್ಟಿರಬೇಕು," ಎಂದು ಮಾತನಾಡಿಕೊಂಡುದಲ್ಲದೆ, ಆ ಬೆಂಕಿಯೆಲ್ಲವನ್ನೂ ಆರಿಸಿ, ಪಾಂಡವರ ಕಳೇಬರಗಳನ್ನು ಹುಡುಕಿಸಿದರು. ಅಲ್ಲಿ ವ್ಯಾಧಸ್ತ್ರೀಯೂ ಮತ್ತು ಅವಳ ಐವರು ಮಕ್ಕಳೂ ಉರಿದು ಬಿದ್ದಿದ್ದುದರಿಂದ ಅವರಾರು ಮಂದಿಯೇ ಕುಂತಿ ಮತ್ತು ಪಂಚಪಾಂಡವರೆಂದು ತರ್ಕಿಸಿ, ಆ ಕೂಡಲೇ, ಪಂಚಪಾಂಡವರೂ ಕುಂತೀ ದೇವಿಯೂ, ಪುರೋಚನನೂ ಸಹ ಅರಗಿನ ಮನೆಯಲ್ಲಿ ಬೆಂದು ಹೋದರೆಂಬ ದುಃಖವಾರ್ತೆಯನ್ನು ಧೃತರಾಷ್ಟ್ರನಿಗೆ ಹೇಳಿ ಕಳುಹಿಸಿದರು.

ಈ ಕಠೋರ ವೃತ್ತಾಂತವನ್ನು ಕೇಳಿದ ಧೃತರಾಷ್ಟ್ರನು ಬಹಳ ದುಃಖಪಟ್ಟು, ಪಾಂಡವರಿಗೂ ಕುಂತೀದೇವಿಗೂ ಅಂತ್ಯಕರ್ಮಗಳನ್ನು ಮಾಡಿಸಿ, ಬಂಧುಗಳೊಡಗೂಡಿ ಅವರಿಗೆ ತರ್ಪಣಗಳನ್ನೂ ಮಾಡಿಬಿಟ್ಟನು. ಬಂಧುಗಳೂ ಪ್ರಜೆಗಳೂ ಬಹಳವಾಗಿ ದುಃಖಪಟ್ಟರು. ಆದರೆ ಗುಟ್ಟನ್ನು ಅರಿತಿದ್ದ ವಿದುರನು ಮಾತ್ರ ಅವರಷ್ಟು ವ್ಯಥೆ ಪಡಲಿಲ್ಲ. ಜನನ ಮರಣಗಳು ವಿಧಿಯ ನಿಯಮದಂತೆ ನಡೆಯುವುವಾದುದರಿಂದ, ಅವುಗಳನ್ನು ಮನುಷ್ಯನು ಮನಸ್ಸಿಗೆ ಹಚ್ಚಿಕೊಳ್ಳಬಾರದೆಂಬ ವೇದಾಂತವನ್ನು ಅರಿತವ

ನಂತೆ ಸುಮ್ಮನಿದ್ದನು. ಅಲ್ಲದೆ, ಭೀಷ್ಮನು ಪಾಂಡವರ ಮರಣವಾರ್ತೆ ಯನ್ನು ಕೇಳಿ ವಿಶೇಷವಾಗಿ ದುಃಖಿಸುತ್ತಿದ್ದುದನ್ನು ಕಂಡು, ಆತನಿಗೆ ರಹಸ್ಯವಾಗಿ, ತಾನು ಮಾಡಿದ್ದ ಏರ್ಪಾಟುಗಳೆಲ್ಲವನ್ನೂ ತಿಳಿಸಿ ಆತನ ಮನಸ್ಸನ್ನು ಸಂತೋಷ ಪಡಿಸಿದನು.

ಇತ್ತಲಾ ಪಾಂಡವರು ಗಂಗಾನದಿಯನ್ನು ದಾಟಿ ಮುಂದಿನ ದಡ ವನ್ನು ಸೇರಿ, ದಕ್ಷಿಣಾಭಿಮುಖವಾಗಿ ಹೊರಟು, ನಕ್ಷತ್ರಗಳ ಬೆಳಕಿನಲ್ಲಿ ಮಾರ್ಗವನ್ನು ಹಿಡಿದು ಹೋದರು. ಹೀಗೆ ಬಹಳ ದೂರ ನಡೆದು ಒಂದು ನಟ್ಟಡವಿಗೆ ಬಂದು, ಅವರೆಲ್ಲರೂ ಆಯಾಸದಿಂದಲೂ ಬಾಯಾರಿಕೆ ಯಿಂದಲೂ ಬಳಲಿಬಿದ್ದರು. ಆಗ ಯುಧಿಷ್ಠಿರನು ಭೀಮಸೇನನನ್ನು ಕರೆದು, "ತಮ್ಮಾ ಭೀಮಸೇನಾ, ಈ ನಡುರಾತ್ರಿಯಲ್ಲಿ ಈ ನಟ್ಟಡವಿಯಲ್ಲಿ ನಾವು ನಿಲ್ಲುವುದು ಹೇಗೆ? ಇಲ್ಲಿಯೇ ನಿಂತರೆ ಒಂದು ವೇಳೆ ಯಾರಿ ಗಾದರೂ ನಮ್ಮ ಗುರುತು ತಿಳಿದರೆ ಗತಿಯೇನು? ದಿಕ್ಕೇತೋರುವುದಿಲ್ಲ ವಲ್ಲಾ! ನಮ್ಮೆಲ್ಲರಲ್ಲಿ ನೀನೊಬ್ಬನೇ ವಿಶೇಷ ಬಲಶಾಲಿಯೂ ಮತ್ತು ನಮ್ಮಗಳನ್ನು ಈ ಕಷ್ಟದಿಂದ ಪಾರುಮಾಡಲು ಶಕ್ತನು. ಆದುದರಿಂದ ನೀನೇ ಪುನಃ ನಮ್ಮೆಲ್ಲರನ್ನೂ ಎತ್ತಿಕೊಂಡು ಹೊರಡು," ಎಂದನು. ಅದರಂತೆ ಭೀಮಸೇನನು ಮತ್ತೆ ಅವರೈವರನ್ನೂ ತನ್ನ ಭುಜಗಳ ಮೇಲೂ ತೋಳ್ಗಳ ಮೇಲೂ ಕಂಕುಳುಗಳಲ್ಲಿಯೂ ಕುಳ್ಳಿರಿಸಿಕೊಂಡು, ವಾಯುವೇಗದಿಂದ ಹೊರಟು, ಮೂರನೆಯ ದಿನ ಸಂಧ್ಯಾಕಾಲದವರೆಗೂ ನಡೆದು ಮತ್ತೊಂದು ಅರಣ್ಯಪ್ರದೇಶವನ್ನು ಸೇರಿದನು. ಈವರೆಗೆ ಅವರೆಲ್ಲರೂ ಹಸಿವು ಬಾಯಾರಿಕೆಗಳಿಂದಲೂ ನಿದ್ದೆಯಿಂದಲೂ ಬಳಲಿ ಬಿದ್ದರು. ಕುಂತೀದೇವಿಯು, "ಅಯ್ಯೋ! ದೇವರೇ! ಅಸಹಾಯ ಶೂರರಾದ ಐವರು ಪುತ್ರರು ನನಗಿದ್ದರೂ ನಾನು ಕುಡಿಯಲು ಒಂದು ಬೊಗಸೆಯಷ್ಟು ನೀರಿಲ್ಲದೆ ಸಾಯುವ ಹೊತ್ತು ಬಂತೇ?" ಎಂದು ಪದೇ ಪದೇ ಹಂಬಲಿಸಿದಳು. ಇದನ್ನು ನೋಡಿ ಭೀಮಸೇನನಿಗೆ ಬಹಳ ವ್ಯಥೆಯಾಯಿತು. ಆ ಕೂಡಲೇ ಹೊರಟು, ಬಹು ದೂರದಲ್ಲಿದ್ದ ಒಂದು ಸರೋವರವನ್ನು ಹುಡುಕಿಕೊಂಡು ಹೋಗಿ, ಅದರಲ್ಲಿ ಸ್ನಾನಮಾಡಿ ನೀರನ್ನು ಕುಡಿದು ತನ್ನ ಅಂಗವಸ್ತ್ರವನ್ನು ನೆನೆಯಿಸಿ, ತನ್ನ ತಾಯಿ ಮತ್ತು ಅಣ್ಣ ತಮ್ಮಂದಿರಿಗಾಗಿ ಜಲವನ್ನು ತೆಗೆದುಕೊಂಡು ಹಿಂದಿರು

ಗಿಡನು. ಈ ವರೆಗೆ ಯುಧಿಷ್ಠಿರಾದಿಗಳು ಪ್ರಜ್ಞೆಯಿಲ್ಲದೆ ನೆಲದ ಮೇಲೆ ಮಲಗಿ ನಿದ್ರಿಸುತ್ತಿರುವುದನ್ನು ನೋಡಿ, ಭೀಮಸೇನನು, ತನ್ನಲ್ಲಿ ತಾನು "ಅಯ್ಯೋ! ಧರ್ಮ ಪುರುಷ, ವಾಯುದೇವ, ದೇವೇಂದ್ರರುಗಳ ವರದಿಂದ ಜನಿಸಿದ ಅಸಹಾಯ ಶೂರರೂ ಆ ಪುತ್ರರನ್ನು ಪಡೆದ ಕುಂತೀದೇವಿಯೂ, ಅಶ್ವಿನೀದೇವತೆಗಳ ಅಂಶದಿಂದ ಜನಿಸಿದ ಈ ನನ್ನ ಸೋದರರೂ, ರಾಜ ಭೋಗಗಳಿಂದಿರದೆ, ಹೀಗೆ ಬಳಲಿ ಅಡವಿಯಲ್ಲಿ ನೆಲದ ಮೇಲೆ ನಿದ್ರಿಸು ತ್ತಿರುವುದನ್ನು ನೋಡುತ್ತಿರುವೆನಲ್ಲಾ! ನಮ್ಮದೆಂತಹ ದೌರ್ಭಾಗ್ಯ!" ಎಂದು ಮೊದಲಾಗಿ ಬಹಳ ವ್ಯಥೆಪಟ್ಟು, "ಅವರುಗಳು ಎದ್ದು ದಾಹ ವನ್ನು ಶಾಂತಿಮಾಡಿಕೊಳ್ಳಲಿ; ಆವರೆಗೂ ನಾನು ಅವರನ್ನು ಕಾದು ಕೊಂಡಿರುವೆನು," ಎಂಬುದಾಗಿ ತಾನು ಅಲ್ಲಿಯೇ ಎಚ್ಚರವಾಗಿ ಕುಳಿತಿದ್ದನು.

## ಅಧ್ಯಾಯ ೧೨

## ಹಿಡಿಂಬಾಸುರನ ವಧೆ

ಪಾಂಡವರು ಮಲಗಿದ್ದ ಸ್ಥಳಕ್ಕೆ ಸಮೀಪವಾಗಿ ಒಂದು ಪ್ರದೇಶದಲ್ಲಿ **ಹಿಡಿಂಬ**ನೆಂಬ ಒಬ್ಬ ಭಯಂಕರ ರಾಕ್ಷಸನು ವಾಸವಾಗಿದ್ದನು. ಅವನು ಕಾಲಮೇಘದಂತೆ ಕಪ್ಪು ದೇಹವುಳ್ಳವನಾಗಿ ಕೆಂಪಗಿರುವ ಕೂದಲು, ಗಡ್ಡ ಮೀಸೆಗಳಿಂದ ಕೂಡಿ, ದೊಡ್ಡ ಹೊಟ್ಟೆ, ಸ್ಥೂಲ ಕಂಠ, ದೀರ್ಘ ಬಾಹುಗಳು, ದಪ್ಪವಾದ ಮೊಳಕಾಲುಗಳು ಇವುಗಳಿಂದ ಅತ್ಯಂತ ಭೀಕರಾಕಾರನಾಗಿ, ಒಂದು ಸಾಲವೃಕ್ಷದ ಮೇಲೆ ಕುಳಿತು ಸುತ್ತಲೂ ನೋಡುತ್ತಿದ್ದನು. ಹಸಿದು ಆಹಾರಾಪೇಕ್ಷಿಯಾಗಿದ್ದ ಈ ನರಮಾಂಸ ಭಕ್ಷಕನ ಕಣ್ಣಿಗೆ ದೂರದಲ್ಲಿ ಆರು ಮಂದಿ ಮಾನವರು ಕಂಡೊಡನೆಯೇ ಅವನಿಗೆ ಅತ್ಯಾನಂದವಾಗಿ, ನರವಾಸನೆಯಿಂದ ನಾಸಿಕಾ ರಂಧ್ರಗಳು ಅರಳಿದವು. ಆಗ ಸಂತೋಷದಿಂದ, ಬಳಿಯಲ್ಲಿದ್ದ ತಂಗಿ ಯಾದ ಹಿಡಿಂಬೆಯನ್ನು ನೋಡಿ, "ತಂಗೀ, ಹಿಡಿಂಬೇ, ನರಮಾಂಸಾ ಪೇಕ್ಷಿಯಾದ ನನಗೆ ಬಹಳ ದಿನಗಳಿಗೆ ಅದೃಷ್ಟವಶದಿಂದ ಈ ದಿನ ಪ್ರಿಯ ವಾದ ಭೋಜನವು ದೊರೆತಿರುವುದು. ಅಲ್ಲಿ ಕಾಣುವ ಮಾನವರನ್ನು ಭಕ್ಷಿಸಲಾತುರನಾಗಿರುವ ನನ್ನ ನಾಲಗೆಯು ನೀರ್ಗರೆಯುತ್ತಿರುವುದು. ನನ್ನ ಹಲ್ಲುಗಳು ಅವರ ಮಾಂಸವನ್ನಗಿಯಲಾತುರ ಪಡುತ್ತಿರುವುವು. ಅದರಿಂದ, ಯಥೇಚ್ಛವಾಗಿ ನರಮಾಂಸವನ್ನು ಭಕ್ಷಿಸಿ ಅವರ ಬಿಸಿ ರಕ್ತ

ವನ್ನು ಹೀರಲು ನಾನು ಅತ್ಯಾತುರನಾಗಿರುವೆನು. ನೀನೀಗಲೇ ಹೋಗಿ ಅವರು ಯಾರೆಂಬುದನ್ನು ತಿಳಿದು, ಅವರನ್ನು ವಧಿಸಿ ಹೆಣಗಳನ್ನು ಇಲ್ಲಿಗೆಳೆದುಕೊಂಡುಬಾ. ಅವರು ನನ್ನ ಅರಣ್ಯಕ್ಕೆ ಬಂದು ನಿದ್ರಿಸು ತ್ತಿರುವುದರಿಂದ ನಿನಗೆ ಮತ್ತೆ ಯಾರ ಭಯವೂ ಇಲ್ಲ. ಅವರ ಶರೀರ ಗಳನ್ನು ಹರಿಹರಿದು ಯಥೇಚ್ಛವಾಗಿ ನರಮಾಂಸವನ್ನು ತಿಂದು ತೇಗಿ ಕುಣಿದಾಡೋಣ" ಎಂದನು. ಹಿಡಿಂಬೆಯು ಒಪ್ಪಿ ಅಣ್ಣನ ಮಾತಿನಂತೆ ಪಾಂಡವರು ಮಲಗಿದ್ದ ಸ್ಥಳಕ್ಕೆ ಬಂದು, ಅಲ್ಲಿ ಕುಳಿತಿದ್ದ ಆಜಾನು ಬಾಹುವೂ ಅಪೂರ್ವ ಸುಂದರಾಕಾರನೂ ಆದ ಭೀಮಸೇನನನ್ನು ನೋಡಿ, ಆಶ್ಚರ್ಯ ಪಟ್ಟು ತನ್ನಲ್ಲಿ ತಾನು, "ಆಹಾ! ಎಂತಹ ಸುಂದರಾಂಗನಿವನು! ಇವನ ಶರೀರ ಚ್ಛಾಯೆಯು ಪುಟವಿಕ್ಕಿದ ಸುವರ್ಣವನ್ನು ಮೀರಿರುವುದು. ತೇಜಸ್ಸು ಅಸಾಧಾರಣವಾಗಿರುವುದು. ಇವನ ಕಾಯಪುಷ್ಟಿಯನ್ನೂ ದೃಷ್ಟಿಯನ್ನೂ ನೋಡಿದರೆ, ಇವನು ನನಗೆ ಪತಿಯಾಗಲು ಅರ್ಹನಾಗಿರು ವನು," ಎಂಬುದಾಗಿ ಆಲೋಚಿಸಿ ಕಾಮಪಾಶಕ್ಕೆ ವಶಳಾದಳು. ಅನಂತರ, ಅವಳು, ತನ್ನಲ್ಲಿ ತಾನು, "ಲೋಕದಲ್ಲಿ ಸ್ತ್ರೀಗೆ ಅಣ್ಣನ ಮೇಲಣ ಪ್ರೀತಿಗಿಂತಲೂ ಗಂಡನ ಮೇಲಣ ಪ್ರೇಮವೇ ಹೆಚ್ಚು. ಈಗ ನಾನಿವನನ್ನು ಕೊಂದರೆ, ಇವನ ಮಾಂಸವನ್ನು ಭಕ್ಷಿಸುವುದರಿಂದ ನಮ್ಮ ಅಣ್ಣನೊಡನೆ ನನಗೆ ಒಂದು ಕ್ಷಣಿಕವಾದ ಆನಂದ ವುಂಟಾಗಬಹುದು. ನಾನಿವನನ್ನು ಕೊಲ್ಲದೆ ನನ್ನ ಗಂಡನನ್ನಾಗಿ ಮಾಡಿಕೊಳ್ಳುವುದಾದರೆ, ಇವನೊಡನೆ ನಾನು ಜೀವಾವಧಿಯ ಆನಂದವನ್ನು ಅನುಭವಿಸಬಹುದು. ಆದಕಾರಣ, ನಾನು ನಮ್ಮ ಅಣ್ಣನ ಆಜ್ಞೆಯನ್ನು ಪಾಲಿಸಲು ಸಾಧ್ಯವೇ ಇಲ್ಲ. ನನ್ನ ಇಷ್ಟದಂತೇ ನಡೆಯುವೆನು," ಎಂಬುದಾಗಿ ಆಲೋಚಿಸಿ ಕೊಂಡಳು. ಅನಂತರ ತನ್ನ ಕಾಮರೂಪಶಕ್ತಿಯಿಂದ ಅತ್ಯಂತ ಸುಂದರ ತರುಣಿಯ ರೂಪವನ್ನು ಧರಿಸಿ, ದಿವ್ಯವಸ್ತ್ರಾಭರಣ ಭೂಷಿತಳಾಗಿ, ನಾಚಿಕೆಯಿಂದ ಮುಗುಳ್ನಗೆನಗುತ್ತ ಭೀಮಸೇನನ ಬಳಿಗೆ ಬಂದು ನಿಂತು, "ಎಲೈ, ನರವರಾ, ನೀನು ಯಾರು? ಮತ್ತು ಎಲ್ಲಿಂದ ಬಂದೆ? ಇಲ್ಲಿ ಮಲಗಿರುವ ದೇವತೆಗಳಂತಿರುವ ಇವರು ಯಾರು? ಅಲ್ಲದೆ, ನಿಶ್ಚಿಂತೆ ಯಾಗಿ ಈ ಅರಣ್ಯದ ಮಧ್ಯದಲ್ಲಿ ಭಯವಿಲ್ಲದೆ ಮಲಗಿರುವ ಈ ಸೌಂದರ್ಯ ವತಿ ಯಾರು? ಇದು ರಾಕ್ಷಸಾವಾಸವಾದ ಅರಣ್ಯವೆಂಬುದು ನಿನಗೆ

ತಿಳಿಯದೇ ? ಇಲ್ಲಿ ಮಹಾ ಕಠೋರನಾದ ಹಿಡಿಂಬಾಸುರನೆಂಬ ರಾಕ್ಷಸನು ವಾಸಿಸುತ್ತಿರುವನು. ನಾನಾತನ ತಂಗಿಯು. ನಮ್ಮ ಅಣ್ಣನು ನಿಮ್ಮಗಳ ಮಾಂಸವನ್ನು ಭಕ್ಷಿಸಬೇಕೆಂಬ ದುರಾಶೆಯಿಂದ ನಿಮ್ಮಗಳನ್ನು ಕೊಂದು ತರುವಂತೆ ಹೇಳಿ ನನ್ನನ್ನಿಲ್ಲಿಗೆ ಕಳುಹಿಸಿರುವನು. ನಾನು, ಸ್ವರ್ಗದಿಂದಿಳಿದು ಬಂದಿರುವ ದೇವನಂತೆ ತೇಜಸ್ವಿಯಾಗಿ ಕಾಣುವ ನಿನ್ನನ್ನು ನೋಡಿ, ಮೋಹಪರವಶಳಾಗಿ, ನೀನಲ್ಲದೆ ನನಗೆ ಬೇರೆ ಪತಿಯಿಲ್ಲವೆಂದು ನಿಶ್ಚಯಿಸಿಕೊಂಡು ನಿನ್ನ ಸನ್ನಿಧಿಗೆ ಬಂದಿರುವೆನು. ಕಾಮಬಾಣಾಹತಳಾದ ನನ್ನನ್ನು ಪರಿಗ್ರಹಿಸಿ ನೀನು ನನ್ನವನಾಗು. ನಾನು, ನರಮಾಂಸ ಭಕ್ಷಕನಾದ ಆ ನನ್ನ ಅಣ್ಣ ಹಿಡಿಂಬಾಸುರನ ಬಾಧೆಯಿಂದ ನಿನ್ನನ್ನು ಪಾರುಮಾಡುವೆನು. ನನಗೆ ಆಕಾಶಗಮನ ಶಕ್ತಿಯಿರುವುದು. ನನ್ನೊಡನೆ ನೀನು ಬೇಕಾದ ಕಡೆಗಳಲ್ಲಿ ಸಂಚರಿಸಿ ಆನಂದಪಡಬಹುದು. ನಾವಿಬ್ಬರೂ ಈ ಪರ್ವತ ಪ್ರಾಂತಗಳಲ್ಲಿ ವಿಹರಿಸಿಕೊಂಡು ಸಂತೋಷದಿಂದಿರೋಣ," ಎಂಬುದಾಗಿ ವಿನಯದಿಂದ ಹೇಳಿದಳು. ಅದಕ್ಕೆ ಭೀಮಸೇನನು, "ಎಲೌ, ರಾಕ್ಷಸೀ, ಈ ಭೀಮಸೇನನು ಕಾಮಾತುರತೆಯಿಂದ ಸ್ವಾರ್ಥಪರನಾಗಿ, ಮಲಗಿ ನಿದ್ರಿಸುತ್ತಿರುವ ತಾಯಿಯನ್ನೂ ಅಣ್ಣ ತಮ್ಮಂದಿರನ್ನೂ ರಾಕ್ಷಸನಿಗೆ ಆಹಾರವಾಗುವಂತೆ ಬಿಟ್ಟು ಬರತಕ್ಕವನೆಂದರಿತೆಯಾ ? ಯಾವನು ತಾನೇ ಅಂತಹ ಕಾರ್ಯ ಮಾಡುವನು ? ಸಾಕು," ಎಂದು ಬೇಸರದಿಂದ ನುಡಿದನು. ಆಗ ಹಿಡಿಂಬೆಯು, "ಹಾಗಾದರೆ, ಇವರೆಲ್ಲರನ್ನೂ ಎಚ್ಚರಗೊಳಿಸು. ನಿನ್ನ ಇಷ್ಟದಂತೆ ಇವರೆಲ್ಲರನ್ನೂ ಆ ನರಮಾಂಸ ಭಕ್ಷಕನಾದ ನನ್ನ ಅಣ್ಣನ ಕೈಗೆ ಸಿಕ್ಕದಂತೆ ಕಾಪಾಡುವೆನು," ಎಂದಳು. ಅದಕ್ಕೆ ಭೀಮಸೇನನು, "ಎಲೌ ರಾಕ್ಷಸೀ, ದುಷ್ಟನಾದ ನಿನ್ನ ಅಣ್ಣನಿಗೆ ಹೆದರಿ ನಾನು, ಸುಖವಾಗಿ ನಿದ್ರಿಸುತ್ತಿರುವ ನನ್ನ ತಾಯಿಯನ್ನೂ ಅಣ್ಣ ತಮ್ಮಂದಿರನ್ನೂ ಎಚ್ಚರಗೊಳಿಸಲಾರೆನು. ಎಲೌ ಭೀರುವೇ, ನನ್ನ ಮುಂದೆ ಯಾವ ರಾಕ್ಷಸನು ತಾನೇ ಬಂದು ನಿಂತು ಯುದ್ಧ ಮಾಡಬಲ್ಲನು ? ಸುಂದರೀ, ಗಂಧರ್ವ ಯಕ್ಷಾದಿಗಳೂ ಸಹ ಪರಾಕ್ರಮದಲ್ಲಿ ನನಗೆದುರು ಬಂದು ಗೆಲ್ಲಲಾರರು. ನಿನಗಿಷ್ಟವಾದರೆ ಇಲ್ಲಿರು, ಇಲ್ಲವಾದರೆ ಹೊರಟು ಹೋಗು. ನಿಮ್ಮ ಅಣ್ಣನನ್ನೇ ನನ್ನೆದುರಿಗೆ ಕಳುಹಿಸು. ವಿಚಾರಿಸಿಕೊಳ್ಳುವೆನು," ಎಂದು

ಹೇಳಿದನು. ಹೀಗೆ ಇವರಿಬ್ಬರ ಸಂಭಾಷಣೆಯಲ್ಲಿ ಕಾಲವಿಳಂಬ ವಾಯಿತು. ಇದರಿಂದ ಮರದ ಮೇಲಿದ್ದ ಹಿಡಿಂಬಾಸುರನಿಗೆ ಕೋಪವು ಮೇರೆ ಮೀರಿತು. ಆಗಲೇ ಅವನು ಕಣ್ಣುಗಳನ್ನು ಕೆಂಪಗೆ ಮಾಡಿ ಕೊಂಡು, ಕಟಕಟನೆ ಹಲ್ಲು ಕಡಿಯುತ್ತ ಆರ್ಭಟಿಸಿಕೊಂಡು ಮರದಿಂ ದಿಳಿದು ಬರುತ್ತಿರುವ ರಭಸವನ್ನು ನೋಡಿ ಹಿಡಿಂಬೆಗೆ ಬಹಳ ಭಯ ವಾಯಿತು. ಆಗ ಅವಳು ಭೀಮಸೇನನನ್ನು ನೋಡಿ, "ಸುಂದರಾಂಗಾ, ನಮ್ಮ ಅಣ್ಣನು ಕೆರಳಿ ಇತ್ತಲೇ ಬರುತ್ತಿರುವನು. ನಾನು ರಾಕ್ಷಸಿ ಯಾದುದರಿಂದ ನನಗೆ ಅದ್ಭುತವಾದ ಮಾಯಾಶಕ್ತಿಯಿರುವುದು. ಅದರಿಂದ ನಿಮ್ಮ ತಾಯಿಯನ್ನೂ ಅಣ್ಣ ತಮ್ಮಂದಿರನ್ನೂ ಎಬ್ಬಿಸು. ನಿಮ್ಮೆಲ್ಲರನ್ನೂ ನನ್ನ ಬೆನ್ನಿನ ಮೇಲೆ ಹೊತ್ತುಕೊಂಡು ಆಕಾಶಮಾರ್ಗ ದಲ್ಲಿ ಹಾರಿಹೋಗಿ ಸುರಕ್ಷಿತವಾದ ಸ್ಥಳವನ್ನು ಸೇರಿಸುವೆನು," ಎಂದು ಕೇಳಿಕೊಂಡಳು. ಭೀಮಸೇನನು ಅದಕ್ಕೆ ಸಂಮತಿಸದೆ, "ಎಲೌ, ನಾನಿಲ್ಲಿರುವವರೆಗೆ ಯಾವ ರಾಕ್ಷಸನು ತಾನೇ ಬಂದು ನಮ್ಮವರಿಗೆ ಕೇಡು ಮಾಡಬಲ್ಲನು? ನೋಡುತ್ತಿರು, ಆ ದುರಾತ್ಮನನ್ನು ನಿನ್ನ ಕಣ್ಣು ಮುಂದೆಯೇ ಕೊಂದಿಕ್ಕಿಬಿಡುವೆನು," ಎಂಬುದಾಗಿ ಹೇಳುತ್ತಿರು ವಷ್ಟರಲ್ಲಿ ಹಿಡಿಂಬಾಸುರನು ಕ್ರೋಧೋದ್ದೀಪಿತನಾಗಿ ವೀರಾವೇಶದಿಂದ ಆ ಸ್ಥಳಕ್ಕೆ ಬಂದು, ಸರ್ವಾಲಂಕಾರ ಭೂಷಿತೆಯಾಗಿ ಮಾನವ ಸುಂದ ರಿಯಂತೆ ಪ್ರಕಾಶಿಸುತ್ತಿದ್ದ ತನ್ನ ತಂಗಿ ಹಿಡಿಂಬೆಯನ್ನು ನೋಡಿ, ಅವಳು, ಕಾಮ ಬಾಣಾಹತಳಾಗಿರುವಳೆಂದರಿತು, ಮಿತಿಮೀರಿ ಆಗ್ರಹಗೊಂಡು, "ಛೀ! ಅಯೋಗ್ಯ ಹಿಡಿಂಬೇ! ಕಾಮಾತುರಳಾಗಿ ನಮ್ಮ ರಾಕ್ಷಸ ವಂಶದ ಗೌರವವನ್ನೇ ಕಳೆದು, ನನ್ನ ಕೋಪಕ್ಕೆ ಗುರಿಯಾಗುವೆಯೆಂಬ ಭೀತಿ ಗೌರವಗಳಿಲ್ಲದೆ, ಬುದ್ಧಿಗೆಟ್ಟು ಹೀಗೆ ನನ್ನ ಆಜ್ಞೆಯನ್ನು ನೆರವೇರಿ ಸದೆ ನಿಂತು ವಿಳಂಬಮಾಡಿದೆಯಾ? ನಿನ್ನನ್ನೂ, ನೀನು ಯಾರ ಹಿತಕ್ಕಾಗಿ ಹೀಗೆ ವಿಳಂಬ ಮಾಡಿದೆಯೋ ಅವರೆಲ್ಲರನ್ನೂ ಸಹ ಇಲ್ಲಿಯೇ ಬಲಿಯಿಕ್ಕಿ ಬಿಡುವೆನು," ಎಂದು ಕಟಕಟನೆ ಹಲ್ಲುಕಡಿಯುತ್ತ ಆರ್ಭಟಿಸಿ, ಹಿಡಿಂಬೆಯನ್ನು ಹಿಡಿದು ಕೊಲ್ಲಬೇಕೆಂದು ಅವಳ ಬಳಿಗೆ ಓಡಿಬಂದನು.

ಆಗ ಭೀಮಸೇನನು ಅವನನ್ನು ನೋಡಿ ಅವಹೇಳನದಿಂದ ನಕ್ಕು, "ಎಲವೋ ದುಷ್ಟರಾಕ್ಷಸಾ! ಸುಖವಾಗಿ ನಿದ್ರೆಮಾಡುತ್ತಿರುವ ಇವರನ್ನು

ಪಿಶಾಚದಂತೆ ಆರ್ಭಟಿಸಿ ಏತಕ್ಕೆ ಎಬ್ಬಿಸುವೆ? ಪಾಪ! ಈ ನಿನ್ನ ತಂಗಿಯು ನಿನ್ನಾಜ್ಞೆಯಂತೆಯೇ ಇಲ್ಲಿಗೆ ಬಂದವಳು. ನನ್ನನ್ನು ನೋಡಿ ಕಾಮಬಾಣಕ್ಕೆ ಸಿಕ್ಕಿರುವ ಆ ನಿರಪರಾಧಿನಿಯ ಮೇಲೆ ಏತಕ್ಕೆ ನಿನ್ನ ಕೋಪವನ್ನು ತೋರಿಸುವೆ? ನಾನು ಇಲ್ಲಿರುವಾಗ ನೀನು ಹೆಂಗಸಿನ ಮೇಲೆ ಕೈಮಾಡಿ ಕೊಲ್ಲಲು ಬಂದೆಯಾ? ನಿನ್ನನ್ನೀಗಲೇ ಹಿಡಿದು ಸಿಗಿದು ಕಾಕಗೃಧ್ರಾದಿಗಳಿಗೆ ಔತಣ ಮಾಡುವೆನು. ನಿನ್ನ ತಂಗಿಯ ಕಣ್ಣೆದುರಲ್ಲಿಯೇ, ಸಿಂಹವು ಆನೆಯನ್ನು ಹಿಡಿದೆಳೆಯುವಂತೆ ನಿನ್ನ ಈ ಪಿಶಾಚ ಶರೀರವನ್ನು ದರದರನೆ ಎಳೆದು ಬೀಸಾಡುವೆನು. ಅನಂತರ ಈ ವನವು ಜನಸಂಚಾರಕ್ಕೆ ನಿಷ್ಕಂಟಕವಾಗುವುದು," ಎಂದು ಹೇಳುತ್ತ ಬಂದು ಹಿಡಿಂಬನನ್ನು ಹಿಡಿದನು. ಉಭಯರಿಗೂ ಪ್ರಬಲವಾದ ಮಲ್ಲ ಯುದ್ಧವು ಆರಂಭವಾಯಿತು. ಭೀಮಸೇನನು ಹಿಡಿಂಬನನ್ನು ಬಲವಾಗಿ ಹಿಡಿದು ದರ ದರನೆ ಮೂವತ್ತೆರಡು ಅಡಿಗಳ ದೂರಕ್ಕೆ ಎಳೆದುಕೊಂಡು ಹೋಗಿ, ನಿದ್ರಾಸಕ್ತರಾಗಿದ್ದವರು ಏಳದಂತೆ ದೂರದಲ್ಲಿ ರಾಕ್ಷಸನೊಡನೆ ಮಲ್ಲಯುದ್ಧ ಮಾಡುತ್ತಿದ್ದನು. ಆದರೂ ಅವರಿಬ್ಬರ ಯುದ್ಧದ ಆರ್ಭಟವು ಕೇಳಿ ಧರ್ಮರಾಜಾದಿಗಳಿಗೆ ನಿದ್ದೆಯಿಂದ ಎಚ್ಚರವಾಯಿತು.

ಪಾಂಡವರೂ ಕುಂತೀದೇವಿಯ ಬಳಿಯಲ್ಲಿದ್ದ ಹಿಡಿಂಬೆಯ ಅತ್ಯಾಶ್ಚರ್ಯಕರವಾದ ಸೌಂದರ್ಯವನ್ನು ನೋಡಿ ವಿಸ್ಮಯ ಭರಿತರಾದರು. ಆಗ ಕುಂತೀದೇವಿಯು, ಅವಳನ್ನು ನೋಡಿ ನಯ ವಿನಯಗಳಿಂದ ಮೆಲ್ಲನೆ, "ಎಲೌ ದೇವತಾ ಸ್ತ್ರೀಯಂತೆ ಕಂಗೊಳಿಸುವ ಸುಂದರೀ, ನೀನು ಯಾರು? ಎಲ್ಲಿಂದ ಬಂದೆ? ಏತಕ್ಕಾಗಿ ಇಲ್ಲಿಗೆ ಬಂದಿರುವೆ? ನೀನು ಯಾರ ಕಡೆಯವಳು? ನೀನೇನು ಈ ವನದೇವತೆಯೋ ಅಥವಾ ಅಪ್ಸರೋಭಾಮಿನಿಯೋ? ದಯೆಯಿಟ್ಟು ಹೇಳು," ಎಂಬುದಾಗಿ ಕೇಳಿದಳು. ಅದಕ್ಕೆ ಹಿಡಿಂಬೆಯು ತನ್ನ ದಿಟವಾದ ವೃತ್ತಾಂತವೆಲ್ಲವನ್ನೂ ವಿವರವಾಗಿ ಹೇಳಿ, "ತಾಯೀ, ನಾನು ನಿನ್ನ ಮಗನಾದ ಭೀಮಸೇನನನ್ನು ಕಂಡು ಮೋಹಿತಳಾಗಿ, ಈ ಮಾಯಾ ರೂಪವನ್ನು ಧರಿಸಿ ಆತನೊಡನೆ ಮಾತನಾಡುತ್ತಿದ್ದೆನು. ನಾನು ಬೇಗನೆ ನಿಮ್ಮೆಲ್ಲರನ್ನೂ ಕೊಂದು ತನಗಾಹಾರವಾಗಿ ತರಲಿಲ್ಲವೆಂದು ನಮ್ಮಣ್ಣನಾದ ಹಿಡಿಂಬಾಸುರನು ಅತ್ಯಾಗ್ರಹಗೊಂಡು ಬಂದು ನನ್ನನ್ನು ಶಿಕ್ಷಿಸಬೇಕೆಂದೆಳೆಯುವಷ್ಟರಲ್ಲಿ,

ನಿನ್ನ ಮಹಾ ಬಲಶಾಲಿಯಾದ ಪುತ್ರನು ಆತನನ್ನು ಹಿಡಿದೆಳೆದುಕೊಂಡು ಹೋಗಿ ನನ್ನನ್ನು ರಕ್ಷಿಸಿದನು. ಅವರಿಬ್ಬರೂ, ಅದೋ ಅಲ್ಲಿ ಪ್ರಬಲವಾಗಿ ಮಲ್ಲಯುದ್ಧ ಮಾಡುತ್ತಿರುವರು," ಎಂದು ಹೇಳಿ ತೋರಿಸಿದಳು. ಇದನ್ನು ಕೇಳಿ ಯುಧಿಷ್ಠಿರನೂ ಅರ್ಜುನ ನಕುಲ ಸಹದೇವರೂ ಬೇಗನೆ ಎದ್ದು ಅಲ್ಲಿಗೆ ಹೋಗಿ ನೋಡಲು, ಭೀಮ ಹಿಡಿಂಬರಿಗೆ ಘೋರವಾದ ಮಲ್ಲಯುದ್ಧವೇ ನಡೆಯುತ್ತಿದ್ದಿತು. ಅರ್ಜುನನು ಭೀಮನಿಗೆ ಸಹಾಯ ಮಾಡುವುದಾಗಿ ಹೇಳಿದರೂ, ಭೀಮನು ಒಪ್ಪದೆ ರಾಕ್ಷಸನನ್ನು ಹಿಡಿದಪ್ಪಳಿಸಿ ಅವನೊಡನೆ ಯುದ್ಧಮಾಡುತ್ತಲೇ ಇದ್ದನು. ಆಗ ಪಾರ್ಥನು, "ಅಣ್ಣಾ, ಅರುಣೋದಯವಾಗುತ್ತಬಂತು. ಬೆಳಗಾಗುವುದರೊಳಗೆ ರೌದ್ರ ಮುಹೂರ್ತದಲ್ಲಿ ರಾಕ್ಷಸರಿಗೆ ಬಲವು ಅಧಿಕವಾಗುವುದು. ಅವನೊಡನೆ ನೀನು ಆಟವಾಡುತ್ತಿದ್ದರೆ, ಇನ್ನು ಅವನು ತನ್ನ ಮಾಯಾಶಕ್ತಿಯನ್ನು ಪ್ರಯೋಗಿಸಿ, ನಿನಗೆ ಮೋಸಮಾಡಲೂ ಬಹುದು. ಆದುದರಿಂದ ಅವನನ್ನು ಬೇಗನೆ ವಧಿಸು. ನೀನು ಆಯಾಸ ಪಟ್ಟಿದ್ದಲ್ಲಿ ವಿಶ್ರಮಿಸಿಕೋ, ನಾನೇ ಅವನನ್ನು ಮುಗಿಸಿಬಿಡುವೆನು," ಎಂದು ಹೇಳಿದನು. ಇದನ್ನು ಕೇಳಿ ಭೀಮಸೇನನ ರೋಷಾವೇಶವು ಇಮ್ಮಡಿಸಿ, ಅವನು ಆ ಹಿಡಿಂಬನನ್ನು ಹಿಡಿದು, ನೂರಾವೃತ್ತಿ ಗಿರಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ, "ಎಲವೋ ದುರಾತ್ಮ ಹಿಡಿಂಬಾ, ಇಂದಿಗೆ ಈ ವನದಲ್ಲಿದ್ದ ಜನಕಂಟಕವು ನಿವಾರಣೆಯಾಯಿತು," ಎಂದು ಹೇಳುತ್ತ ಅವನನ್ನು ವಧಿಸಿಬಿಟ್ಟನು. ಹಿಡಿಂಬನು ಮರಣಾವಸ್ಥೆಯಲ್ಲಿ ಮಾಡಿದ ಘೋರಾರ್ಭಟದ ಧ್ವನಿಯು ಅರಣ್ಯವೆಲ್ಲವನ್ನೂ ತುಂಬಿ ದಿಕ್ಕುಗಳು ಪ್ರತಿಧ್ವನಿಗೊಟ್ಟವು. ಇದನ್ನು ನೋಡಿ ಯುಧಿಷ್ಠಿರಾದಿಗಳು ಬಹಳ ಸಂತೋಷಪಟ್ಟು, ಭೀಮನ ಸಾಹಸವನ್ನು ಬಹಳವಾಗಿ ಕೊಂಡಾಡಿ ಅವನನ್ನು ಅಭಿನಂದಿಸಿದರು. ಆಗ ಅರ್ಜುನನು ಭೀಮಸೇನನನ್ನೂ ಯುಧಿಷ್ಠಿರಾದಿಗಳನ್ನೂ ನೋಡಿ, "ಪ್ರಿಯ ಸೋದರರೇ, ಇಲ್ಲಿಗೆ ಸಮೀಪದಲ್ಲಿಯೇ ಯಾವುದೋ ಪಟ್ಟಣವಿರುವಂತೆ ಕಾಣುವುದು. ಆದುದರಿಂದ ನಾವುಗಳು ದುರ್ಯೋಧನನ ಕಡೆಯವರಿಗೆ ಗೋಚರವಾಗದಂತೆ ಅಲ್ಲಿಗೆ ಹೋಗೋಣ," ಎಂದನು. ಅದಕ್ಕೆ ಅವರೆಲ್ಲರೂ ಸಂಮತಿಸಿ ಪ್ರಯಾಣ ಮಾಡಿದರು. ಅವರ ಹಿಂದೆಯೇ ಹಿಡಿಂಬೆಯೂ ಹೊರಟಳು.

## ಭೀಮಸೇನ ಹಿಡಿಂಬೆಯರ ಸಖ್ಯ

ಆಗ ಭೀಮಸೇನನು ಹಿಡಿಂಬೆಯನ್ನು ನೋಡಿ, "ಎಲೌ ರಾಕ್ಷಸೀ, ಶತ್ರುಗಳನ್ನು ಮಾಯಾ ತಂತ್ರಗಳಿಂದ ಮೋಸಗೊಳಿಸುವುದೇ ರಾಕ್ಷಸರ ಸ್ವಭಾವವು. ಅದರಿಂದ ನಿನ್ನನ್ನೂ ನಿನ್ನ ಅಣ್ಣನು ಹೋದ ಕಡೆಗೇ ಕಳುಹಿಸುವೆನು," ಎಂದನು. ಆಗ ಯುಧಿಷ್ಠಿರನು, ಭೀಮನನ್ನು ನೋಡಿ "ಭೀಮಸೇನಾ, ಎಷ್ಟು ಕೋಪಬಂದರೂ ಸ್ತ್ರೀವಧೆ ಮಾಡಬಾರದು. ನಮ್ಮನ್ನು ಕೊಲ್ಲುವ ದುರುದ್ದೇಶದಿಂದ ಬಂದ ಇವಳ ಅಣ್ಣನನ್ನು ನೀನು ಕೊಂದುದೇನೋ ಸರಿ! ಆದರೆ ಇವಳು ಅವನ ತಂಗಿಯು, ಸ್ತ್ರೀಯು, ಒಂದುವೇಳೆ ಇವಳು ಆಗ್ರಹಗೊಂಡರೂ ನಮ್ಮನ್ನೇನು ಮಾಡಬಲ್ಲಳು? ಅದರಿಂದ ಇವಳನ್ನು ವಧಿಸಬೇಡ," ಎಂದು ನಯವಾಗಿ ಹೇಳಿದನು. ಅದನ್ನು ಕೇಳಿ ಹಿಡಿಂಬೆಯು, ವಿನಯದಿಂದ ಯುಧಿಷ್ಠಿರನಿಗೂ ಕುಂತೀ ದೇವಿಗೂ ಕೈಮುಗಿದು, ಕುಂತಿಯನ್ನು ನೋಡಿ, "ತಾಯೀ, ನಾನು ನನ್ನ ಸ್ನೇಹಿತರನ್ನೂ ಬಂಧುಗಳನ್ನೂ, ರಾಕ್ಷಸ ವಂಶೀಯರನ್ನೂ ಬಿಟ್ಟು ನಿನ್ನ ಮಗನನ್ನು ಪತಿಯನ್ನಾಗಿ ವರಿಸಲು ಬಂದಿರುವೆನು. ಆತನಲ್ಲಿ ನೆಟ್ಟಿರುವ ನನ್ನ ಚಿತ್ತವನ್ನು ನಾನು ಬೇರೆಮಾಡಲಾರೆನು. ಆತನು ನನ್ನನ್ನು ತ್ಯಜಿಸುವುದಾದರೆ, ನಾನು ಜೀವಿಸಿರಲಾರೆನು. ನಾನು ನಿನ್ನಲ್ಲಿ ಅವಿವೇಕವಾಗಿ ನುಡಿದೆನೆಂದು ನೀನು ಭಾವಿಸಿದರೂ ನನಗೆ ಕೋಪವಿಲ್ಲ. ಹೇಗಾದರೂ ನಿನ್ನ ಮಗನಾದ ಆ ಮಹಾವೀರನು ನನ್ನನ್ನು ವರಿಸುವಂತೆ ನೀನು ಮಾಡಬೇಕಾಗಿ ನಿನ್ನನ್ನು ಅತ್ಯಂತ ವಿಧೇಯಳಾಗಿ ಬೇಡಿಕೊಳ್ಳು ವೆನು. ಅವನನ್ನು ನನ್ನ ಜೊತೆಯಲ್ಲಿ ಕರೆದುಕೊಂಡು ಹೋಗಲು ನನಗೆ ದಯವಿಟ್ಟು ಅನುಕೂಲ ಮಾಡಿಕೊಡಬೇಕು. ನಾನು ನನ್ನ ಇಚ್ಛಾನುಸಾರವಾಗಿ ಆತನೊಡನೆ ವಿಹರಿಸಿ ಮತ್ತೆ ಆತನನ್ನು ನಿಮ್ಮಗಳ ಬಳಿಗೇ ಕರೆತಂದು ಬಿಡುವೆನು. ಯಾವಾಗ ನೀವು ನನ್ನನ್ನು ಸ್ಮರಿ ಸುವಿರೋ ಆಗಲೇ ನಾನು ನಿಮ್ಮ ಬಳಿಗೆ ಬಂದು ನಿಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗಬೇಕೆಂದು ಹೇಳಿದರೆ ಅಲ್ಲಿಗೆ ಕರೆದುಕೊಂಡು ಹೋಗುವೆನು. ನಿಮಗೆ ಎಂತಹ ಅಪಾಯಗಳೊದಗಿದರೂ ಅವುಗಳಿಂದ ನಿಮ್ಮನ್ನು ಪಾರುಮಾಡುವೆನು. ನೀವು ಒಂದು ವೇಳೆ ಅತ್ಯಂತ ವೇಗ ವಾಗಿ ಎಲ್ಲಿಗಾದರೂ ಹೋಗಬೇಕಾದರೆ ನಿಮ್ಮೆಲ್ಲರನ್ನೂ ನನ್ನ ಬೆನ್ನಿನ

ಮೇಲೆ ಹೊತ್ತುಕೊಂಡು ಹಾರಿಹೋಗುವೆನು. ನನಗೆ ಭೀಮಸೇನನಲ್ಲಿ ಉಂಟಾಗಿರುವ ಪ್ರೇಮಮೋಹಗಳನ್ನು ಮಾತ್ರ ಬಿಡಲು ಸಾಧ್ಯವಿಲ್ಲ. ಆದರಿಂದ ಹೇಗಾದರೂ ಮಾಡಿ, ಆತನು ನನ್ನನ್ನು ಪತ್ನಿಯಾಗಿ ವರಿಸುವಂತೆ ನೀವು ದಯವಿಟ್ಟು ಏರ್ಪಡಿಸಿ ನನ್ನನ್ನು ಕಾಪಾಡಬೇಕು. ಹೀಗೆ ನೀವುಗಳು ಉದಾರ ಮನಸ್ಸಿನಿಂದ ನನಗೆ ಪ್ರಾಣದಾನಮಾಡಿ ಧರ್ಮವನ್ನು ಕಟ್ಟಿಕೊಳ್ಳಬೇಕು," ಎಂಬುದಾಗಿ ಬಹಳವಾಗಿ ಬೇಡಿಕೊಂಡಳು.

ಆಗ ಯುಧಿಷ್ಠಿರನಿಗೆ ಮನಸ್ಸು ಕರಗಿ, "ಎಲೌ, ಸುಂದರಾಂಗೀ, ಭೀಮಸೇನನು ತನ್ನ ಪ್ರಾತರಾಹ್ನಿಕ ಕ್ರಿಯೆಗಳನ್ನು ಮುಗಿಸಿಕೊಂಡು ಬರುವನು. ಆನಂತರ ನಿನ್ನನ್ನು ಅವನು ಪರಿಗ್ರಹಿಸಿ ನಿನ್ನೊಡನೆ ಸಂಧ್ಯಾಕಾಲದವರೆಗೂ ವಿಹರಿಸುವನು. ಸಾಯಂಕಾಲವಾಗುವುದರೊಳಗೆ ನೀನು ನಿನ್ನ ವಾಗ್ದಾನದಂತೆ ಅವನನ್ನು ಮತ್ತೆ ಹಿಂದಕ್ಕೆ ಕರೆತಂದುಬಿಡಬೇಕು. ಹೀಗೆ ನಿತ್ಯವೂ ನೀನು ಅವನೊಡನೆ ಹಗಲಲ್ಲಿ ವಿಹರಿಸಿ ರಾತ್ರಿಯಲ್ಲಿ ಅವನನ್ನು ಸುರಕ್ಷಿತವಾಗಿ ಕರೆತಂದು ನಮ್ಮ ಬಳಿ ಸೇರಿಸಬೇಕು," ಎಂದು ಹೇಳಿದನು. ಅದಕ್ಕೆ ಹಿಡಿಂಬೆಯು ಸಂತೋಷದಿಂದ ಸಮ್ಮತಿಸಲು, ಬಳಿಯಲ್ಲಿದ್ದ ಭೀಮಸೇನನು ಅವಳನ್ನು ಕುರಿತು, "ಎಲೌ! ರಾಕ್ಷಸೀ, ನೀನು ಪುತ್ರನನ್ನು ಪಡೆಯುವವರೆಗೂ ಮಾತ್ರವೇ ನಾನು ನಿನ್ನ ಇಷ್ಟದಂತೆ ನಿನ್ನವನಾಗಿರುವೆನು. ಈ ನಿಬಂಧನೆಗೆ ನೀನು ಒಪ್ಪುವೆಯೋ?" ಎಂದು ಕೇಳಿದನು. ಹಿಡಿಂಬೆಯು ಅದಕ್ಕೆ ಸಂತೋಷದಿಂದ ಒಪ್ಪಿ ಭೀಮಸೇನನನ್ನು ತನ್ನ ಬೆನ್ನಿನ ಮೇಲೆ ಹೊತ್ತುಕೊಂಡು ಆಕಾಶಮಾರ್ಗದಲ್ಲಿ ಹಾರಿಹೋದಳು.

ಹೀಗೆ ಹಿಡಿಂಬೆಯು ಅತ್ಯಂತ ಸೌಂದರ್ಯವತಿಯಾಗಿ ದಿವ್ಯ ವಸ್ತ್ರಾಭರಣಗಳನ್ನು ಧರಿಸಿ, ಭೀಮಸೇನನೊಡನೆ ಹೊರಟು, ಮನೋಹರವಾದ ಪ್ರಕೃತಿಸೌಂದರ್ಯವುಳ್ಳ ಅನೇಕ ಪರ್ವತಾಗ್ರಗಳಲ್ಲಿಯೂ ದೇವಯೋಗ್ಯವಾದ ಮನೋಹರ ಸ್ಥಳಗಳಲ್ಲಿಯೂ ಸಂಚರಿಸುತ್ತಲೂ, ಸಂದರ್ಭಾನುಸಾರವಾಗಿ ಅತ್ಯಂತ ಮಧುರವಾಗಿ ಗಾನಮಾಡುತ್ತಲೂ, ಅವನನ್ನಾನಂದಿಸಿ, ಅನೇಕ ನದಿಗಳನ್ನೂ ಸರೋವರಗಳನ್ನೂ ನೋಡಿ, ಬೇಕಾದ ಸ್ಥಳಗಳಲ್ಲಿ ವಿಹಾರಮಾಡಿ ನಾನಾ ಸುಂದರ ನಗರಗಳನ್ನೂ ಉಪವನಗಳನ್ನೂ ಸಂಚರಿಸಿ, ತನ್ನ ಮಾತಿನಂತೆ ಸಂಧ್ಯಾಕಾಲಕ್ಕೆ ಸರಿಯಾಗಿ

ಅವನನ್ನು ಕರೆತಂದು ಜನನೀ ಸೋದರರ ಬಳಿ ಸೇರಿಸುತ್ತಿದ್ದಳು. ಹೀಗೆ ಅನೇಕ ಋಷ್ಯಾಶ್ರಮಗಳನ್ನೂ, ನಾನಾ ಫಲಪುಷ್ಪಭರಿತವಾದ ಮಾನಸ ಸರೋವರದ ಪ್ರಾಂತಗಳನ್ನೂ ಭೀಮಸೇನನಿಗೆ ತೋರಿಸಿ ಅವನನ್ನಾನಂದಿಸಿದಳು. ಸ್ವಲ್ಪ ಕಾಲದ ಮೇಲೆ ಹಿಡಿಂಬೆಗೆ ಭೀಮಸೇನ ನಿಂದ ಒಬ್ಬ ಮಗನು ಹುಟ್ಟಿದನು. ಅವನು ಭಯಂಕರವಾದ ಕೆಂಗಣ್ಣು ಗಳೂ, ಬಾಣಗಳಂತೆ ಚೂಪಾದ ಮತ್ತು ಉದ್ದವಾದ ಕಿವಿಗಳು, ಅಗಲ ವಾದ ಬಾಯಿ ಉಳ್ಳವನಾಗಿ ಬಹಳ ಭೀಕರಾಕಾರನಾಗಿದ್ದನು. ಅವನಿಗೆ ತಾಮ್ರವರ್ಣದ ತುಟಿಗಳೂ ಮೊನಚಾದ ಹಲ್ಲುಗಳೂ ಇದ್ದುದಲ್ಲದೆ ಅವನ ಧ್ವನಿಯು ಸಿಡಿಲಿನಂತೆ ಭಯಂಕರವಾಗಿದ್ದಿತು. ಅವನು ಪ್ರಬಲ ಭುಜಬಲವೂ ಶಕ್ತಿ ಸಾಹಸಗಳೂ ಉಳ್ಳ ಮಹಾವೀರ ರಥಿಕನಾದನು. ಅವನು ಮಾನವ ಶ್ರೇಷ್ಠನಾದ ಭೀಮಸೇನನಿಗೆ ಪುತ್ರನಾದರೂ, ಉದ್ದವಾದ ಮೂಗೂ, ವಿಶಾಲವಾದ ಎದೆಯೂ ಉಳ್ಳವನಾಗಿ ನೋಡುವುದಕ್ಕೆ ದೈತ್ಯದಾನವ ರಾಕ್ಷಸ ಪಿಶಾಚಾದಿಗಳಿಗಿಂತಲೂ ಹೆಚ್ಚು ವಿಕಾರವಾಗಿದ್ದನು. ಇವನು ಕ್ರಮಕ್ರಮವಾಗಿ ಅಸ್ತ್ರ ಶಸ್ತ್ರಾ ಭ್ಯಾಸವನ್ನು ಮಾಡಿ, ಇನ್ನೂ ಬಾಲ್ಯದಲ್ಲಿಯೇ ಸಮರ ವಿದ್ಯಾ ಪ್ರವೀಣನಾದನು.

ರಾಕ್ಷಸ ಸ್ತ್ರೀಯರು ಗರ್ಭಿಣಿಯರಾದ ದಿನವೇ ಪ್ರಸವಿಸುವುದೇ ಪದ್ಧತಿ. ತಮ್ಮ ಇಷ್ಟಾನುಸಾರವಾಗಿ ಯಾವ ರೂಪವನ್ನು ಬೇಕಾದರೂ ಧರಿಸಬಲ್ಲ ಶಕ್ತಿಯು ಅವರಿಗುಂಟು. ಈ ವಿಕಾರಸ್ವರೂಪನಾದ ವೀರ ಬಾಲಕನು ಜನಿಸಿದೊಡನೆಯೇ ತಾಯಿ ತಂದೆಗಳಿಬ್ಬರಿಗೂ ಬಾಗಿ ನಮ ಸ್ಕರಿಸಲು, ತಾಯಿಯು ನೋಡಿ "ಇವನ ತಲೆಯು ಘಟ (ಮಡಕೆ) ದಂತೆ ಇದೆಯಲ್ಲಾ" ಎಂದಳು. ಆದರಿಂದ ಅವರಿಬ್ಬರೂ ಮಾತನಾಡಿಕೊಂಡು ಅವನಿಗೆ "ಘಟೋತ್ಕಚ" ನೆಂದು ಹೆಸರಿಟ್ಟರು. ಈ ಘಟೋತ್ಕಚನಿಗೆ ಪಾಂಡವರಲ್ಲಿ ಬಹಳ ಪ್ರೀತಿಯಿದ್ದುದರಿಂದ ಯಾವಾಗಲೂ ಅವರ ಹಿತ ವನ್ನೇ ಕೋರುತ್ತ ಪಾಂಡವ ಪಕ್ಷವಾಗಿಯೇ ಇದ್ದನು.

ಹಿಡಿಂಬೆಯು ಭೀಮಸೇನನ ನಿಬಂಧನೆಯಂತೆ ಅವನನ್ನು ಅಗಲುವ ಕಾಲ ಒದಗಿದುದರಿಂದ ಅವನಪ್ಪಣೆಯನ್ನು ಪಡೆದು ಸ್ವೇಚ್ಛೆಯಾಗಿ ಹೊರಟುಹೋದಳು. ತರುವಾಯ ಘಟೋತ್ಕಚನು, ತನ್ನಿಂದ ಯಾವು

ದಾದರೂ ಕಾರ್ಯವಾಗಬೇಕಾದ ಸಮಯದಲ್ಲಿ ಪಾಂಡವರ ಬಳಿಗೆ ಬರುವೆನೆಂದು ಹೇಳಿ, ಉತ್ತರಾಭಿ ಮುಖವಾಗಿ ಹೊರಟುಹೋದನು

[ಅಸಹಾಯ ಶೂರನಾದ ಕರ್ಣನಿಗೆ ದಿವ್ಯಾಯುಧವನ್ನು ಅನುಗ್ರಹಿಸಿದ್ದ ದೇವೇಂದ್ರನೇ, ಆ ಕರ್ಣನಿಗೆ ಎದುರಾಗಿ ನಿಂತು ಸಮಸಮವಾಗಿ ಯುದ್ಧಮಾಡಲು ಈ ಘಟೋತ್ಕಚನನ್ನು ಅವನಿಗೆ ತಕ್ಕ ಎದುರಾಳನ್ನಾಗಿ ಸೃಷ್ಟಿಸಿದನೆಂಬುದಾಗಿ ವ್ಯಾಸರು ಹೇಳಿರುವರು]

## ಅಧ್ಯಾಯ ೧೩

## ವೇದವ್ಯಾಸರ ಸಂದರ್ಶನ

ಪಾಂಡವರು ತಾಯಿಯೊಡನೆ ಅನೇಕ ವನಪ್ರದೇಶಗಳನ್ನು ಸಂಚರಿಸಿ, ಮತ್ಸ್ಯ, ತ್ರಿಗರ್ತ, ಪಾಂಚಾಲ ದೇಶಗಳನ್ನು ದಾಟಿ, ಕೀಚಕರ ರಾಜ್ಯಕ್ಕೆ ಬಂದು ಅಲ್ಲಿ ಅನೇಕ ಸುಂದರ ವನಗಳನ್ನೂ ಸರೋವರಗಳನ್ನೂ ನೋಡಿದರು. ಅನಂತರ, ತಮ್ಮ ಗುರುತು ಇತರರಿಗೆ ತಿಳಿಯದಂತೆ ಜಡೆಗಳನ್ನು ಧರಿಸಿ, ಮರದ ತೊಗಟೆಗಳನ್ನು ಹೊದ್ದು ತಪಸ್ವಿಗಳಂತೆ ವೇಷಧಾರಿಗಳಾದರು. ಹೀಗೆ ಅವರು ತಾಯಿಯನ್ನು ಎತ್ತಿಕೊಂಡು ನಾನಾ ಪ್ರದೇಶಗಳನ್ನು ಸಂಚರಿಸಿ ವೇದ ವೇದಾಂಗಗಳನ್ನು ಕಲಿಯುತ್ತಿದ್ದರು. ಹೀಗಿರಲು, ಒಂದಾನೊಂದು ದಿನ ಅವರ ತಾತನಾದ ವೇದವ್ಯಾಸ ಮಹರ್ಷಿಯು ಗೋಚರನಾದನು. ಆಗ ತಾಯಿಯೊಡಗೂಡಿ ಅವರೆಲ್ಲರೂ ಸಂತೋಷ ಭಕ್ತಿಗಳಿಂದ ಆತನಿಗೆ ನಮಸ್ಕಾರ ಮಾಡಲು, ಆತನು ಅವರನ್ನು ನೋಡಿ, "ಮಕ್ಕಳಿರಾ, ಧೃತರಾಷ್ಟ್ರನ ಪುತ್ರರ ದೆಸೆಯಿಂದ ನೀವುಗಳು ರಾಜ್ಯಭ್ರಷ್ಟರಾಗಿ ಕಷ್ಟಕ್ಕೆ ಸಿಕ್ಕಿರುವ ವಿಚಾರವು ನನಗೆ ಹಿಂದೆಯೇ ತಿಳಿಯಿತು. ಅದರಿಂದಲೇ ನಿಮ್ಮ ಹಿತವನ್ನು ಬಯಸಿ ನಾನು ಇಲ್ಲಿಗೆ ಬಂದೆನು ನೀವುಗಳು ವ್ಯಥೆಪಡಬೇಡಿ. ಇದೆಲ್ಲವೂ ನಿಮ್ಮ ಮುಂದಿನ ಸುಖಕ್ಕಾಗಿಯೇ ಒದಗಿರುವುದು ನೀವೂ ಕೌರವರೂ ನನ್ನ ದೃಷ್ಟಿಗೆ ಒಂದೇ ರೀತಿಯಾಗಿ ಕಂಡರೂ, ನಿಷ್ಕಾರಣವಾಗಿ ಕಷ್ಟಕ್ಕೆ ಸಿಕ್ಕಿರುವವರಲ್ಲಿ ನನಗೆ ಹೆಚ್ಚು ಕನಿಕರ ಪ್ರೇಮಗಳಿರಬೇಕಾದುದೇ ಧರ್ಮವಲ್ಲವೇ? ಅದರಿಂದ ನಿಮಗೆ ಮುಂದಿನ ಸುಖಕ್ಕಾಗಿ ಕರ್ತವ್ಯವನ್ನು ತಿಳಿಸಲು ನಾನೀಗ ಬಂದಿರುವೆನು. ಇಲ್ಲಿಗೆ ಸಮೀಪದಲ್ಲಿ ಒಂದು

ಸುಂದರವಾದ ನಗರವಿರುವುದು. ಅಲ್ಲಿ ನೀವುಗಳು ವೇಷಾಂತರದಿಂದ ವಾಸವಾಗಿರಿ; ನಾನು ಪುನಃ ಬಂದು ನಿಮ್ಮನ್ನು ಕಾಣುವೆನು," ಎಂದು ಹೇಳಿ ಕುಂತೀದೇವಿಯನ್ನು ನೋಡಿ, "ಮಗಳೇ, ಸತ್ಯವಂತರಾದ ನಿನ್ನ ಮಕ್ಕಳು ಭೂಮಂಡಲಕ್ಕೆ ಅರಸರಾಗಿ ರಾಜಸೂಯ ಅಶ್ವಮೇಧಾದಿ ಯಾಗಗಳನ್ನು ಮಾಡಿ ಕೀರ್ತಿವಂತರಾಗುವರು. ಮಾದ್ರೀಪುತ್ರರಾದ ನಕುಲ ಸಹದೇವರೂ ಸಹ ಅವರ ಸ್ವಂತ ರಾಜ್ಯದಲ್ಲಿ ಆನಂದದಿಂದ ಪುತ್ರ ಮಿತ್ರ ಬಂಧುಗಳೊಡಗೂಡಿ ವಿಶೇಷ ವೈಭವದಿಂದಿರುವರು. ನೀನು ಚಿಂತಿಸಬೇಡ," ಎಂದು ಹೇಳಿ, ಅವರೆಲ್ಲರನ್ನೂ ಕರೆದುಕೊಂಡು, ಬಳಿಯಲ್ಲಿದ್ದ ಏಕಚಕ್ರ ನಗರಕ್ಕೆ ಹೋಗಿ, ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇಳಿಸಿದನು. ಅನಂತರ ಯುಧಿಷ್ಠಿರನನ್ನು ನೋಡಿ, "ಮಕ್ಕಳಿರಾ, ನೀವುಗಳು ಇಲ್ಲಿನ ಕಾಲ ದೇಶಗಳಿಗೆ ತಕ್ಕಂತೆ ನಡೆದುಕೊಂಡು ವಾಸವಾಗಿರಿ; ನಾನು ಮತ್ತೆ ಬಂದು ನಿಮ್ಮನ್ನು ಕಾಣುವೆನು," ಎಂದು ಹೇಳಿ, ಅವರೆಲ್ಲರ ಸಂಮತಿಯನ್ನೂ ಪಡೆದು ವೇದವ್ಯಾಸ ಮಹರ್ಷಿಯು ಹೊರಟು ಹೋದನು.

## ಏಕಚಕ್ರ ನಗರವಾಸ

ಪಾಂಡವರು ಏಕಚಕ್ರ ನಗರದಲ್ಲಿ ಕೆಲವು ಕಾಲ ಆ ಬ್ರಾಹ್ಮಣನ ಮನೆಯಲ್ಲಿ ವಾಸಮಾಡಿಕೊಂಡಿದ್ದರು. ಇವರು ಭಿಕ್ಷಾವೃತ್ತಿಯಿಂದ ಜೀವನ ಮಾಡುತ್ತಿದ್ದರೂ, ಅನೇಕ ವಿದ್ಯೆಗಳಲ್ಲಿ ಪರಿಶ್ರಮವನ್ನು ಪಡೆದಿದ್ದ ಕಾರಣ ಎಲ್ಲರಿಗೂ ಬೇಕಾದವರಾಗಿ ಜನಾನುರಾಗವನ್ನು ಪಡೆದಿದ್ದರು. ಅವರು ನಿತ್ಯವೂ ಭಿಕ್ಷಾಟನೆಯಿಂದ ತಂದ ಆಹಾರವೆಲ್ಲವನ್ನೂ ಕುಂತೀದೇವಿಯ ವಶಕ್ಕೆ ಒಪ್ಪಿಸುತ್ತಿದ್ದರು. ಆಕೆ ಆ ಒಟ್ಟು ಆಹಾರವನ್ನು ಎರಡು ಸಮಭಾಗಗಳನ್ನಾಗಿ ಮಾಡಿದನಂತರ ಅರ್ಧಭಾಗವನ್ನು ಭೀಮಸೇನನ ಹೊರತು ಮಿಕ್ಕ ಐದು ಮಂದಿಯೂ ಭಕ್ಷಿಸುತ್ತಿದ್ದರು. ಮಿಕ್ಕ ಅರ್ಧಭಾಗವೆಲ್ಲವನ್ನೂ ಭೀಮನೊಬ್ಬನೇ ತಿಂದು ತೇಗುತ್ತಿದ್ದನು. ಹೀಗಿರಲು, ಒಂದಾನೊಂದು ದಿನ ಯುಧಿಷ್ಠಿರಾದಿಗಳು ಭಿಕ್ಷಾರ್ಥಿಗಳಾಗಿ ಹೊರಗಡೆ ಹೋಗಿದ್ದಾಗ ಭೀಮಸೇನನೂ ಕುಂತೀದೇವಿಯೂ ಮಾತ್ರವೇ ಮನೆಯಲ್ಲಿದ್ದರು. ಆಗ ಆ ಬ್ರಾಹ್ಮಣನ ಮನೆಯಲ್ಲಿ ಗಟ್ಟಿಯಾದ ಹೃದಯ

ಭೇದಕ ರೋದನವು ಕೇಳಬಂತು. ಆಗ ಕುಂತೀದೇವಿಯು, ಆ ಸಾಧು ಬ್ರಾಹ್ಮಣನಿಗೆ ಏನೋ ಕಷ್ಟವೊದಗಿರಬೇಕೆಂತಲೂ, ತಮಗೆ ಉಪಕಾರಿಯೂ ಯೋಗ್ಯನೂ ಆದ ಆತನಿಗೆ ತಾವು ಹೇಗಾದರೂ ತಮ್ಮ ಕೈಯಿಂದಾದ ಉಪಕಾರವನ್ನು ಮಾಡಲೇಬೇಕೆಂತಲೂ ಭೀಮಸೇನನೊಡನೆ ಆಲೋಚಿಸಿ ನಿರ್ಧರಿಸಿಕೊಂಡು, ಬೇಗನೆ ಆ ಮನೆಯೊಳಕ್ಕೆ ಹೋಗಿ ನೋಡಲು, ಅಲ್ಲಿ ಮನೆಯ ಯಜಮಾನನಾದ ಬ್ರಾಹ್ಮಣನೂ, ಆತನ ಪತ್ನಿಯೂ, ಮಗನೂ ಮಗಳೂ, ಸಹ ದುಃಖದಿಂದ ಕುಳಿತಿದ್ದರು. ಆ ಬ್ರಾಹ್ಮಣನು ಹೆಂಡತಿಯನ್ನು ಕುರಿತು, ಮಾತನಾಡುತ್ತ "ಛೀ! ಭೂಮಿಯ ಮೇಲೆ ಹುಟ್ಟಬಾರದು! ಜೀವಿತವೆಂಬುದು ದುಃಖಮಯವಾದುದು. ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥಗಳನ್ನು ಸಾಧಿಸಲು ಪ್ರಯತ್ನಿಸಿದರೆ ದುಃಖಗಳೂ ಕಷ್ಟಗಳೂ ಬರಲೇ ಬರುವವು. ಮೋಕ್ಷವೇ ಪರಮಾರ್ಥವೆಂದು ಹೇಳಿರುವರು. ಆದರೆ ಅದನ್ನು ಸಾಧಿಸಲು ಸಾಧ್ಯವೇ ? ಭೂಲೋಕದಲ್ಲಿ ಐಶ್ವರ್ಯಾಪೇಕ್ಷೆಯಿಂದ ಅನೇಕ ಕಷ್ಟಗಳೊದಗುವುವು. ಅದನ್ನು ಸಂಪಾದಿಸಿದರೆ ಕಷ್ಟಗಳು ಮತ್ತಷ್ಟು ಹೆಚ್ಚುವುವು ಹೇಗಾದರೂ ಮನುಷ್ಯ ಜನ್ಮವೇ ದುಃಖಮಯವಾದುದು. ಅದು ಹೇಗಾದರೂ ಆಗಲಿ; ಪ್ರಾಣದಿಂದಿದ್ದರೆ ಒಂದು ದಿನವಾದರೂ ನಿಶ್ಚಿಂತೆಯಾಗಿದ್ದೇವು ; ಎಂದರೆ ಈಗ ನಮ್ಮ ಪ್ರಾಣಕ್ಕೇ ಘಾತಕವೊದಗಿರುವುದು. ನಿನ್ನಂತಹ ಸಾಧ್ವಿಯೂ ಗುಣವತಿಯೂ ಆದ ಪತ್ನಿಯನ್ನು ದಿಕ್ಕಿಲ್ಲದಂತೆ ಬಿಟ್ಟು ನಾನು ಮೃತ್ಯುವಿನ ಬಾಯಿಗೆ ಹೋಗಲೇ? ಅಥವಾ ನನ್ನನ್ನು ನಂಬಿ ಅತ್ಯಂತ ಪ್ರೀತಿ ವಿವೇಕ ವಿಧೇಯತೆಗಳಿಂದ ನನ್ನ ಸೇವೆಮಾಡಿದ ನಿನ್ನನ್ನೇ ಆ ಮೃತ್ಯುವಿನ ಬಾಯಿಗೆ ನೂಕಲೇ? ದೇವರು ನಮಗನುಗ್ರಹಿಸಿರುವ ಮತ್ತು ಮುಂದೆ ಲೋಕದಲ್ಲಿ ಸುಖ ಸಂತೋಷಗಳನ್ನು ಅನುಭವಿಸಬೇಕಾಗಿರುವ ನಮ್ಮ ಎಳೆಯ ಮಗನನ್ನಾಗಲಿ, ಮದುವೆಯಾತಕ್ಕ ಮಗಳನ್ನಾಗಲಿ ಮರಣಕ್ಕೀಡು ಮಾಡೋಣವೇ? ಈಗ ನಮಗೆ ಸನ್ನಿಹಿತವಾಗಿರುವ ಮೃತ್ಯುವಿನಿಂದ ತಪ್ಪಿಸಿಕೊಳ್ಳಲು ಮಾರ್ಗವು ಯಾವುದು? ಅಯ್ಯೋ! ಇನ್ನು ಇಲ್ಲಿಗೆ ನನ್ನ ಆಯುಃಪ್ರಮಾಣವು ಪೂರ್ತಿಯಾಯಿತು," ಎಂದು ದುಃಖಿಸಿದನು. ಆಗ ಆತನ ಹೆಂಡತಿಯು ಗಂಡನನ್ನು ಕುರಿತು;

"ಪ್ರಿಯಾ, ನೀವು ದುಃಖಿಸಬೇಡಿ; ಹುಟ್ಟಿದವರಿಗೆ ಮರಣವು ಸಿದ್ಧವಾಗಿಯೇ ಇರುವುದು. ಪತಿಯ ಹಿತಕ್ಕಾಗಿ ಪ್ರಾಣವನ್ನಾದರೂ ತೆರಬೇಕಾದುದೇ ಪತಿವ್ರತೆಯ ಕರ್ತವ್ಯ. ಅದರಿಂದ ನಾನು ಈಗ ಮೃತ್ಯುವಿಗಾಹುತಿಯಾಗುವೆನು. ಅದರಿಂದ ನಿಮ್ಮ ಪ್ರಾಣರಕ್ಷಣೆಯೂ ನನಗೆ ಕೀರ್ತಿಯೂ ಉಂಟಾಗುವವು. ಅನಂತರ ನೀವು ಬೇರೊಬ್ಬ ಸಾಧ್ವಿಯನ್ನು ಮದುವೆಯಾಗಿ ಸಂಸಾರಮಾಡಿಕೊಂಡು, ಈ ಮಕ್ಕಳನ್ನು ಸಾಕಿ ನಿಮ್ಮ ಗೃಹಸ್ಥ ಧರ್ಮವನ್ನು ಲೋಪವಿಲ್ಲದೆ ನಡೆಯಿಸಬಹುದು," ಎಂದು ಹೇಳಿದಳು. ಇದನ್ನು ಕೇಳಿ ಮಗಳು, "ಅಮ್ಮಾ, ನನ್ನನ್ನು ನೀವು ಹೇಗಿದ್ದರೂ ಪರರಿಗೆ ಕೊಡುವುದರಿಂದ ನಾನು ನಿಮ್ಮನ್ನಗಲ ತಕ್ಕವಳು. ಆದಕಾರಣ, ನನ್ನನ್ನು ಒಬ್ಬ ಪುರುಷನಿಗೆ ಕೊಟ್ಟು ಅಗಲುವುದಕ್ಕೆ ಪ್ರತಿಯಾಗಿ ಮೃತ್ಯುವಿಗೇ ಕೊಟ್ಟುಬಿಡಿ. ಅದರಿಂದ ತಂದೆ ತಾಯಿಗಳ ಪ್ರಾಣಗಳನ್ನು ಕಾಪಾಡಿ ಅವರ ದುಃಖವನ್ನು ಪರಿಹರಿಸುವ ಸಂತೋಷವೂ ಕೀರ್ತಿಯೂ ನನಗುಂಟಾಗಿ ನಿಮಗೆ ಒದಗಿರುವ ವಿಪತ್ತೂ ಪರಿಹಾರವಾಗುವುದು," ಎಂದಳು. ಈ ಮಾತುಗಳನ್ನು ಕೇಳಿ ತಾಯಿ ತಂದೆಗಳಿಬ್ಬರಿಗೂ ಮಿತಿಯಿಲ್ಲದ ದುಃಖವುಂಟಾಗಿ ಅವರು ಅಳುವುದಕ್ಕಾರಂಭಿಸಿದರು. ಅವರ ದುಃಖವನ್ನು ನೋಡಿ ಮಗಳೂ ರೋದಿಸಿದಳು. ಹೀಗೆ ಮೂರು ಮಂದಿಯೂ ಅತ್ಯಂತ ದುಃಖದಿಂದ ಅಳುತ್ತಿರುವುದನ್ನು ನೋಡಿ, ಅಲ್ಲಿದ್ದ ಬಾಲಕನು ಅಲ್ಲಿಬಿದ್ದಿದ್ದ ಒಂದು ಹುಲ್ಲು ಕಡ್ಡಿಯನ್ನು ಹಿಡಿದು ಅವರಬಳಿಗೆ ಓಡಿ ಬಂದು, ನಗುತ್ತ "ಅಪ್ಪಾ! ಅಮ್ಮಾ! ಅಕ್ಕಾ! ನೀವು ಅಳಬೇಡಿ, ಇಗೋ! ಇದರಿಂದಲೇ ನಾನು ಆ ದುಷ್ಟ ಬಕಾಸುರನನ್ನು ಹೊಡೆದು ಕೊಂದುಹಾಕಿ ಬಿಟ್ಟು ಬರುತ್ತೇನೆ," ಎಂದು ಮುದ್ದು ಮುದ್ದು ಮಾತುಗಳಿಂದ ಹೇಳಿದನು. ಇದನ್ನು ಕೇಳಿ ಅವರು ಮೂವರೂ ದುಃಖದಲ್ಲಿದ್ದರೂ, ಆ ಬಾಲ ಭಾಷೆಯಿಂದ ಸಂತೋಷಪಟ್ಟರು. ಮರೆಯಲ್ಲಿ ಎಲ್ಲವನ್ನೂ ಕೇಳುತ್ತ ನಿಂತಿದ್ದ ಕುಂತೀದೇವಿಯು, ತಾನು ಕಾಣಿಸಿಕೊಳ್ಳಲು ಇದೇ ತಕ್ಕ ಸಮಯವೆಂದು ಆಲೋಚಿಸಿ, ತಟ್ಟನೆ ಒಳಗೆ ಬಂದು, ಅವರನ್ನು ಕುರಿತು, "ನಿಮ್ಮ ಇಂತಹ ದುಃಖಕ್ಕೆ ಕಾರಣವೇನು? ದಯೆಯಿಟ್ಟು ಅದನ್ನು ತಿಳಿಸಿದರೆ, ಅದನ್ನು ಸಾಧ್ಯವಾದ ಮಟ್ಟಿಗೆ ನಿವಾರಣೆ ಮಾಡುತ್ತೇನೆ. ಹೇಳಿ," ಎಂದಳು.

ಆಗ ಆ ಬ್ರಾಹ್ಮಣನು ಕುಂತೀದೇವಿಯನ್ನು ಕುರಿತು, "ಅಮ್ಮಾ, ಗುಣವತಿಯಾದ ನಿನಗೆ ನಮ್ಮ ಮೇಲೆ ಕನಿಕರವುಂಟಾಗಿ ನೀನು ಹಾಗೆ ಹೇಳಿದುದು ನ್ಯಾಯವೇ ಸರಿ! ಆದರೆ ಈಗ ನಮಗೆ ಒದಗಿರುವ ದುಃಖವನ್ನು ಪರಿಹರಿಸಲು ಮನುಷ್ಯರಿಂದ ಸಾಧ್ಯವೇ ಅಲ್ಲ. ಹೇಗೆಂದರೆ: "ಈ ಊರಿಗೆ ಸಮೀಪವಾದ ಅರಣ್ಯದಲ್ಲಿ ಬಕಾಸುರನೆಂಬ ಪ್ರಬಲ ರಾಕ್ಷಸನು ವಾಸವಾಗಿದ್ದಾನೆ. ಅವನೇ ಈ ನಗರಕ್ಕೂ ಈ ರಾಜ್ಯಕ್ಕೂ ಅಧಿಪತಿಯು. ಅವನು ನರಮಾಂಸಭಕ್ಷಕನಾಗಿ ಕೊಬ್ಬಿ, ಯಾವ ಶತ್ರುಗಳಿಗೂ ಪ್ರವೇಶಕ್ಕೆ ಅವಕಾಶವಿಲ್ಲದಂತೆ ಈ ರಾಜ್ಯವನ್ನು ರಕ್ಷಿಸಿಕೊಂಡಿರುವನು. ಆದರಿಂದ ಮತ್ತೆ ಯಾವ ಶತ್ರುವಿನ ಭಯವೂ ಈ ದೇಶದವರಿಗಿಲ್ಲ. ಹೀಗೆ ಪ್ರಜೆಗಳನ್ನು ಶತ್ರುಗಳಿಗೆ ಸಿಕ್ಕದಂತೆ ಕಾಪಾಡಿಕೊಂಡಿರುವುದಕ್ಕಾಗಿ ಬಕಾಸುರನು, ಈ ನಗರದ ಪ್ರಜೆಗಳ ಸಂಗಡ ಒಂದು ನಿಬಂಧನೆಯನ್ನು ಮಾಡಿಕೊಂಡಿರುವನು. ಆದರಂತೆ ಸರದಿಯ ಮೇರೆಗೆ ನಿತ್ಯವೂ ಒಂದೊಂದು ಸಂಸಾರದವರು ನಡೆಯಬೇಕು. ಅನೇಕ ವರ್ಷಗಳಿಗೊಂದಾವೃತ್ತಿ ಒಂದು ಸಂಸಾರಕ್ಕೆ ಆ ಸರದಿ ಬರುವುದು. ಏನೆಂದರೆ, ಬಕಾಸುರನ ಆಹಾರಕ್ಕಾಗಿ ಪ್ರತಿನಿತ್ಯವೂ ಒಂದು ಬಂಡಿಯ ತುಂಬ ಅನ್ನ, ಭಕ್ಷ್ಯಗಳು, ಎರಡು ಕೋಣಗಳು, ಬಂಡಿಯನ್ನು ಹೊಡೆದುಕೊಂಡು ಹೋಗುವ ಒಬ್ಬ ಮನುಷ್ಯ, ಇಷ್ಟೂ ಊರಿಂದ ಹೋಗಬೇಕು. ಈ ನಿಬಂಧನೆಗೆ ಯಾವ ಗೃಹಸ್ಥನು ತಪ್ಪುವನೋ ಅವನ ಮನೆಗೆ ಬಕಾಸುರನು ನುಗ್ಗಿ ಅವನನ್ನೂ ಅವನ ಹೆಂಡತಿ ಮಕ್ಕಳು ಎಲ್ಲರನ್ನೂ ಹಿಡಿದುಕೊಂದು ತಿಂದುಬಿಡುವನು. ಈ ದೇಶದ ರಾಜನು ದುರ್ಬಲನು, '**ವೇತ್ರಕೀಯ ಗೃಹ**' ವೆಂಬ ಸ್ಥಳದಲ್ಲಿ ವಾಸಮಾಡಿಕೊಂಡಿರುವನು. ಆ ಅವಿವೇಕಿಗೆ ತನ್ನ ರಾಜ್ಯಕ್ಕಿರುವ ಈ ಕಂಟಕವನ್ನು ನಿವಾರಣೆ ಮಾಡಿಕೊಳ್ಳಬೇಕೆಂಬ ಅಭಿಪ್ರಾಯವೂ ಶಕ್ತಿಯೂ ಎರಡೂ ಇಲ್ಲ. ಈ ದಿನ ಬಕಾಸುರನಿಗೆ ಆಹಾರವನ್ನೊದಗಿಸಿ ಕಳುಹಿಸಬೇಕಾದ ಸರದಿಯು ನನಗೆ ಬಂದಿದೆ. ಅವನಿಂದ ತಪ್ಪಿಸಿಕೊಳ್ಳಲು ನನಗೆ ಯಾವ ಉಪಾಯವೂ ಇಲ್ಲ. ಆದರಿಂದ ನಮ್ಮ ಸಂಸಾರದ ಎಲ್ಲರೊಡನೆ ನಾನು ಹೋಗಿ, ಅವನು ನಮ್ಮೆಲ್ಲರನ್ನೂ ನುಂಗಿಬಿಡುವಂತೆ ಅವನಿಗೆ ಹೇಳುತ್ತೇನೆ," ಎಂದು ಹೇಳಿದನು.

ಇದೆಲ್ಲವನ್ನೂ ಕೇಳಿ ಕುಂತಿಯು, "ನೀವು ಹೆದರಲೂ ಬೇಡಿ, ದುಃಖಿಸಲೂ ಬೇಡಿ, ನಿಮಗೆ ರಾಕ್ಷಸನಿಂದ ಅಪಾಯವಿಲ್ಲದಂತೆ ಮಾಡಲು ನಾನೊಂದು ಉಪಾಯವನ್ನು ಹೇಳುತ್ತೇನೆ. ಕೇಳಿ: ನೀವು ಯಾರೂ ಆ ರಾಕ್ಷಸನ ಎದುರಾಗಿ ಹೋಗಬೇಡಿ. ನನಗೆ ಒಬ್ಬನಲ್ಲ, ಐದು ಮಂದಿ ಮಕ್ಕಳಿರುವರು. ನೀವುಗಳು ಆಹಾರವನ್ನು ಸಿದ್ಧಮಾಡಿ. ನಿಮ್ಮ ಪರವಾಗಿ ನನ್ನ ಮಗನೊಬ್ಬನು ಆ ಆಹಾರವನ್ನು ತೆಗೆದುಕೊಂಡು ಬಕಾಸುರನ ಬಳಿಗೆ ಹೋಗುವನು," ಎಂದಳು. ಆ ಬ್ರಾಹ್ಮಣನು ಇದಕ್ಕೆ ಒಪ್ಪಲಿಲ್ಲ. ಆತನು ಕುಂತಿಯನ್ನು ಕುರಿತು, "ಏನಮ್ಮಾ! ನನ್ನ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ನನ್ನಾಶ್ರಯದಲ್ಲಿರುವ ಬ್ರಾಹ್ಮಣನನ್ನು ನಾನು ಬಲಿಗೊಡಲೇ? ಛೀ! ಛೀ! ಅಂತಹ ಪಾಪಕಾರ್ಯವನ್ನು ನಾನೆಂದಿಗೂ ಮಾಡಲಾರೆನು. ಅದಕ್ಕಿಂತಲೂ, ನಾನೇ ನನ್ನ ಪತ್ನಿಯೊಡನೆ ಹೋಗಿ ನಾವಿಬ್ಬರೂ ಬಕಾಸುರನಿಗೆ ಆಹಾರವಾಗುವೆವು," ಎಂದನು ಅದಕ್ಕೆ ಕುಂತಿಯು, "ವಿಪ್ರವರ್ಯಾ, ಬ್ರಾಹ್ಮಣರನ್ನು ವಿಪತ್ತಿನಿಂದ ಕಾಪಾಡಬೇಕೆಂಬುದೇ ನನ್ನ ಮುಖ್ಯೋದ್ದೇಶವು. ನನ್ನ ಮಗನ ಮೇಲೆ ಅಭಿಮಾನವಿಲ್ಲದೆ ನಾನು ಆ ರೀತಿ ಹೇಳಿದೆನೆಂದೆಣಿಸಬೇಡಿ. ನನಗೆ ನೂರು ಮಂದಿ ಮಕ್ಕಳಿದ್ದರೂ ಪ್ರತಿಯೊಬ್ಬನೂ ನನ್ನ ಪ್ರೀತಿಗೆ ಪಾತ್ರನೆಂಬುದರಲ್ಲಿ ಸಂದೇಹವಿಲ್ಲ. ಆದರೆ, ಈ ನನ್ನ ಮಗನು ಸಾಮಾನ್ಯ ಮಾನವರಂತೆ ಅಲ್ಲ. ಪರಮಶಕ್ತನು. ಅವನು ನಿಮ್ಮ ಬಕಾಸುರನಿಂದ ಹತನಾಗತಕ್ಕವನಲ್ಲ. ಬಕಾಸುರನಿಗೆ ನೀವು ಕೊಡುವ ಆಹಾರವನ್ನು ಕೊಟ್ಟು ತನ್ನ ಪ್ರಾಣವನ್ನು ಉಳಿಸಿಕೊಳ್ಳಬಲ್ಲನೆಂಬುದೇ ನನ್ನ ಸ್ಥಿರವಾದ ನಂಬಿಕೆ. ಹಿಂದೆ ಅನೇಕ ಮಂದಿ ರಾಕ್ಷಸರು ನನ್ನ ಮಗನ ಮೇಲೆ ಪ್ರತಿಭಟಿಸಿ ಬಂದು ಅವನಿಂದ ಹತರಾಗಿರುವರು. ಆದರೆ, ಈ ವಿಚಾರವನ್ನು ಮಾತ್ರ ನೀವು ಯಾರಲ್ಲಿಯೂ ಪ್ರಕಟಿಸಬಾರದು," ಎಂದು ಹೇಳಿದಳು.

ಅಮೃತಧಾರಾವರ್ಷದಂತಿದ್ದ ಕುಂತೀದೇವಿಯ ಮಾತುಗಳನ್ನು ಕೇಳಿ ಬ್ರಾಹ್ಮಣ ದಂಪತಿಗಳಿಗೆ ಅತ್ಯಾನಂದವಾಯಿತು. ಅನಂತರ ಆ ಬ್ರಾಹ್ಮಣನೂ ಕುಂತೀದೇವಿಯೂ ಹೋಗಿ ಭೀಮಸೇನನಿಗೆ ಈ ವಿಷಯವನ್ನು ತಿಳಿಸಲು, ಭೀಮಸೇನನು, ಆಹಾರವನ್ನು ತೆಗೆದುಕೊಂಡು

ತಾನೇ ಬಕಾಸುರನ ಬಳಿಗೆ ಹೋಗುವೆನೆಂದು ಒಪ್ಪಿಕೊಂಡನು. ಬ್ರಾಹ್ಮಣನು ಸಂತೋಷದಿಂದ ಹಿಂದಿರುಗಿ ಬಕಾಸುರನಿಗೆ ಆಹಾರ ಸಾಮಗ್ರಿಗಳನ್ನೊದಗಿಸುವ ಪ್ರಯತ್ನಮಾಡಿದನು.

ಅಷ್ಟು ಹೊತ್ತಿಗೆ, ಭಿಕ್ಷಾಟನೆಗಾಗಿ ಹೋಗಿದ್ದ ಯುಧಿಷ್ಠಿರಾದಿಗಳು ಆಹಾರವನ್ನು ತೆಗೆದುಕೊಂಡು ಮನೆಗೆ ಬಂದರು. ಭೀಮಸೇನನಿದ್ದ ರೀತಿಯನ್ನು ನೋಡಿ, ಯುಧಿಷ್ಠಿರನು, ಏನೋ ಅವನಿಗೆ ಸಂತೋಷಸಂಧಿಯೊದಗಿರುವುದೆಂದೂಹಿಸಿ, ತಾಯಿಯನ್ನು ಕೇಳಲು, ಕುಂತೀದೇವಿಯು ಎಲ್ಲ ವಿಚಾರವನ್ನೂ ವಿವರವಾಗಿ ತಿಳಿಸಿದಳು. ಆಗ ಯುಧಿಷ್ಠಿರನು, "ಏನಮ್ಮಾ, ನೀನು ಎಂತಹ ಕೆಲಸಮಾಡಿದೆ! ರಾಕ್ಷಸನ ಆಹಾರಕ್ಕಾಗಿ, ಹೆತ್ತಮಗನನ್ನು ಕಳುಹಿಸಲು ನೀನು ಒಪ್ಪಬಹುದೇ? ಯಾವ ಮಹಾವೀರನ ಶಕ್ತಿಯಿಂದ ನಾವುಗಳು ದುರ್ಯೋಧನಾದಿಗಳ ದೆಸೆಯಿಂದ ನಮಗೆ ಒದಗಿದ್ದ ಲಾಕ್ಷಾಗೃಹ ದಹನಾದಿ ಮಹಾ ವಿಪತ್ತುಗಳಿಂದ ಪಾರಾದೆವೋ, ಯಾವನ ಶಕ್ತಿ ಸಾಹಸಗಳು ದುರ್ಯೋಧನಾದಿಗಳಿಗೆ ಸಿಂಹಸ್ವಪ್ನದಂತೆ ಇರುವವೋ, ಯಾವ ಪ್ರತಾಪಶಾಲಿಯ ಸಹಾಯದಿಂದ ನಾವುಗಳು ಮತ್ತೆ ರಾಜ್ಯವನ್ನು ಗೆದ್ದುಕೊಂಡು ಸುಖ ಸಂತೋಷಗಳಿಂದಿರುವೆವೆಂಬ ಭರವಸೆಯಿಂದಿರುವೆವೋ ಅಂತಹ ಮಗನನ್ನು ನೀನು ಈ ದಿನ ಮೃತ್ಯುಗಾಹುತಿಗೊಟ್ಟಂತೆ, ಆ ಬಕಾಸುರನ ಬಾಯಿಗೆ ತುತ್ತಾಗಲು ಕಳುಹಿಸುವುದಕ್ಕೆ ಒಪ್ಪಿದೆಯಲ್ಲಾ! ನಿನಗೇನು ಬುದ್ಧಿ ಕೆಟ್ಟದೆಯೋ? ಅಥವಾ ನಮಗೊದಗಿರುವ ದುಃಖಗಳಿಂದ ವಿವೇಚನಾಶಕ್ತಿಯೇ ಮಾಯವಾಯಿತೋ? ಛೀ! ಛೀ! ನೀನಿಂತಹ ಕಾರ್ಯ ಮಾಡಬಹುದೇ?" ಎಂಬುದಾಗಿ ಬಹಳ ವ್ಯಥೆಪಟ್ಟನು. ಅದಕ್ಕೆ ಕುಂತಿಯು, "ಮಗೂ ಯುಧಿಷ್ಠಿರಾ, ಭೀಮಸೇನನ ವಿಷಯದಲ್ಲಿ ನೀನು ಹೀಗೆ ವ್ಯಸನಪಡಬೇಕಾಗಿಲ್ಲ. ನಾನು ವಿವೇಚನೆಯಿಲ್ಲದೆ ಕಾರ್ಯಮಾಡಿಲ್ಲ. ಭೀಮನ ಶಕ್ತಿಯು ಸಾಮಾನ್ಯವಲ್ಲ. ಅವನು ಆ ಕಠೋರನಾದ ಹಿಡಿಂಬಾಸುರನನ್ನು ಲಕ್ಷ್ಯವಿಲ್ಲದೆ ವಧಿಸಿದಾಗಲೇ ನನಗೆ ಅವನ ಶಕ್ತಿಯನ್ನು ನೋಡಿ ಆಶ್ಚರ್ಯವುಂಟಾಯಿತು. ಅವನಿಗೆ ಹತ್ತು ಸಾವಿರ ಆನೆಗಳ ಬಲವಿದೆ. ಆದರಿಂದಲೇ ಅವನು ಆನೆಗಳಂತಿದ್ದ ನಿಮ್ಮೆಲ್ಲರನ್ನೂ ನನ್ನನ್ನೂ ವಾರಣಾವತದಿಂದ ಇಷ್ಟುದೂರ ಎತ್ತಿಕೊಂಡು ಬಂದುದು.

ಅವನಂತಹ ಬಲಶಾಲಿಯು ಮತ್ತೊಬ್ಬನಿಲ್ಲ. ಇಂದ್ರನನ್ನಾದರೂ ಬಾಹುಬಲದಿಂದ ಅವನು ಗೆಲ್ಲಬಲ್ಲನು. ಅವನು ಹುಟ್ಟಿದಾಗ ನನ್ನ ತೊಡೆಯಿಂದುರುಳಿ ಒಂದು ಭಾರಿಯಾದ ಬಂಡೆಯ ಮೇಲೆ ಬೀಳಲು, ಅದು ಅವನ ಭಾರದಿಂದ ಒಡೆದು ಚೂರು ಚೂರಾಯಿತು. ಅದರಿಂದ ಅಂದೇ ಭೀಮಸೇನನ ಶಕ್ತಿ ಎಂತಹುದೆಂಬುದು ನನಗೆ ವ್ಯಕ್ತವಾಯಿತು. ಅಲ್ಲದೆ, ನಮಗಾಶ್ರಯವನ್ನು ಕೊಟ್ಟು ಗೌರವಿಸಿರುವ ಪುಣ್ಯಶೀಲರಾದ ಈ ಬ್ರಾಹ್ಮಣದಂಪತಿಗಳಿಗೆ ಉಪಕಾರ ಮಾಡಬೇಕಾದುದು ನಮ್ಮ ಕರ್ತವ್ಯವು. ಅದರಿಂದ ಬ್ರಾಹ್ಮಣನಿಗೆ ಉಪಕಾರ ಮಾಡಿ ಪುಣ್ಯ ಸಂಪಾದಿಸಬೇಕೆಂಬುದೇ ನನ್ನ ಮುಖ್ಯೋದ್ದೇಶವು; ಅಲ್ಲದೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರು ಯಾರಾಗಲಿ ಪ್ರಾಣಾಪಾಯದಲ್ಲಿದ್ದರೆ ಅವರನ್ನು ಕಾಪಾಡುವುದೇ ಕ್ಷತ್ರಿಯರ ಕರ್ತವ್ಯ. ಆದಕಾರಣ ನಾನು ಉದ್ದೇಶವಾಗಿ ಈ ಕಾರ್ಯಕ್ಕೆ ಒಪ್ಪಿದೆನೇ ಹೊರತು, ಅವಿವೇಕದಿಂದಾಗಲಿ, ಅಜ್ಞಾತೆಯಿಂದಾಗಲಿ, ಯಾವ ದುರುದ್ದೇಶದಿಂದಲಾಗಲಿ, ಈ ಕಾರ್ಯವನ್ನು ಮಾಡಲಿಲ್ಲ. ನಾನು ಮೇಲೆ ಹೇಳಿದ ವಿಷಯವನ್ನು ಹಿಂದೆ ಪೂಜ್ಯರಾದ ವ್ಯಾಸಮಹರ್ಷಿಗಳು ನನ್ನೊಡನೆ ಹೇಳಿದ್ದರು. ಆ ಧರ್ಮವನ್ನು ಅನುಸರಿಸಿ ನಾನು ಕಾರ್ಯ ಮಾಡಿದ್ದೇನೆ. ಇದಕ್ಕಾಗಿ ನೀನು ಚಿಂತಿಸಬೇಕಾಗಿಲ್ಲ," ಎಂದು ಸಮಾಧಾನ ಹೇಳಿದಳು. ಆಗ ಯುಧಿಷ್ಠಿರನು, "ಅಮ್ಮಾ ಆ ಬ್ರಾಹ್ಮಣನ ಮೇಲಣ ಕನಿಕರದಿಂದ ನೀನು ಮಾಡಿದ ಕಾರ್ಯವು ಶ್ಲಾಘ್ಯವಾದುದು. ಅಲ್ಲದೆ, ಬ್ರಾಹ್ಮಣನಿಗೆ ಹಿತವನ್ನು ಬಯಸಿ ಮಾಡಿದ ಈ ಕಾರ್ಯದಲ್ಲಿ ನಮ್ಮ ಭೀಮಸೇನನು, ಆ ನೀಚ ನರಮಾಂಸಭಕ್ಷಕನಾದ ಬಕಾಸುರನನ್ನು ವಧಿಸಿ ಜಯಶಾಲಿಯಾಗಿಯೇ ಬರುವನು. ಆದರೆ, ನಮ್ಮ ವಿಚಾರವೆಲ್ಲವೂ ಈ ಊರಿನ ಜನಗಳಲ್ಲಿ ಪ್ರಕಟವಾಗಲು ಅವಕಾಶ ಕೊಡಕೂಡದೆಂದು ಮಾತ್ರ ಆ ಬ್ರಾಹ್ಮಣನಿಗೆ ಹೇಳಿ, ಅದರಂತೆ ಗುಟ್ಟನ್ನು ಬಯಲು ಮಾಡುವುದಿಲ್ಲವೆಂದು, ಆತನಿಂದ ವಾಗ್ದಾನವನ್ನು ಪಡೆಯಬೇಕು," ಎಂದು ಹೇಳಿದನು. ಕುಂತಿಯು ಅದರಂತೆ ಮಾಡುವೆನೆಂದು ಭರವಸೆಯನ್ನು ಕೊಟ್ಟಳು.

## ಬಕಾಸುರನ ವಧೆ

ರಾತ್ರಿಯು ಕಳೆದು ಬೆಳಗಾಯಿತು. ಭೀಮಸೇನನು ನರಭಕ್ಷಕ ಬಕಾಸುರನಿಗಾಗಿ ಶೇಖರಿಸಿದ್ದ ಆಹಾರವನ್ನು ತುಂಬಿಕೊಂಡು ಬಂಡಿಯ ಮೇಲೆ ಕುಳಿತು ಅರಣ್ಯಕ್ಕೆ ಹೊರಟನು. ಬಕಾಸುರನಿದ್ದ ಸ್ಥಳದ ಬಳಿಗೆ ಹೋಗುವ ಸಮಯದಲ್ಲಿ ಭೀಮಸೇನನು ಬಂಡಿಯಲ್ಲಿದ್ದ ಆಹಾರವನ್ನು ತಾನೇ ಭಕ್ಷಿಸಲಾರಂಭಿಸಿ, ಬಕಾಸುರನನ್ನು ಹೆಸರು ಹಿಡಿದು ಗಟ್ಟಿಯಾಗಿ ಕೂಗಿದನು. ಎಂದೂ ಕೇಳದ ಈ ಉದ್ಧತತನದ ಮಾತುಗಳನ್ನು ಕೇಳಿ ಬಕಾಸುರನು ಕೆರಳಿ ಕಿಡಿ ಕಿಡಿಯಾಗಿ, ಆಕರ್ಣಾಂತವಾಗಿ ಬಾಯ್ದೆರೆದು ಆರ್ಭಟಿಸುತ್ತ, ಕಣ್ಣುಗಳಿಂದ ಕೆಂಡಗಳನ್ನುಗುಳುತ್ತ ತನ್ನ ಕೆಂಗೂದಲನ್ನೂ ಕೆಮ್ಮೀಸೆ ಗಡ್ಡಗಳನ್ನೂ ಕೆದರಿಕೊಂಡು ಪರ್ವತಾ ಕಾರದಿಂದ ಭಯಂಕರ ರೂಪನಾಗಿ ಭೀಮಸೇನನಿದ್ದ ಸ್ಥಳಕ್ಕೆ ವೇಗವಾಗಿ ಬಂದನು. ತನಗಾಗಿಬಂದ ಆಹಾರವನ್ನು ಭೀಮಸೇನನು ತಿನ್ನುತ್ತಿದ್ದು ದನ್ನು ನೋಡಿ ಬಕಾಸುರನ ಕೋಪವು ಇಮ್ಮಡಿಸಿತು. ಆಗ ಅವನು ದುರ ದುರನೆ ನೋಡಿ, ಹಲ್ಲುಕಡಿದು, ಔಡುಗಚ್ಚಿ, ಆರ್ಭಟಿಸಿ, "ಯಾವನೋ ದುರಾತ್ಮಾ! ನನಗಾಗಿ ಬಂದ ಆಹಾರವನ್ನು ನನ್ನ ಎದು ರಲ್ಲಿಯೇ ತಿಂದು ನನ್ನಿಂದ ಯಮಲೋಕಕ್ಕೆ ಹೋಗಲಿಷ್ಟಪಟ್ಟಿರುವ ನೀಚನು ?" ಎಂದು ಗಜರಿದನು. ಭೀಮಸೇನನಾದರೋ, ಅವನ ಹರಟೆಗಳನ್ನೂ ಅವನ ಭಯಂಕರಾಕಾರವನ್ನೂ ಕೋಪವನ್ನೂ ಲೇಶ ಮಾತ್ರವೂ ಲಕ್ಷ್ಯಕ್ಕೇತಾರದೆ, ಬೇರೆ ಕಡೆಗೆ ತಿರುಗಿಕೊಂಡು ಅನ್ನವನ್ನೂ ಭಕ್ಷ್ಯಗಳನ್ನೂ ತಿನ್ನುತ್ತಲೇ ಇದ್ದನು. ಇದರಿಂದ ಬಕಾಸುರನಿಗೆ ಕೋಪವು ಮತ್ತಷ್ಟು ಹೆಚ್ಚಾಗಿ, ಅವನು ಘೋರಾರ್ಭಟದಿಂದ, ಎರಡು ತೋಳುಗಳನ್ನೂ ಎತ್ತಿ ಭೀಮಸೇನನನ್ನು ಕೊಲ್ಲಲು ಬಂದನು. ಆದರೂ ಶತ್ರುಸೂದನನಾದ ಭೀಮಸೇನನು ಅದನ್ನೂ ಲಕ್ಷಿಸದೆ, ಓರೆಗಣ್ಣಿಂದ ಮಾತ್ರವೇ ನೋಡಿ, ರಾಕ್ಷಸನ ಆಹಾರವನ್ನು ತಾನೇ ತಿನ್ನುತ್ತಲೇ ಇದ್ದನು. ಇದನ್ನು ನೋಡಿ ಸಹಿಸಲಾರದೆ ಬಕಾಸುರನು ಎರಡು ಕೈಗಳಿಂದಲೂ ವೃಕೋದರನನ್ನು ಕೊಲ್ಲಲು ಅವನ ಬೆನ್ನಿನ ಮೇಲೆ ಬಲವಾಗಿ ಗುದ್ದಿದನು. ಬಕಾಸುರನು ಅಷ್ಟು ಬಲವಾಗಿ ತನ್ನನ್ನು ಹೊಡೆದರೂ, ಭೀಮಸೇನನು ಅವನ ಕಡೆಗೆ ತಿರುಗಿಯಾದರೂ

ನೋಡದೆ, ತನ್ನ ಆಹಾರ ಭಕ್ಷಣಕಾರ್ಯದಲ್ಲಿಯೇ ಇದ್ದನು. ಇದರಿಂದ ಬಕಾಸುರನಿಗೆ ಉಂಟಾದ ರೋಷವು ಅಷ್ಟಿಷ್ಟಲ್ಲ. ಅವನು ಬಳಿಯಲ್ಲಿದ್ದ ಒಂದು ಭಾರಿಯಾದ ಮರವನ್ನು ಮುರಿದು ಅದರಿಂದ ಭೀಮನನ್ನು ಹೊಡೆಯಲು ತರುತ್ತಿದ್ದನು. ಈವರೆಗೆ ಭೀಮಸೇನನು ಸಾವಧಾನವಾಗಿ ಒಂದು ಅಗುಳನ್ನೂ ಬಿಡದಂತೆ ಆಹಾರವೆಲ್ಲವನ್ನೂ ತಿಂದು ಮುಗಿಸಿ ಕೈ ಬಾಯ್ಗಳನ್ನು ತೊಳೆದುಕೊಂಡು, ಸಂತೋಷದಿಂದ ಯುದ್ಧಕ್ಕೆ ಬಂದು ನಿಂತನು. ಆಗ ಬಕಾಸುರನು ರೋಷದಿಂದ ಭೀಮಸೇನನನ್ನು ತಾನು ತಂದಿದ್ದ ಮರದಿಂದ ಹೊಡೆಯಲು, ಭೀಮಸೇನನು ಲೀಲಾ ಮಂತ್ರದಿಂದ ಅದನ್ನು ತನ್ನ ಎಡಗೈಯಿಂದ ಹಿಡಿದನು. ತರುವಾಯ ಬಕನು ಇನ್ನೂ ಅನೇಕ ಮರಗಳನ್ನು ಮುರಿದು ತಂದು ಭೀಮಸೇನನ ಮೇಲೆ ಎಸೆದನು. ಅದರಂತೆ ಭೀಮಸೇನನೂ ನಾನಾವೃಕ್ಷಗಳನ್ನು ಮುರಿದು ತಂದು ಅವುಗಳಿಂದ ತನ್ನ ಶತ್ರುವನ್ನು ಮೈ ಮುರಿಯುವಂತೆ ಹೊಡೆದನು. ಹೀಗೆ ಅವರಿಬ್ಬರಿಗೂ ವೃಕ್ಷಗಳಿಂದಲೇ ಭಯಂಕರವಾದ ಯುದ್ಧವು ನಡೆಯಿತು. ಆ ಸುತ್ತು ಮುತ್ತಲಿದ್ದ ಮರಗಳೆಲ್ಲವೂ ನಿಶ್ಶೇಷ ವಾದವು. ಅನಂತರ ಬಕನು ರೋಷಾವೇಶದಿಂದ ನುಗ್ಗಿ, ಭೀಮಸೇನನ ಮೇಲೆ ಎರಗಿ, ಅವನನ್ನು ತನ್ನ ಎರಡು ಬಾಹುಗಳಿಂದಲೂ ಬಿಗಿದು ಎಳೆಯಲಾರಂಭಿಸಿದನು. ಭೀಮಸೇನನೂ ಸಹ ತನ್ನ ಬಲವಾದ ತೋಳುಗಳಿಂದ ಅವನನ್ನು ಬಿಗಿದು ಹಿಸಿಕಿ ಹಿಂಡಿ, ದರದರನೆ ಬಹಳ ದೂರ ಎಳೆದುಕೊಂಡು ಹೋದನು. ಈವರೆಗೆ ಬಕಾಸುರನು ಬಳಲಿ ಬಿದ್ದನು. ಭೀಮಸೇನನು ಅವನನ್ನು ತನ್ನ ಮೊಣಕಾಲುಗಳಿಂದ ನೆಲಕ್ಕೆ ಒತ್ತಿ ಎಡಗೈಯಿಂದ ಸೊಂಟವನ್ನು ಹಿಡಿದೊತ್ತಿ ಬಲಗೈಯಿಂದ ಅವನ ಕುತ್ತಿಗೆಯನ್ನು ಮುರಿದನು. ಆಗ ಕ್ರೂರ ಬಕಾಸುರನು ಭಯಂಕರವಾಗಿ ಅರಚಿ ರಕ್ತವನ್ನು ಕಾರಿ ಪ್ರಾಣಬಿಟ್ಟನು.

ಬಕಾಸುರನು ಪ್ರಾಣಹೋಗುವಾಗ ಅರಚಿದ ಭಯಂಕರಧ್ವನಿ ಯನ್ನು ಕೇಳಿ ಸುತ್ತಲೂ ಇದ್ದ ಅವನ ಬಂಧುಗಳು, ಅನುಯಾಯಿಗಳು, ಸೇವಕರೇ ಮೊದಲಾದವರು ಬಂದು ನೋಡಿ, ಬೆದರಿ ನಿಂತಿರಲು, ಶತ್ರು ಸೂದನನಾದ ಭೀಮಸೇನನು, ಅವರಿಗೆ ತಕ್ಕಂತೆ ಸಮಾಧಾನ ಹೇಳಿ, ಇನ್ನು ಮುಂದೆ ತಾವು ನರಮಾಂಸವನ್ನು ಭಕ್ಷಿಸುವುದಿಲ್ಲವೆಂದು

ಅವರಿಂದ ಪ್ರಾಣ್ಗ್ದಾನವನ್ನು ಮಾಡಿಸಿಕೊಂಡನು. ಮತ್ತು ಒಂದು ವೇಳೆ ಅವರು ಯಾರಾದರೂ ಮನುಷ್ಯರನ್ನು ಕೊಂದುದೇ ಆದರೆ ಬಕನಿಗೆ ಆದ ಗತಿಯೇ ಅವರಿಗೂ ಆಗುವುದೆಂದು ಎಚ್ಚರಿಕೆ ಹೇಳಿ ಕಳುಹಿಸಿದನು.

ಅಂದು ಮೊದಲಾಗಿ ಆ ರಾಕ್ಷಸರೆಲ್ಲರೂ ಗ್ರಾಮಸ್ಥರ ವಿಷಯದಲ್ಲಿ ಪರಮ ಶಾಂತಿಯಿಂದ ವರ್ತಿಸುತ್ತ ಬಂದರು. ಅನಂತರ ಭೀಮಸೇನನು ಯಾರಿಗೂ ಗೋಚರವಿಲ್ಲದಂತೆ ಆ ಬಕಾಸುರನ ಮೃತ ಶರೀರವನ್ನು ಆ ಊರಿನ ಹೆಬ್ಬಾಗಿಲಿನಲ್ಲಿ ಹಾಕಿ ಹೊರಟು ಹೋದನು. ಅದ್ಭುತ ಬಲಶಾಲಿಯಾಗಿದ್ದ ಬಕಾಸುರನ ವಧೆಯಾದುದನ್ನು ನೋಡಿ ಅವನ, ಬಂಧುಗಳಾದ ರಾಕ್ಷಸರೆಲ್ಲರೂ ಹೆದರಿ ದಿಕ್ಕು ದಿಕ್ಕುಗಳಿಗೂ ಓಡಿ ಹೋದರು.

ಭೀಮಸೇನನು ವಿಜಯಶಾಲಿಯಾಗಿ ಮನೆಗೆ ಬಂದು, ಯುಧಿಷ್ಠಿರನಿಗೆ ಎಲ್ಲ ವೃತ್ತಾಂತವನ್ನೂ ಸಮಗ್ರವಾಗಿ ತಿಳಿಸಿದನು. ಮಾರನೆಯ ಪ್ರಾತಃಕಾಲದಲ್ಲಿ ಜನರು ಊರುಬಾಗಿಲಿಗೆ ಬಂದು ಅಲ್ಲಿ ಪರ್ವತಾಕಾರದಿಂದ ಬಿದ್ದಿದ್ದ ಬಕಾಸುರನ ಮೃತ ಶರೀರವನ್ನು ನೋಡಿ ಪರಮಾಶ್ಚರ್ಯ ಸಂತೋಷಗಳಿಂದ ವಾರ್ತೆಯನ್ನು ಊರಲ್ಲಿ ಎಲ್ಲೆಲ್ಲಿಯೂ ಪ್ರಕಟಿಸಿದರು. ಅನಂತರ ಊರಿನ ಜನರು ಹೆಂಗಸರು ಮಕ್ಕಳೊಡನೆ ಪ್ರತಿಯೊಬ್ಬರೂ ಬಂದು ಬಕಾಸುರನ ಹೆಣವನ್ನು ನೋಡಿ ಊರಿಗಿದ್ದ ದೊಡ್ಡ ಕಂಟಕವು ನಿವಾರಣೆಯಾಯಿತೆಂದು ಸಂತೋಷಪಟ್ಟರು. ತರುವಾಯ ಎಲ್ಲರೂ ತಮ್ಮ ವಿಪತ್ತು ಪರಿಹಾರವಾದುದಕ್ಕಾಗಿ ದೇವರಿಗೆ ಕೃತಜ್ಞತೆಯಿಂದ ಪೂಜಾದಿಗಳನ್ನು ಮಾಡಿ ಸಂತೋಷ ಪಟ್ಟರು. ಅಲ್ಲದೆ, ಆ ಹಿಂದಿನ ದಿನದ ಸರದಿಯಾರದೆಂಬುದನ್ನು ತಿಳಿದು ಬ್ರಾಹ್ಮಣನ ಮನೆಗೆ ಬಂದು ಆತನನ್ನು ನೋಡಿ, ಯಾರಿಂದ ಇಂತಹ ಅದ್ಭುತ ಕಾರ್ಯವು ನಡೆದು ಜನೋಪಕಾರವಾಯಿತೆಂದು ಒತ್ತಿ ಒತ್ತಿ ಕೇಳಿದರು. ಆಗ ಆ ಬ್ರಾಹ್ಮಣನು ನಿಜಾಂಶವನ್ನು ಹೇಳಲು ಇಷ್ಟವಿಲ್ಲದಿದ್ದರೂ, ಅವರನ್ನು ನೋಡಿ, " ಸ್ವಾಮೀ, ನಾನು ನಿನ್ನೆಯ ದಿನ, ನನ್ನ ಸರದಿಯು ಬಂದುದರಿಂದ ನನ್ನ ಸ್ನೇಹಿತರೊಡನೆ ದುಃಖಿಸುತ್ತಿದ್ದುದನ್ನು ನೋಡಿ, ಮಂತ್ರಶಾಸ್ತ್ರಜ್ಞನೂ, ಉದಾರ ಶೀಲನೂ ಆದ ಬ್ರಾಹ್ಮಣನೊಬ್ಬನು

ನನ್ನನ್ನು ಹೆದರಬೇಡವೆಂದು ಸಂತೈಸಿ ತಾನು ಬಕಾಸುರನಿಗೆ ಆಹಾರವನ್ನು ತೆಗೆದುಕೊಂಡು ಹೋಗುವುದಾಗಿ ಹೇಳಿ ಅದರಂತೆ ಮಾಡಿದನು. ಪ್ರಾಯಶಃ ಆತನಿಂದಲೇ ಈ ಕಾರ್ಯವು ನಡೆದಿರಬಹುದು," ಎಂದು ಹೇಳಿದನು. ಇದನ್ನು ಕೇಳಿ ಚತುರ್ವರ್ಣದವರೂ ಪರಮಾಶ್ಚರ್ಯ ಸಂತೋಷಗಳಿಂದ ಹೋಗಿ ಬಕಾಸುರನ ಶವವನ್ನು ನೋಡಿಕೊಂಡು ಬಂದರು.

ಪಾಂಡವರು ಅದೇ ಊರಿನಲ್ಲಿ ವೇದಾಧ್ಯಯನ ಮಾಡಿಕೊಂಡು ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದರು.

## ದ್ರೌಪದೀಸ್ವಯಂವರ ವಾರ್ತೆ

ಕೆಲವು ದಿನಗಳ ಮೇಲೆ ಒಬ್ಬ ಶ್ರೋತ್ರಿಯ ಬ್ರಾಹ್ಮಣನು ಪರಸ್ಥಳದಿಂದ ಬಂದು ಪಾಂಡವರಿದ್ದ ಬ್ರಾಹ್ಮಣನ ಮನೆಯಲ್ಲಿಯೇ ಇಳಿದನು. ಆ ಮನೆಯ ಯಜಮಾನನು, ಬಹಳ ಯೋಗ್ಯನೂ ಉದಾರಿಯೂ ಆದುದರಿಂದ, ಆ ಊರಿಗೆ ಬಂದು ಹೋಗತಕ್ಕ ಬ್ರಾಹ್ಮಣರನೇಕರಿಗೆ ಭೋಜನ ವಸತಿಗಳನ್ನು ಕೊಟ್ಟು ಆದರಿಸುತ್ತಿದ್ದನು. ಹೊಸದಾಗಿ ಬಂದ ಬ್ರಾಹ್ಮಣನಿಗೂ ಪಾಂಡವರಿಗೂ ಪರಸ್ಪರ ಪರಿಚಯವಾಗಿ, ಆ ಬ್ರಾಹ್ಮಣನು ತಾನು ತಿರುಗಿಬಂದ ಕ್ಷೇತ್ರ, ತೀರ್ಥ, ನಗನಗರಾದಿಗಳ ವಿಚಾರಗಳೆಲ್ಲವನ್ನೂ ಹೇಳಿ, ಪಾಂಚಾಲ ದೇಶದ ಅರಸನಾದ ಯಜ್ಞಸೇನ ರಾಜನು ಅಯೋನಿಜೆಯಾದ ತನ್ನ ಮಗಳು ದ್ರೌಪದಿಗೆ ಸ್ವಯಂವರವನ್ನೇರ್ಪಡಿಸಿರುವ ವಿಚಾರವನ್ನು ತಿಳಿಸಿದನು, ಮತ್ತು ಆ ರಾಜನಿಗೆ ಶಿಖಂಡಿಯೆಂಬ ತನ್ನ ರಾಜ್ಞಿಯ ಗರ್ಭದಲ್ಲಿ ಉದಿಸಿದ ಪುತ್ರನೂ, ಧೃಷ್ಟದ್ಯುಮ್ನನೆಂಬ ಹೋಮಕುಂಡದಲ್ಲಿ ಉದಿಸಿದ ಪುತ್ರನೂ, ಇರುವರೆಂಬುದನ್ನೂ ಆ ಪುತ್ರರಿಬ್ಬರೂ ಅಸ್ತ್ರಶಸ್ತ್ರವಿದ್ಯಾಚಾರ್ಯನಾದ ದ್ರೋಣನಿಂದ ಧನುರ್ವಿದ್ಯೆಯನ್ನು ಕಲಿತು ಮಹಾ ವೀರರಾಗಿರುವರೆಂಬುದನ್ನೂ ಹೇಳಿದನು. ಇದನ್ನು ಕೇಳಿ ಪಾಂಡವರಿಗೆ ಆಶ್ಚರ್ಯವಾಯಿತು. ಅದಕ್ಕವರು ಆ ವಿಪ್ರನನ್ನು ಕುರಿತು, "ಭೂಸುರೋತ್ತಮಾ, ಧೃಷ್ಟದ್ಯುಮ್ನನು ಹೋಮಕುಂಡದಿಂದ ಹೇಗೆ ಹುಟ್ಟಿದನು? ದ್ರೌಪದಿಯು ಅಯೋನಿಜೆಯೆಂಬುದು ಹೇಗೆ? ದಯೆಯಿಟ್ಟು ವಿವರವಾಗಿ ತಿಳಿಸಬೇಕು," ಎಂಬುದಾಗಿ ಕೇಳಿಕೊಂಡರು. ಆಗ ಆ ಬ್ರಾಹ್ಮಣನು

ಧೃಷ್ಟದ್ಯುಮ್ನ ದ್ರೌಪದಿಯರ ಜನನ ವೃತ್ತಾಂತವನ್ನು ಅವರಿಗೆ ವಿವರಿಸಿ ಹೇಳಿದನು :

## ಧೃಷ್ಟದ್ಯುಮ್ನ ದ್ರೌಪದಿಯರ ಜನನ

ಪಾಂಡವರು ಬ್ರಾಹ್ಮಣರ ವೇಷದಿಂದಿದ್ದ ಕಾರಣ ಆ ಬ್ರಾಹ್ಮಣನು ಅವರನ್ನು ಕುರಿತು, "ಎಲೈ ವಿಪ್ರವರ್ಯರೇ ಕೇಳಿ: ಹಿಂದೆ ದ್ರುಪದ ರಾಜನು ತನ್ನ ಸ್ನೇಹಿತನೂ ಸಹಪಾಠಿಯೂ ಆಗಿದ್ದ ದ್ರೋಣನನ್ನು ತನ್ನ ಸ್ನೇಹಿತನಲ್ಲವೆಂದು ತಿರಸ್ಕರಿಸಿ, ತನ್ನ ವಾಗ್ದಾನಕ್ಕೆ ತಪ್ಪಿ ಅಹಂಕಾರದಿಂದ ಆತನನ್ನು ಧಿಕ್ಕರಿಸಿ ಕಳುಹಿಸಿದುದಕ್ಕಾಗಿ, ಸೇಡನ್ನು ತೀರಿಸಿಕೊಳ್ಳಲು ದ್ರೋಣನು ಶಪಥಮಾಡಿದ್ದಂತೆ, ತನ್ನ ಶಿಷ್ಯನಾದ ಅರ್ಜುನನಿಂದ ದ್ರುಪದರಾಜನನ್ನು ಪರಾಭವಿಸಿ ಹಿಡಿಸಿ ತರಿಸಿ, ಆತನ ರಾಜ್ಯವೆಲ್ಲವನ್ನೂ ಗೆದ್ದುಕೊಂಡಿದ್ದರೂ ಆತನಿಗೇ ದಯೆಯಿಂದ ಆತನ ಅರ್ಧ ರಾಜ್ಯವನ್ನು ಕೊಟ್ಟು ಕಳುಹಿಸಿದನು. ಇದರಿಂದ ವಿಶೇಷವಾಗಿ ಅವಮಾನ ಪಟ್ಟು ದ್ರುಪದ ರಾಜನು ದ್ರೋಣಾಚಾರ್ಯನನ್ನು ಕೊಲ್ಲತಕ್ಕ ಒಬ್ಬ ಪುತ್ರನೂ ಅರ್ಜುನನನ್ನು ಮದುವೆಯಾಗತಕ್ಕ ಒಬ್ಬ ಮಗಳೂ ತನಗೆ ಜನಿಸಬೇಕೆಂಬ ಉದ್ದೇಶದಿಂದ ನಾನಾ ವ್ರತೋಪವಾಸಾದಿಗಳನ್ನು ಮಾಡಿ, ಯಾವುದರಿಂದಲೂ ತನ್ನ ಇಷ್ಟವು ನೆರವೇರದೆ, ಕಡೆಗೆ ಅನೇಕ ಋಷ್ಯಾಶ್ರಮಗಳನ್ನು ತಿರುಗಿ, ತನ್ನ ಇಷ್ಟವು ನೆರವೇರುವ ಯಾಗವೊಂದನ್ನು ತನ್ನಿಂದ ಮಾಡಿಸಬಲ್ಲ ಮಹರ್ಷಿಯೊಬ್ಬನನ್ನು ಹುಡುಕುತ್ತ ಒಂದಾನೊಂದು ದಿನ ಗಂಗಾನದೀ ತೀರದಲ್ಲಿದ್ದ ಒಂದು ಋಷ್ಯಾಶ್ರಮಕ್ಕೆ ಬಂದನು. ಅಲ್ಲಿ, ಇಂದ್ರಿಯನಿಗ್ರಹಮಾಡಿ, ಕರ್ಮಠರಾಗಿ, ಶಾಸ್ತ್ರತತ್ವಗಳನ್ನು ಶೋಧನೆ ಮಾಡುತ್ತಿದ್ದ "ಯಾಜ" ಮತ್ತು "ಉಪಯಾಜ" ಎಂಬ ಕಾಶ್ಯಪವಂಶದ ಇಬ್ಬರು ಬ್ರಾಹ್ಮಣ ಮುನಿಗಳಿದ್ದರು. ಈ ಸೋದರರು ತನ್ನ ಕಾರ್ಯವನ್ನು ಸಾಧಿಸಿಕೊಡಲು ಶಕ್ತರೆಂದು ತಿಳಿದು ದ್ರುಪದ ರಾಜನು, ಪರಮ ಭಕ್ತಿಯಿಂದ ಅವರ ಸೇವೆಮಾಡಿ ತನಗೆ ಸಹಾಯ ಮಾಡುವಂತೆ ಪ್ರಾರ್ಥಿಸಿಕೊಂಡನು ; ಮತ್ತು ಅವರಿಬ್ಬರಲ್ಲಿ ಚಿಕ್ಕವನಾದ ಉಪಯಾಜನೇ ಪರಮಶಕ್ತನೆಂದು ದ್ರುಪದ ರಾಜನಿಗೆ ತೋರಿದ ಕಾರಣ, ಒಂದು ವರ್ಷಕಾಲ ಬಹಳ ಭಕ್ತಿಯಿಂದ ಆತನ

ಸೇವೆಮಾಡಿ, ಅವನಿಗೆ ತನ್ನ ಇಷ್ಟಾರ್ಥಗಳನ್ನು ತಿಳಿಸಿದನು. ಉಪ ಜಾಜನು ನಿಸ್ಪೃಹನೂ, ನಿರಾಶಾಚಿತ್ತನೂ ಆದುದರಿಂದ, ದ್ರುಪದ ರಾಜನು ತನಗೆ ಕೊಡುವುದಾಗಿ ಹೇಳಿದ ಹತ್ತು ಸಾವಿರ ಗೋವುಗಳನ್ನು ತನಗೆ ಬೇಡವೆಂದು ತಿರಸ್ಕರಿಸಿ, ತನ್ನ ಅಣ್ಣನಾದ ಜಾಜಮುನಿಯು ಆ ರಾಜನ ಇಷ್ಟದಂತೆ ಯಾಗ ಮಾಡಿಸಲು ಸಮರ್ಥನೆಂದು ಹೇಳಿ, ದ್ರುಪದನನ್ನು ಆತನ ಬಳಿಗೆ ಕಳುಹಿಸಿದನು. ಅದರಂತೆ ಯಜ್ಞಸೇನ ರಾಜನು (ದ್ರುಪದ) ಜಾಜಮಹರ್ಷಿಯ ಬಳಿಗೆ ಬಂದು ನಮಸ್ಕರಿಸಿ, "ಸ್ವಾಮೀ, ಕೌರವರ ಅಸ್ತ್ರ ವಿದ್ಯಾಚಾರ್ಯನಾದ ದ್ರೋಣನಿಂದ ನಾನು ಬಹಳ ಅವಮಾನಿತನಾಗಿದ್ದೇನೆ. ಅವನ ಶಿಷ್ಯನಾದ ಅರ್ಜುನನಿಂದ ಪರಾಭವವನ್ನೂ ನಷ್ಟವನ್ನೂ ಹೊಂದಿದ್ದೇನೆ. ಅದರಿಂದ ಬ್ರಹ್ಮಕ್ಷಾತ್ರ ತೇಜಗಳೆರಡೂ ಸೇರಿ ಮೂರ್ತೀಭವಿಸಿದಂತೆ ಅಜಯ್ಯನಾಗಿರುವ ಆ ದ್ರೋಣನನ್ನು ಸಂಹರಿಸುವ ಪುತ್ರನನ್ನೂ, ಅತ್ಯಂತ ಪರಾಕ್ರಮಶಾಲಿ ಯಾದ ಅವನ ಶಿಷ್ಯ ಅರ್ಜುನನನ್ನು ವರಿಸುವಂತಹ ಪುತ್ರಿಯನ್ನೂ ನಾನು ಪಡೆಯುವಂತೆ ತಾವು ನನ್ನಿಂದ ಯಜ್ಞವನ್ನು ಮಾಡಿಸಿ ನನ್ನ ಇಷ್ಟಾರ್ಥವನ್ನು ಸಫಲಗೊಳಿಸುವುದಾದರೆ, ತಮಗೆ ಒಂದು ಕೋಟಿ ಗೋವುಗಳನ್ನು ಅರ್ಪಿಸುವೆನು," ಎಂಬುದಾಗಿ ವಿನಯದಿಂದ ಪ್ರಾರ್ಥಿಸಿ ಕೊಂಡನು. ಜಾಜ ಮಹರ್ಷಿಯು ಅದಕ್ಕೆ ಒಪ್ಪಿ, ತಮ್ಮನಾದ ಉಪ ಜಾಜನನ್ನೂ ತನ್ನ ಸಹಾಯಕ್ಕೆ ಕರೆದುಕೊಂಡು, ದ್ರುಪದ ರಾಜನ ಮೂಲಕ ಯಜ್ಞಸಾಮಗ್ರಿಗಳನ್ನು ತರಿಸಿ ಆ ಮಹಾಯಜ್ಞವನ್ನಾರಂಭಿಸಿ ದನು. ದ್ರುಪದ ರಾಜನು ಜಾಜ ಮಹರ್ಷಿಯನ್ನು ಕುರಿತು, "ಮಹಾ ಸ್ವಾಮೀ, ನಾನು ಕೇವಲ ಕ್ಷಾತ್ರತೇಜಸ್ಸಿನವನು ಮಾತ್ರವೇ. ತಾವಾದರೋ ತಮ್ಮ ಅದ್ಭುತವಾದ ಬ್ರಹ್ಮತೇಜಸ್ಸಿನಿಂದ ದ್ರೋಣನನ್ನು ಮೀರಿಸಿರುವಿರಿ; ಅದರಿಂದ ಆ ಬ್ರಹ್ಮತೇಜಸ್ಸನ್ನು ಅನುಗ್ರಹಿಸಿ ನನಗೆ ದ್ರೋಣನನ್ನು ವಧಿಸುವಂತಹ ಪುತ್ರನನ್ನು ಕರುಣಿಸಬೇಕು," ಎಂಬು ದಾಗಿ ಬೇಡಿಕೊಂಡನು. ಜಾಜ ಮಹರ್ಷಿಯು ಒಪ್ಪಿ, ಅದರಂತೆಯೇ ವಿಧಿಕ್ರಮದಿಂದ ಯಾಗಮಾಡಿ ಅಗ್ನಿಗೆ ಪೂರ್ಣಾಹುತಿಯನ್ನು ಹಾಕಿ ದೊಡನೆಯೇ ಆ ಉರಿಯ ಮಧ್ಯದಲ್ಲಿ ಅದ್ಭುತವಾದ ದೇವತಾತೇಜಸ್ಸಿ ನಿಂದ ಒಬ್ಬ ಬಾಲಕನು ಉದಯಿಸಿದನು. ಅವನೂ ಅಗ್ನಿಯಂತೆಯೇ

ಪ್ರಬಲ ತೇಜಸ್ವಿಯಾಗಿಯೂ ನೋಡುವುದಕ್ಕೆ ಭಯಂಕರನಾಗಿಯೂ ಇದ್ದನು. ಅವನು ಕವಚ ಕಿರೀಟಗಳನ್ನು ಧರಿಸಿದ್ದುದಲ್ಲದೆ, ಕೈಗಳಲ್ಲಿ ಖಡ್ಗವನ್ನೂ ಧನುರ್ಬಾಣಗಳನ್ನೂ ಧರಿಸಿ ಭಯಂಕರವಾಗಿ ಆರ್ಭಟಿಸಿದನು. ಹುಟ್ಟಿದ ಒಡನೆಯೇ ಅವನು ಒಂದು ದಿವ್ಯವಾದ ರಥದಲ್ಲಿ ಕುಳಿತು ಸಂಚಾರ ಹೊರಟನು. ಇದನ್ನು ನೋಡಿ ಪಾಂಚಾಲ ದೇಶದ ಪ್ರಜೆಗಳೆಲ್ಲರೂ ಅತ್ಯಾನಂದ ಪಟ್ಟರು. "ದ್ರೋಣನನ್ನು ಕೊಲ್ಲುವ ರಾಜಕುಮಾರನು ಜನಿಸಿರುವನು. ಇವನು ಈ ಪಾಂಚಾಲ ದೇಶದ ಪ್ರಜೆಗಳೆಲ್ಲರ ಕಷ್ಟವನ್ನೂ ಪರಿಹರಿಸುವುದಲ್ಲದೆ, ದ್ರುಪದ ರಾಜನ ವ್ಯಥೆಯನ್ನೂ ಕಡೆಮಾಡುವನು," ಎಂಬದಾಗಿ ಗಟ್ಟಿಯಾದ ಅಶರೀರವಾಣಿಯೊಂದು ಕೇಳಿಸಿತು.

ಅನಂತರ ಯಜ್ಞಕುಂಡದ ಅಗ್ನಿಯಿಂದ ಸುಂದರಿಯೂ ಭಾಗ್ಯವತಿಯೂ ಆದ ಪಾಂಚಾಲಿ ಎಂಬ ಕನ್ಯೆಯು ಉದ್ಭವಿಸಿದಳು. ಅವಳ ಬಣ್ಣವು ಕಪ್ಪು. ಅವಳ ಕಣ್ಣುಗಳೂ ಕೂದಲೂ ಮತ್ತು ಅಂಗಾಂಗಗಳೂ ಬಹು ಸುಂದರವಾಗಿದ್ದುವಲ್ಲದೆ, ಅವಳು ಭೂಲೋಕದಲ್ಲಿ ಮನುಷ್ಯಸ್ತ್ರೀಯಾಗಿ ಜನಿಸಿದ ದೇವತಾಕನ್ಯೆಯೇ ಆಗಿದ್ದಳು. ಅವಳ ಶರೀರವೆಲ್ಲವೂ ಕನ್ನೈದಿಲೆಯ ವಾಸನೆಯಿಂದ ಕೂಡಿ, ಸುತ್ತಲೂ ಒಂದು ಹರದಾರಿ ದೂರದವರೆಗೂ ಸುಗಂಧವನ್ನು ಬೀರುತ್ತಿತ್ತು. ಇವಳಂತಹ ಸುಂದರಸ್ತ್ರೀಯು ಭೂಲೋಕದಲ್ಲಿ ಮತ್ತೆ ಯಾವಳೂ ಇರಲಿಲ್ಲ. ಇವಳ ಸೌಂದರ್ಯವು ದೇವದಾನವಯಕ್ಷಾದಿಗಳನ್ನೂ ಮೋಹಗೊಳಿಸುವಂತೆ ಇದ್ದಿತು ಇವಳು ಜನಿಸಿದ ಕೂಡಲೇ, ಅಂತರಿಕ್ಷದಿಂದ ಒಂದು ಅಶರೀರವಾಣಿಯು ಕೇಳಿಸಿತು. ಏನೆಂದರೆ: "ಈ ಸುಂದರ ಕನ್ಯೆಯು ಬಣ್ಣದಲ್ಲಿ ಕಪ್ಪಾಗಿದ್ದರೂ ಸ್ತ್ರೀ ಜಾತಿಯಲ್ಲಿಯೇ ಅತ್ಯುತ್ತಮಳಾಗುವಳು. ಮತ್ತು ಲೋಕದಲ್ಲಿ ಕ್ಷತ್ರಿಯರ ನಾಶಕ್ಕೆ ಕಾರಣವಾಗುವಳು. ಅಲ್ಲದೆ, ಈಕೆಯು ಕೆಲವು ದಿನಗಳಲ್ಲಿಯೇ ದೇವತೆಗಳು ಮಾಡುವಂತಹ ಕಾರ್ಯಗಳನ್ನು ಮಾಡುವಳು. ಈಕೆಯಿಂದ ಕೌರವರಿಗೆ ಅನೇಕ ಅಪಾಯ-ಸಂಧಿಗಳೊದಗುವವು."

ಇದನ್ನು ಕೇಳಿದೊಡನೆಯೇ ಪಾಂಚಾಲದ ಪ್ರಜೆಗಳೆಲ್ಲರೂ ಅತ್ಯಾನಂದ ಭರಿತರಾಗಿ, ದಿಕ್ತಟಗಳು ಪ್ರತಿಧ್ವನಿಗೊಡುವಂತೆ ಕೋಲಾಹಲ

ವನ್ನು ಮಾಡಿದರು. ಈ ಬಾಲಕ ಬಾಲಿಕೆಯರನ್ನು ನೋಡಿ ದ್ರುಪದ ರಾಜನ (ಯಜ್ಞಸೇನನ) ಪತ್ನಿಯು ಜಾಜ ಮಹರ್ಷಿಯ ಬಳಿಗೆ ಬಂದು, " ಸ್ವಾಮೀ, ಈ ಮಕ್ಕಳಿಬ್ಬರೂ ನನ್ನನ್ನೇ ತಾಯಿಯೆಂದು ಪ್ರೀತಿಸುವಂತೆ ತಾವು ಅನುಗ್ರಹಿಸಬೇಕು," ಎಂದು ಬೇಡಿಕೊಂಡಳು. ಆಗ ಜಾಜ ಮುನಿಯು ದ್ರುಪದರಾಜನ ಹಿತಾರ್ಥವಾಗಿ, " ಹಾಗೆಯೇ ಆಗಲಿ " ಎಂದು ಅನುಗ್ರಹಿಸಿದನು. ಯಜ್ಞಕ್ಕೆ ಬಂದಿದ್ದ ಭೂಸುರರು ಯಥೇಚ್ಛ ವಾದ ದಾನ ದಕ್ಷಿಣಾದಿಗಳಿಂದ ತೃಪ್ತರಾಗಿ ಆ ಮಕ್ಕಳಿಬ್ಬರಿಗೂ ನಾಮಕರಣಕ್ಕೆ ಹೆಸರುಗಳನ್ನು ಗೊತ್ತುಮಾಡಿದರು. ಆ ಬಾಲಕನು ಧೀರನೂ ಪರಾಕ್ರಮಶಾಲಿಯೂ ಆಗಿ, ಕವಚ ಕುಂಡಲ ಕಿರೀಟ ಶಸ್ತ್ರಾಸ್ತ್ರಧನುಸ್ಸುಗಳಿಂದ ಕೂಡಿ, ಪರಮೋತ್ಸಾಹ ಭರಿತನಾಗಿ ಜನಿಸಿದ ವನಾದುದರಿಂದ ಅವನಿಗೆ ಧೃಷ್ಟದ್ಯುಮ್ನನೆಂತಲೂ ಆ ಕನ್ಯೆಯು ನೋಡು ವುದಕ್ಕೆ ಕಪ್ಪಾಗಿದ್ದುದರಿಂದ ಅವಳಿಗೆ " ಕೃಷ್ಣಾ " ಎಂತಲೂ ಹೆಸರು ಗಳನ್ನಿಟ್ಟರು. ಈಗ ಆ ಕೃಷ್ಣಾದೇವಿಗೆ ಸ್ವಯಂವರವೇರ್ಪಟ್ಟಿರುವುದು. ದ್ರೋಣಾಚಾರ್ಯನು, ಹಿಂದೆ ದ್ರುಪದ ರಾಜನಿಂದ ತಾನು ಅರ್ಧರಾಜ್ಯ ವನ್ನು ತೆಗೆದುಕೊಂಡುದಕ್ಕಾಗಿ, ಆತನ ಮಗನಾದ ಧೃಷ್ಟದ್ಯುಮ್ನನನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡು ಅವನಿಗೆ ಅಸ್ತ್ರಶಸ್ತ್ರಾದಿಗಳ ವಿದ್ಯೆ ಯನ್ನು ಸಂಪೂರ್ಣವಾಗಿಯೂ ಚನ್ನಾಗಿಯೂ ಕಲಿಸಿಕೊಟ್ಟನು. ಮುಂದೆ ಅವನಿಂದ ತನಗೆ ಯಾವ ಪ್ರತಿಕ್ರಿಯೆ ಯಾಗುವುದೆಂಬುದ ನ್ನಾಲೋಚಿಸದೆ ದ್ರೋಣಾಚಾರ್ಯನು ಧೃಷ್ಟದ್ಯುಮ್ನನನ್ನು ಸಮರ ವಿದ್ಯಾಪಾರಂಗತನನ್ನಾಗಿ ಮಾಡಿದನು — ಎಂಬುದಾಗಿ ಬ್ರಾಹ್ಮಣನು ಯುಧಿಷ್ಠಿರಾದಿಗಳಿಗೆ ಹೇಳಿದನು.

## ಅಧ್ಯಾಯ ೧೩

## ವ್ಯಾಸ ಸಂದರ್ಶನ— ಪಾಂಚಾಲನಗರ ಪ್ರಯಾಣ

ಧೃಷ್ಟದ್ಯುಮ್ನ ದ್ರೌಪದಿಯರ (ಪಾಂಚಾಲಿ) ಜನನ ವೃತ್ತಾಂತವನ್ನೂ ದ್ರೌಪದೀ ಸ್ವಯಂವರದ ವಿಚಾರವನ್ನೂ ಕೇಳಿ ಯುಧಿಷ್ಠಿರಾದಿಗಳಿಗೆ ಮನಸ್ಸು ಬಹಳ ಚಪಲವಾಯಿತು. ಕುಂತೀದೇವಿಗೂ ಈ ವಿಚಾರವು ಮನಸ್ಸಿಗೆ ಬಂದುದರಿಂದ ತಾಯಿ ಮಕ್ಕಳೆಲ್ಲರೂ ಸೇರಿ ಆಲೋಚಿಸಿ, ಇನ್ನು ತಾವು ಏಕಚಕ್ರನಗರವನ್ನು ಬಿಟ್ಟು ಪಾಂಚಾಲ ನಗರಕ್ಕೆ ಪ್ರಯಾಣಮಾಡಬೇಕೆಂಬುದಾಗಿ ನಿರ್ಧರಿಸಿಕೊಂಡರು. ಹೀಗೆ ಅವರು ವೇಷಾಂತರಗಳಿಂದ ಪ್ರಯಾಣಮಾಡುತ್ತಿರಲು, ಮಾರ್ಗದಲ್ಲಿ, ಸತ್ಯವತೀದೇವಿಯ ಪುತ್ರನಾದ ವೇದವ್ಯಾಸಮಹರ್ಷಿಯು ಅವರನ್ನು ನೋಡಲು ಬಂದನು. ಆಗ ಪಾಂಡವರು ಆತನಿಗೆ ನಮಸ್ಕರಿಸಲು, ವ್ಯಾಸಮಹರ್ಷಿಯು ಬಹಳ ಸಂತೋಷಪಟ್ಟು, ಅವರುಗಳು ಧರ್ಮಪರಾಯಣರಾಗಿ ಸಾತ್ವಿಕರೀತಿಯಿಂದ ಜೀವನ ಮಾಡಿಕೊಂಡಿರುವುದನ್ನು ತಿಳಿದು ಮೆಚ್ಚಿ, ಅನೇಕ ವಿಚಾರಗಳನ್ನು ಕುರಿತು ಮಾತನಾಡುತ್ತ ಹೀಗೆಂದನು: "ಮಕ್ಕಳಿರಾ, ಕೇಳಿ, ಹಿಂದೆ ಒಂದು ಅರಣ್ಯದಲ್ಲಿ ಒಬ್ಬ ಮಹಾ ತಪಸ್ವಿಯಿದ್ದನು. ಆತನಿಗೆ ಪರಮಸೌಂದರ್ಯವತಿಯಾದ ಪುತ್ರಿಯೊಬ್ಬಳಿದ್ದಳು. ಅವಳಿಗೆ ಪೂರ್ವಜನ್ಮದ ಕರ್ಮದ ಫಲವಾಗಿ ಸರಿಯಾದ ವರನೊಬ್ಬನು ದೊರೆಯದೆ, ಅವಳು ಅವಿವಾಹಿತೆಯಾಗಿಯೇ ಇದ್ದಳು. ಅದರಿಂದ ಅವಳು ಬಹಳ ದುಃಖಪಟ್ಟು ತನಗೆ ತಕ್ಕಂತಹ ಉತ್ತಮನಾದ ಪತಿಯನ್ನು ಕರುಣಿಸಬೇಕೆಂದು ಪ್ರಾರ್ಥಿಸಿ, ಶಂಕರನನ್ನು ಕುರಿತು ಮಹಾ ತಪಸ್ಸನ್ನಾಚರಿಸಿದಳು. ಅದಕ್ಕೆ ಮಹಾದೇವನು ಮೆಚ್ಚಿ ಪ್ರಸನ್ನನಾಗಿ ಬಂದು ಅವಳನ್ನು ಕುರಿತು, 'ಮಗಳೇ, ನಿನ್ನ ಇಷ್ಟಾರ್ಥವೇನು? ಹೇಳು, ಕೊಡುವೆನು,' ಎಂದನು. ಅದಕ್ಕೆ ಪತಿಯನ್ನು ಪಡೆಯಲು ಅತ್ಯಾತುರಳಾಗಿದ್ದ ಆ ತಾಪಸ ಕನ್ಯೆಯು, 'ಪರಮೇಶ್ವರ, ಪತಿಂದೇಹಿ, ಪತಿಂದೇಹಿ, ಪತಿಂದೇಹಿ, ಪತಿಂದೇಹಿ, ಪತಿಂದೇಹಿ,' ಎಂಬುದಾಗಿ ಪ್ರಾರ್ಥಿಸಿಕೊಂಡಳು. ಆಗ ಸದಾಶಿವನು, 'ಮಗಳೇ, ನೀನು ಐದಾವೃತ್ತಿ

'**ಪತಿಂದೇಹಿ**' ಎಂಬುದಾಗಿ ಕೇಳಿಕೊಂಡೆಯಾದುದರಿಂದ ಭರತ ವಂಶದ ಐದು ಮಂದಿ ರಾಜಕುಮಾರರು ನಿನಗೆ ಪತಿಗಳಾಗುವರು,' ಎಂದು ವರವನ್ನನುಗ್ರಹಿಸಿ ಮಾಯವಾದನು. ಆದೇ ತಾಪಸಕನ್ಯೆಯೇ ಈಗ ದ್ರುಪದ ರಾಜನಿಗೆ ಪುತ್ರಿಯಾಗಿ ಜನಿಸಿರುವಳು. ಆ ದ್ರುಪದ ಪುತ್ರಿಯು ನಿಮ್ಮ ಐದು ಮಂದಿಗೂ ಪತ್ನಿಯಾಗಬೇಕೆಂಬುದೇ ದೈವ ಸಂಕಲ್ಪವು. ಆದಕಾರಣ ನೀವುಗಳು ಪಾಂಚಾಲ ನಗರಕ್ಕೆ ಹೋಗಿ ಅಲ್ಲಿ ವಾಸವಾಗಿರಿ. ಆ ಕನ್ಯೆಯನ್ನು ನೀವು ಮದುವೆಯಾಗುವಿರಿ," ಎಂಬುದಾಗಿ ಹೇಳಿ ಮೊಮ್ಮಕ್ಕಳನ್ನು ಆಶೀರ್ವದಿಸಿ, ವ್ಯಾಸ ಮಹರ್ಷಿಯು ಹೊರಟು ಹೋದನು.

## ಅರ್ಜುನನು ಅಂಗಾರಪರ್ಣನನ್ನು ಜಯಿಸುವಿಕೆ

ಅನಂತರ ಪಾಂಡುನಂದನರು ಜನನಿಯೊಡನೆ ಸಂತೋಷ ಚಿತ್ತ ದಿಂದ ಉತ್ತರಾಭಿಮುಖವಾಗಿ ಹೊರಟು, ರಾತ್ರಿಯೂ ಹಗಲೂ ಪ್ರಯಾಣಮಾಡುತ್ತ ಹೋದರು. ಒಂದು ದಿನ ಅರ್ಧರಾತ್ರಿಯಲ್ಲಿ ಅರ್ಜುನನು ಒಂದು ಕೊಳ್ಳಿಯನ್ನು ಹಿಡಿದು ಸೋದರರಿಗೂ ತಾಯಿಗೂ ದಾರಿಯನ್ನು ತೋರಿಸುತ್ತ ಕರೆದುಕೊಂಡು ಗಂಗಾನದಿಯ **ಸೋಮಶ್ರವ** ವೆಂಬ ತೀರ್ಥದ ಬಳಿಗೆ ಬಂದನು. ನಿರಾತಂಕವಾಗಿಯೂ ನಿಶ್ಶಬ್ದ ವಾಗಿಯೂ ಇದ್ದ ಆ ಸಮಯದಲ್ಲಿ, **ಅಂಗಾರಪರ್ಣ**ನೆಂಬ ಗಂಧರ್ವನು ತನ್ನ ಪತ್ನಿಯರೊಡಗೂಡಿ, ಆ ಗಂಗಾನದಿಯಲ್ಲಿ ಜಲಕ್ರೀಡಾಸಕ್ತ ನಾಗಿದ್ದನು. ಪಾಂಡವರ ಹೆಜ್ಜೆಯ ಸಪ್ಪಳವು ಕೇಳಿಸಲು, ಗರ್ವಿಷ್ಠ ನಾದ ಆ ಗಂಧರ್ವನು ಕೆರಳಿ ಧನುಸ್ಸನ್ನು ತೆಗೆದುಕೊಂಡು, "ಎಲೈ, ದೂರನಿಲ್ಲಿ, ಅರ್ಧರಾತ್ರಿಯ ಸಮಯವೂ ಎರಡು ಸಂಧ್ಯಾಸಮಯ ಗಳೂ ಸಹ, ಭೂತ, ಯಕ್ಷ, ರಾಕ್ಷಸ, ಗಂಧರ್ವರ ಯಥೇಷ್ಟವಾದ ಸಂಚಾರದ ಕಾಲಗಳು. ಈ ಸಮಯದಲ್ಲಿ ಬರತಕ್ಕವರು ಎಂತಹ ಪ್ರಬಲ ರಾದರೂ, ರಾಜರೇ ಆದರೂ, ನಾವು ಅವರನ್ನು ನಿಗ್ರಹಿಸುವೆವು. ಹೀಗಿರು ವಲ್ಲಿ, ಕುಬೇರನ ಮಿತ್ರನೂ, ಅಸಹಾಯಶೂರನೂ ಆಗಿ 'ಅಂಗಾರ ಪರ್ಣ' ಎಂಬ ಹೆಸರಿನಿಂದ ಪ್ರಕಾಶಿಸುತ್ತಿರುವ ನಾನು ನನಗೆ ಸೇರಿದ ಈ ಅಡವಿಯಲ್ಲಿ ಹರಿಯುವ ಈ ಗಂಗಾನದಿಯಲ್ಲಿ, ವಿನೋದಾರ್ಥವಾಗಿ

ಜಲಕೇಳಿಯಾಡುತ್ತಿರುವ ಸಮಯದಲ್ಲಿ, ಮಾನವರಾದ ನೀವುಗಳು ಇಲ್ಲಿಗೆ ಹೇಗೆ ಕಾಲಿಟ್ಟಿರಿ? ಇಲ್ಲಿಗೆ ಬರಲು ನಿಮಗೆಷ್ಟು ಧೈರ್ಯವು? ಅಲಕಾಧೀಶ್ವರನ ಕಿರೀಟರತ್ನದಂತಿರುವ ಈ ವೀರನಾದ ಅಂಗಾರ ಪರ್ಣನ ಬಳಿಗೆ ಬರಲು ನೀವು ಅರ್ಹರೇ? ಛೀ! ನಡೆಯಿರಿ! ಮುಂದಕ್ಕೆ ಅಡಿಯಿಟ್ಟೀರಿ!" ಎಂಬದಾಗಿ ಕೆರಳಿ ರಭಸದಿಂದ ಅವರನ್ನು ದೂಡಲು ಪ್ರಯತ್ನಿಸಿದನು. ಅದನ್ನು ಕೇಳಿ ಅರ್ಜುನನು ಕ್ರೋಧಾವಿಷ್ಟನಾಗಿ, ಅವನನ್ನು ಕುರಿತು, "ಎಲವೋ ಅಯೋಗ್ಯಾ! ರಾತ್ರಿಯಾಗಲಿ, ಹಗಲಾಗಲಿ, ಸಂಧ್ಯೆಯಾಗಲಿ ಗಂಗಾಜಲವನ್ನು ಪ್ರವೇಶಿಸಿ ಸ್ನಾನಮಾಡುವುದಕ್ಕೂ ಪಾನಮಾಡುವುದಕ್ಕೂ ಯಾರಿಗಾದರೂ ಅಡ್ಡಿಯುಂಟೇ? ಈ ಅಪಾಯವು ನಿನ್ನದಾದ ಮಾತ್ರಕ್ಕೇ, ಸಮುದ್ರಕ್ಕೂ ಹಿಮಾಲಯ ಪರ್ವತಕ್ಕೂ ಈ ಗಂಗಾನದಿಗೂ ನಿನ್ನ ಆಧಿಪತ್ಯವು ಅನ್ವಯಿಸುವುದೇ? ಪವಿತ್ರವಾದ ಗಂಗಾನದಿಗೆ ಬರಲು ಎಂಥವನಿಗಾಗಲಿ ಹಗಲು ರಾತ್ರಿಗಳೆಂಬ ಭೇದವೇನೂ ಇಲ್ಲ. ಎಲವೋ ದುಷ್ಟಾ! ನಿನ್ನೊಡನೆ ಕಾದಿ ಗೆಲ್ಲಲು ಶಕ್ತಿಯಿಲ್ಲದ ದುರ್ಬಲರು ನಿನ್ನನ್ನು ಗೌರವಿಸಿ ಪೂಜಿಸಬಹುದು. ಪ್ರಬಲರಾದ ನಾವುಗಳು, ಪವಿತ್ರವಾದ ತ್ರಿಪಥಗಾಮಿನಿಯಾದ ಮತ್ತು ಸೇವಿಸುವ ಜನರ ಪಾಪಗಳನ್ನು ಪರಿಹರಿಸುವ ಈ ಪಾವನ ಗಂಗಾಜಲವನ್ನು ಮುಟ್ಟಲಾಗದೆಂದು ನೀನು ಹೇಳಲು ಕಾರಣವೇನು?" ಎಂದು ಪ್ರತಿಭಟಿಸಿ ನುಡಿದನು.

ಇದನ್ನು ಕೇಳಿದ ಅಂಗಾರಪರ್ಣನಿಗೆ ಕೋಪವು ಮಿತಿ ಮೀರಿತು. ಆಗ ಅವನು ಉರಿಯುವ ಅಂಗಾರದಂತೆ ಕಣ್ಣುಗಳಿಂದ ಕೆಂಡಗಳನ್ನು ಸುರಿಸುತ್ತ, ಧನುಷ್ಟಂಕಾರಮಾಡಿ, ವಿಷಸರ್ಪಗಳಂತಿದ್ದ ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಆಗ ಧನಂಜಯನು (ಅರ್ಜುನನು) ಅವುಗಳನ್ನು ಚಾತುರ್ಯದಿಂದ ನಿವಾರಿಸಿಕೊಂಡು, ತನ್ನ ಕೈಯಲ್ಲಿದ್ದ ಕೊಳ್ಳಿಯಿಂದ ಗಂಧರ್ವನಿಗೆ ಎಚ್ಚರಿಕೆಯನ್ನು ಹೇಳುತ್ತ, "ಎಲವೋ ಬಡ ಗಂಧರ್ವಾ! ಧನುರ್ವಿದ್ಯೆ ಬಾರದವರನ್ನು ಹೆದರಿಸುವಂತೆ ನಮ್ಮನ್ನು ಹೆದರಿಸುವೆಯಾ? ನಮ್ಮ ಮುಂದೆ ನಿನ್ನ ಬಾಣಗಳು ಸೂರ್ಯನ ಎದುರಲ್ಲಿ ಹಿಮವು ಮಾಯವಾಗುವಂತೆ ವ್ಯರ್ಥವಾಗುವುವು. ನೋಡುತ್ತಿರು. ಗಂಧರ್ವರು ಮಾನವರಿಗಿಂತಲೂ

ಪ್ರಬಲಶಕ್ತಿವಂತರೆಂಬುದನ್ನು ನಾನು ಬಲ್ಲೆನು. ಆದರಿಂದಲೇ ಯಾವ ಮಾಯಾಮಂತ್ರ ಶಕ್ತಿಗಳನ್ನೂ ಪ್ರಯೋಗಿಸದೆ, ನಿನ್ನ ಮೇಲೆ ದೇವ ಲೋಕದ ಅಸ್ತ್ರಗಳನ್ನೇ ಪ್ರಯೋಗಿಸುವೆನು. ಇದೋ! ನಮ್ಮ ಗುರುಗಳಾದ ದ್ರೋಣಾಚಾರ್ಯರಿಂದ ಉಪದಿಷ್ಟವಾದ ಈ ಮಹಾಸ್ತ್ರವನ್ನು ನಿನ್ನ ಮೇಲೆ ಪ್ರಯೋಗಿಸುವೆನು," ಎಂಬದಾಗಿ ಹೇಳಿ ಕೋಪಾವೇಶದಿಂದ, ಉರಿಯುವ ಆಗ್ನೇಯಾಸ್ತ್ರವನ್ನು ಅಂಗಾರಪರ್ಣನ ಮೇಲೆ ಪ್ರಯೋಗಿಸಿದನು. ಕೂಡಲೇ ಆ ಅಸ್ತ್ರವು ಗಂಧರ್ವನ ರಥವನ್ನು ಧಗ್ಗನೆ ಉರಿಸಿಬಿಟ್ಟಿತು. ರಥದಲ್ಲಿದ್ದ ಅಂಗಾರಪರ್ಣನು ಅಸ್ತ್ರಘಾತದಿಂದ ಮೂರ್ಛೆಹೊಂದಿ ತಲೆಕೆಳಗಾಗಿ ನೆಲಕ್ಕೆಬಿದ್ದನು. ಆಗ ಧನಂಜಯನು, ಅವನ ಜುಟ್ಟನ್ನು ಹಿಡಿದು ದರ ದರನೆ ಅಣ್ಣನಾದ ಯುಧಿಷ್ಠಿರನ ಬಳಿಗೆ ಎಳೆದುಕೊಂಡು ಬಂದನು. ಇಷ್ಟಾದರೂ ಗಂಧರ್ವನಿಗೆ ಮೂರ್ಛೆಯಿಂದೆಚ್ಚರವಾಗಲೇ ಇಲ್ಲ. ಇದನ್ನು ನೋಡಿ, ಅಂಗಾರಪರ್ಣನ ಪತ್ನಿಯಾದ ಕುಂಭೀನಸಿ ಎಂಬ ಗಂಧರ್ವಿನಿಯು ಧರ್ಮರಾಯನ (ಯುಧಿಷ್ಠಿರನ) ಬಳಿಗೆ ಬಂದು ಕೈಮುಗಿದು, "ಪುಣ್ಯಶೀಲರೇ, ನನ್ನ ಪತಿಗೆ ಪ್ರಾಣದಾನ ಮಾಡಿ ನಮ್ಮನ್ನು ಕಾಪಾಡಬೇಕು," ಎಂಬದಾಗಿ ದುಃಖ ವಿನಯಗಳಿಂದ ಬಹಳವಾಗಿ ಪ್ರಾರ್ಥಿಸಿಕೊಂಡು ಅಳುತ್ತ ನಿಂತಳು. ಇದನ್ನು ನೋಡಿ ಯುಧಿಷ್ಠಿರನಿಗೆ ವಿಶೇಷ ಕನಿಕರವುಂಟಾಯಿತು. ಆಗ ಅರ್ಜುನನನ್ನು ನೋಡಿ, "ತಮ್ಮಾ, ಯುದ್ಧದಲ್ಲಿ ಸೋತುಬಿದ್ದು, ಆತ್ಮರಕ್ಷಣೆಮಾಡಿಕೊಳ್ಳಲು ಶಕ್ತಿಯಿಲ್ಲದೆ ಹೆಂಗಸಿನ ಮೂಲಕ ರಕ್ಷಣೆಯನ್ನು ಬಯಸಿರುವ ಈತನನ್ನು ಯಾರುತಾನೇ ಕೊಲ್ಲುವರು? ಅವನನ್ನು ಬಿಟ್ಟುಬಿಡು," ಎಂದು ಹೇಳಿದನು. ಇಷ್ಟು ಹೊತ್ತಿಗೆ ಗಂಧರ್ವನಿಗೆ ಮೂರ್ಛೆದಿಳಿದು ಎಚ್ಚರಬಂದಿತು. ಆಗ ಅರ್ಜುನನು ಅವನನ್ನು ನೋಡಿ, "ಗಂಧರ್ವಾ, ನಿನ್ನನ್ನು ಪ್ರಾಣದಿಂದ ಬಿಟ್ಟಿರುವೆನು. ನಿನ್ನ ಮೇಲೆ ದಯೆ ತೋರಿಸಬೇಕೆಂದು ಕುರುವಂಶದ ರಾಜನಾದ ನಮ್ಮ ಅಣ್ಣ ಯುಧಿಷ್ಠಿರನು ಆಜ್ಞೆಮಾಡಿರುವುದರಿಂದ ನೀನು ಬದುಕಿದೆ. ಹೋಗು," ಎಂದನು.

ಆಗ ಗಂಧರ್ವನು ನಾಚಿ, ಅರ್ಜುನನನ್ನು ಕುರಿತು, "ವೀರವರ್ಯಾ, ಈ ದಿನ ನಾನು ನಿನ್ನಿಂದ ಪರಾಜಿತನಾದೆನು. ಅಹಂಕಾರವನ್ನು ತ್ಯಜಿಸಿದೆನು. ನಾನು ಬಹಳ ಸುಂದರವಾದ ರಥವುಳ್ಳವನಾಗಿದ್ದುದರಿಂದ

ನನಗೆ ಚಿತ್ರರಥನೆಂಬ ಹೆಸರೂ ಇದ್ದಿತು. ಪರಾಕ್ರಮಾತಿಶಯದಿಂದ ಅಹಂಕಾರಿಯಾಗಿ ನಾನು ಅಂಗಾರಪರ್ಣನೆಂಬ ಹೆಸರನ್ನಿಟ್ಟುಕೊಂಡು ಪ್ರಖ್ಯಾತನಾಗಿದ್ದೆನು. ಇಂದಿಗೆ ಆವೆರಡು ಹೆಸರುಗಳನ್ನೂ ತ್ಯಜಿಸಿಬಿಟ್ಟು, ನನ್ನರಥವು ನಿನ್ನ ಆಗ್ನೇಯಾಸ್ತ್ರದಿಂದ ದಗ್ಧವಾದ ಕಾರಣ, ದಗ್ಧರಥ ನೆಂದು ಹೆಸರಿಟ್ಟುಕೊಳ್ಳುವೆನು. ಮರ್ತ್ಯನಾಗಿಯೂ, ದೇವಲೋಕದ ಶಸ್ತ್ರಗಳನ್ನುಳ್ಳ ಮಹಾ ಪುರುಷನಾದ ನಿನ್ನನ್ನು ನೋಡಿ ನನಗತ್ಯಾನಂದ ವಾಗಿದೆ. ನನ್ನ ಪ್ರಾಣದಾನ ಮಾಡಿದ ನಿನಗೆ, ನಾನು ತಪಸ್ಸಿನಿಂದ ಸಂಪಾದಿಸಿದ ಗಂಧರ್ವ ಮಾಯಾ ವಿದ್ಯೆಯನ್ನು ಈದಿನ ಕಲಿಸಿಕೊಡು ವೆನು. ಆ ವಿದ್ಯೆಗೆ ಚಾಕ್ಷುಷೀ ವಿದ್ಯೆಯೆಂದು ಹೆಸರು. ಈ ವಿದ್ಯೆಯನ್ನು ಹಿಂದೆ ಮನುವು ಸೋಮನಿಗೂ ಸೋಮನು ಗಂಧರ್ವಪತಿಯಾದ ವಿಶ್ವಾ ವಸುವಿಗೂ ಕಲಿಸಿದನು. ಆ ವಿಶ್ವಾವಸುವಿನಿಂದ ನಾನದನ್ನು ಕಲಿತು ಕೊಂಡೆನು. ಈ ವಿದ್ಯೆಯ ಮಹಿಮೆಯಿಂದ ನಾವು ಯಾವುದನ್ನು ನೋಡಬೇಕೆಂದು ಅಪೇಕ್ಷಿಸಿದರೂ ಅದನ್ನು ಈ ಕಣ್ಣುಗಳಿಂದಲೇ ನೋಡಬಹುದು. ಇದನ್ನು ಕಲಿಯಬೇಕಾದರೆ ಆರು ತಿಂಗಳು ಏಕ ಪಾದದಿಂದ ನಿಂತು ವ್ರತನಿಯಮದಿಂದ ಅಭ್ಯಾಸಮಾಡಬೇಕು. ಆ ಶ್ರಮವೂ ವ್ರತವೂ ಇಲ್ಲದೆಯೇ ನಿನಗೆ ನಾನು ಅದನ್ನು ಕಲಿಸಿಕೊಡು ವೆನು. ಈ ವಿದ್ಯೆಯೊಂದರಿಂದಲೇ ನಾವು ಮಾನವರಿಗಿಂತಲೂ ಹೆಚ್ಚು ಶಕ್ತರಾಗಿರುವುದು. ನಮಗೆ ಮಾನಸ ಚಕ್ಷುಸ್ಸಿನ ದೃಷ್ಟಿಯು ಇನ್ನಾಗಿರು ವುದರಿಂದ ದೇವತೆಗಳಿಗೆ ಸಮಾನರಾಗಿರುವೆವು. ಕಾಪುರುಷರಿಗೆ ಈ ವಿದ್ಯೆ ಯನ್ನು ಹೇಳಬಾರದು. ನೀನು ತಪತೀವಂಶವರ್ಧನನಾದ ಮಹಾ ಪುರುಷನು. ಆದಕಾರಣ ಸತ್ಕುಲ ಪ್ರಸೂತನೂ, ಬ್ರಹ್ಮಚರ್ಯದಕ್ಷತ ತಕ್ಕವನೂ, ಮಹಾವೀರನೂ ಆದ ನಿನಗೆ ನಾನು ಆ ಗಾಂಧರ್ವ ಮಾಯಾಮಯ ಚಾಕ್ಷುಷೀವಿದ್ಯೆಯನ್ನು ಉಪದೇಶಿಸುವೆನು. ಅಲ್ಲದೆ, ನಿಮ್ಮ ಅಣ್ಣ ತಮ್ಮಂದಿರೈವರಲ್ಲಿ ಒಬ್ಬೊಬ್ಬರಿಗೂ ನೂರು ನೂರರಂತೆ, ನಮ್ಮ ಗಂಧರ್ವಲೋಕದಲ್ಲಿ ಜನಿಸಿದ ಅತ್ಯಂತ ಬಲ ವೇಗವುಳ್ಳ ಕುದುರೆಗಳನ್ನು ಬಹುಮಾನವಾಗಿ ಕೊಡುವೆನು. ಅವುಗಳನ್ನೂ ದಯೆ ಯಿಟ್ಟು ನೀವು ಪರಿಗ್ರಹಿಸಬೇಕು," ಎಂದನು. ಅದಕ್ಕೆ ಅರ್ಜುನನು, "ಅಯ್ಯಾ ಗಂಧರ್ವ ರಾಜಾ! ನಿನಗೆ ಆಪತ್ಕಾಲದಲ್ಲಿ ಪ್ರಾಣ

ದಾನಮಾಡಿದುದಕ್ಕಾಗಿ ನೀನು ಚಾಕ್ಷುಷೀ ವಿದ್ಯೆಯನ್ನೂ ಕುದುರೆಗಳನ್ನೂ ನಮಗೆ ಕೊಡುವುದಾದರೆ ನಾನೊಲ್ಲೆನು. ಅದು ನನ್ನ ಕರ್ತವ್ಯವೂ ಧರ್ಮವೂ ಆದುದರಿಂದ ನಾನು ನಿನಗೆ ಪ್ರಾಣದಾನ ಮಾಡಿರುತ್ತೇನೆ. ನಾನು ಅದಕ್ಕಾಗಿ ಪ್ರತಿಫಲವನ್ನು ಸ್ವೀಕರಿಸಲಾರೆನು" ಎಂದನು. ಅದಕ್ಕೆ ಗಂಧರ್ವನು, "ವೀರವರ್ಯಾ! ನಿನ್ನಲ್ಲಿರುವ ಅದ್ಭುತವಾದ ಆಗ್ನೇಯಾಸ್ತ್ರವನ್ನು ನನಗೆ ಉಪದೇಶಿಸಿ ಅನುಗ್ರಹಿಸು. ಅದಕ್ಕೆ ಪ್ರತಿಯಾಗಿ ನಾನು ಕಲಿಸುವ ಚಾಕ್ಷುಷೀ ವಿದ್ಯೆಯನ್ನೂ, ಅರ್ಪಿಸುವ ಕುದುರೆಗಳನ್ನೂ ನೀವುಗಳೇತಕ್ಕೆ ಸ್ವೀಕರಿಸಬಾರದು?" ಎಂದನು. ಅದನ್ನು ಕೇಳಿ ಅರ್ಜುನನು ಬಹಳ ಸಂತೋಷಪಟ್ಟು "ಓ ಗಂಧರ್ವರಾಜಾ! ಈಗ ನನಗೆ ಬಹಳ ಸಂತೋಷವಾಯಿತು. ನಾನು ನಿನಗೆ ಆಗ್ನೇಯಾಸ್ತ್ರವನ್ನು ಕೊಟ್ಟು, ಅದಕ್ಕೆ ಪ್ರತಿಯಾಗಿ ನೀನು ಕೊಡುವ ಚಾಕ್ಷುಷೀ ವಿದ್ಯೆಯನ್ನೂ ಅಶ್ವಗಳನ್ನೂ ಸ್ವೀಕರಿಸುವೆನು," ಎಂದು ಹೇಳಿದನು ಇದನ್ನು ಕೇಳಿ ಗಂಧರ್ವನಿಗೆ ಬಹಳ ಸಂತೋಷವಾಯಿತು. ಆಗ ಅವನು, "ವೀರವರ್ಯಾ, ಕುರುವಂಶದ ರಾಜಕುಮಾರರು ಎಲ್ಲ ವಿಷಯಗಳಲ್ಲಿಯೂ ಶ್ರೇಷ್ಠರೆಂದು, ಗಂಧರ್ವ ಯಕ್ಷರಾಕ್ಷಸ ದೈತ್ಯ ದಾನವ ಭುಜಗ ಪಿಶಾಚಾದಿಗಳೆಲ್ಲರೂ ಹೇಳುವುದನ್ನು ನಾನು ಕೇಳಿರುವೆನು. ಅಲ್ಲದೆ, ಪೂಜ್ಯರಾದ ನಾರದರೇ ಮೊದಲಾದ ಮಹರ್ಷಿಗಳು ನಿಮ್ಮ ವಂಶೀಯರ ಶಕ್ತಿ ವಿದ್ಯಾಗುಣ ಶೀಲಗಳನ್ನು ಕುರಿತು ಬಹಳವಾಗಿ ಶ್ಲಾಘಿಸಿರುವರು; ಮತ್ತು ಭೂಲೋಕ ಸಂಚಾರಮಾಡುವಾಗ ನಾನೂ ಸಹ ನಿಮ್ಮ ವಂಶೀಯರ ಶಕ್ತಿಗಳನ್ನೂ ಘನತೆಯನ್ನೂ ನೋಡಿರುವೆನು ಇಷ್ಟು ಮಾತ್ರವಲ್ಲದೆ, ವೇದವೇದಾಂತಗಳಲ್ಲಿಯೂ ಅಸ್ತ್ರ ಶಸ್ತ್ರ ಕಲೆಗಳಲ್ಲಿಯೂ ಅದ್ವಿತೀಯನೆಂದು ಲೋಕತ್ರಯದಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ ನಿಮ್ಮ ಗುರು ದ್ರೋಣಾಚಾರ್ಯರ ಪರಿಚಯವೂ ನನಗಿರುವುದು. ಮತ್ತು ನಿಮ್ಮಗಳ ಜನನಕ್ಕೆ ಕಾರಣರಾದ ಧರ್ಮ ವಾಯು, ಇಂದ್ರ ಅಶ್ವಿನೀ ದೇವತೆಗಳನ್ನೂ ಮತ್ತು ಪಾಂಡುರಾಜನನ್ನೂ ನಾನು ಬಲ್ಲೆನು. ಸಾಮಾನ್ಯ ಕ್ಷತ್ರಿಯನಾದವನು ರಾತ್ರಿಯ ಕಾಲದಲ್ಲಿ ನಮ್ಮೊಡನೆ ಯುದ್ಧಮಾಡಿ ಪ್ರಾಣದಿಂದ ಎಂದಿಗೂ ಹಿಂದಿರುಗಲಾರನು. ಆದರೆ ನೀವುಗಳು, ಬ್ರಾಹ್ಮಣ ಗುರುವಿನ ಅನುಗ್ರಹಕ್ಕೆ ಪಾತ್ರರಾಗಿ

ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡಿಕೊಂಡಿರುವ ಕಾರಣವೇ ನಾನು ನಿಮ್ಮಿಂದ ಪರಾಜಿತನಾದೆನು. ಆದುದರಿಂದ, ರಾಜನಾದವನು ಯಾವಾಗಲೂ ಉತ್ತಮನೂ, ವಿದ್ಯಾವಂತನೂ ಆದ ಬ್ರಾಹ್ಮಣನನ್ನು ಗುರುವಾಗಿಟ್ಟುಕೊಳ್ಳಬೇಕು. ತಪತೀವಂಶವರ್ಧನಾ, ಹಾಗೆ ಬ್ರಹ್ಮತೇಜಶ್ಶಕ್ತಿಯ ಸಹಾಯವನ್ನು ಪಡೆಯದಿರುವ ರಾಜನು ಎಷ್ಟೇ ಶಕ್ತನಾದರೂ ಆತನು ತನ್ನ ರಾಜ ಗೌರವವನ್ನು ಬಹಳ ಕಾಲ ಕಾಪಾಡಿಕೊಳ್ಳಲಾರನು," ಎಂದು ಮೊದಲಾಗಿ ಹೇಳಿ ಪಾಂಡವರನ್ನು ಶ್ಲಾಘಿಸಿದನು.

## ಅಧ್ಯಾಯ ೧೪

## ತಪತೀ ಸಂವರಣ

ಅದೆಲ್ಲವನ್ನೂ ಕೇಳಿ ಅರ್ಜುನನು, "ಅಯ್ಯಾ, ಗಂಧರ್ವರಾಜಾ! ನಾವುಗಳು ಕುಂತೀದೇವಿಯ ಮಕ್ಕಳು, ನಮ್ಮನ್ನು ಕೌಂತೇಯರೆಂದೂ ಕರೆಯುವರು. ನೀನಾದರೋ ನನ್ನನ್ನು "ತಪತೀವಂಶವರ್ಧನಾ" ಎಂಬುದಾಗಿ ಆಗಾಗ ಸಂಬೋಧಿಸುತ್ತಿರುವೆ. ಇದಕ್ಕೆ ಕಾರಣವೇನು? ದಯೆಯಿಟ್ಟು ವಿವರವಾಗಿ ತಿಳಿಸಬೇಕು" ಎಂದನು. ಆಗ ಗಂಧರ್ವನು ಅರ್ಜುನನನ್ನು ಕುರಿತು, "ಪಾಂಡುಪುತ್ರಾ, ಕೇಳು, ಪೂರ್ವ ಕಾಲದಲ್ಲಿ, ಜಗಚ್ಚಕ್ಷುವಾದ ಸೂರ್ಯದೇವನಿಗೆ, ಅವನಂತೆಯೇ ತೇಜಸ್ವಿನಿಯಾದ "ತಪತಿ" ಎಂಬ ಪುತ್ರಿಯಿದ್ದಳು. ಆಕೆಯು ಸಾವಿತ್ರೀದೇವಿಯ ತಂಗಿಯು. ದೇವ ಗಂಧರ್ವಾಪ್ಸರೋಭಾಮಿನಿಯರಲ್ಲಿಯೂ ಸಹ ಆಕೆಯಂತಹ ಸೌಂದರ್ಯವತಿಯಿರಲಿಲ್ಲ. ಆಕೆಯು ಮಹಾ ತಪಸ್ವಿನಿಯಾಗಿ ಲೋಕತ್ರಯದಲ್ಲಿಯೂ ಪ್ರಖ್ಯಾತಿಯನ್ನು ಪಡೆದಿದ್ದಳು. ಆಕೆಯನ್ನು ತಕ್ಕ ವರನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಸೂರ್ಯದೇವನು ಆಲೋಚಿಸಿದನು. ಆದರೆ, ಆಕೆಗೆ ತಕ್ಕ ಸೌಂದರ್ಯ ವಿದ್ಯಾ ವಿವೇಕಶೀಲ ಸಂಪನ್ನನಾದ ವರನು ಆತನಿಗೆ ಎಲ್ಲಿಯೂ ಗೋಚರವಾಗಲಿಲ್ಲ ಇದೇ ಸಮಯದಲ್ಲಿ, ಪುರುವಂಶದ ಅಜಾಮೀಢ ಮತ್ತು ರಿಕ್ಷಾದೇವಿಯರ ಪುತ್ರನಾದ ಸಂವರಣನೆಂಬ ರಾಜನು, ಪರಮಭಕ್ತಿಯಿಂದ ಸೂರ್ಯನನ್ನು ಕುರಿತು ತಪಸ್ಸನ್ನಾಚರಿಸುತ್ತಿದ್ದುದನ್ನು ನೋಡಿ, ಆ ಪ್ರಭಾಕರನು ಸಂತುಷ್ಟನಾಗಿ ಆತನ ಇಷ್ಟಾರ್ಥವನ್ನು ಅನುಗ್ರಹಿಸಿ, ತನ

ಪುತ್ರಿಗೆ ಎಲ್ಲ ವಿಧಗಳಲ್ಲಿಯೂ ಈತನೇ ತಕ್ಕ ವರನೆಂದು ಆಲೋಚಿಸಿ, ತಪತೀದೇವಿಯನ್ನು ಸಂವರಣರಾಜನಿಗೇ ಕೊಟ್ಟು ವಿವಾಹ ಮಾಡುವೆನೆಂದು ನಿಶ್ಚಯಿಸಿಕೊಂಡನು.

ಹೀಗಿರುವಲ್ಲಿ ಒಂದಾನೊಂದು ದಿನ, ಸಂವರಣರಾಜನು ಮೃಗಯಾ ವಿನೋದಾರ್ಥಿಯಾಗಿ ಅರಣ್ಯಕ್ಕೆ ಹೋಗಿ ಮೃಗಗಳನ್ನು ಬೇಟೆಯಾಡಿ, ಕಾಡಿನಲ್ಲಿ ಸುತ್ತುತ್ತಿರುವಾಗ, ಆತನ ಕುದುರೆಯು ಕ್ಷುತ್ಪಿಪಾಸಾಯಾಸಗಳಿಂದ ಪೀಡಿತವಾಗಿ, ಒಂದು ಬೆಟ್ಟದ ಪ್ರದೇಶದಲ್ಲಿ ಬಿದ್ದು ಸತ್ತುಹೋಯಿತು. ಪರಿವಾರವನ್ನು ದೂರದಲ್ಲಿ ಬಿಟ್ಟಿದ್ದ ರಾಜನು ಒಬ್ಬಂಟಿಗನಾಗಿ ಕಾಲ್ನಡಿಗೆಯಿಂದ ಹಾಗೆಯೇ ಆ ಪರ್ವತ ಪ್ರಾಂತದಲ್ಲಿ ಬರುತ್ತಿರಲು, ಅಲ್ಲಿ ಅಸಮಾನ ಸೌಂದರ್ಯವತಿಯಾದ ಒಬ್ಬ ಲೋಲಾಕ್ಷಿಯು ಅವನ ಗೋಚರಕ್ಕೆ ಬಿದ್ದಳು. ಅಲ್ಲಿ ಮತ್ತೆ ಯಾರೊಬ್ಬರೂ ಇರಲಿಲ್ಲ. ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಬೆರಗಾಗಿ ಸ್ವಲ್ಪ ಹೊತ್ತು ಸುಮ್ಮನೆ ನಿಂತರು. ರಾಜನು ಆ ಕನ್ಯೆಯ ಸೌಂದರ್ಯವನ್ನು ನೋಡಿ, "ಈಕೆಯು ಭಾಗ್ಯದೇವತೆಯಾದ ಮಹಾಲಕ್ಷ್ಮೀದೇವಿಯೇ ಇರಬಹುದೇ? ಅಥವಾ ಸೂರ್ಯಕಿರಣಗಳೇ ಈ ಕನ್ಯೆಯ ರೂಪವಾಗಿ ಬಂದು ಇಲ್ಲಿ ನಿಂತಿರುವುವೋ? ಎಂಬುದಾಗಿ ಸಂದೇಹಪಟ್ಟನು. ಕನಕ ಪುತ್ಥಳಿಯಂತೆ ಬೆಟ್ಟದ ಬಂಡೆಯ ಮೇಲೆ ನಿಂತಿದ್ದ ಆಕೆಯ ಛಾಯೆಯಿಂದ ಅಲ್ಲಿದ್ದ ಕಲ್ಲುಗಳೂ, ತರುಲತೆಗಳೂ ಮೊದಲಾಗಿ ಸಮಸ್ತವೂ ಬಂಗಾರದಿಂದ ಮೆರುಗು ಕೊಟ್ಟಿದ್ದಂತೆ ಕಂಡವು. ಸಂವರಣರಾಜನು, ಆಕೆಯ ಸೌಂದರ್ಯಕ್ಕೆ ಮನಸೋತು, ಕಾಮಬಾಣಾಹತನಾಗಿ, ಇಂತಹ ಕನ್ಯೆಯನ್ನು ವರಿಸದಿದ್ದರೆ ತನ್ನ ಜನ್ಮವೇ ವ್ಯರ್ಥವೆಂದು ಬಗೆದು, ಬಳಿಗೆ ಹೋಗಿ, "ಎಲೌ, ಮನೋಹರೇ, ನೀನು ಯಾರು? ನಿನ್ನವರು ಯಾರು? ನಿರ್ಜನವೂ ಕ್ರೂರಮೃಗಾವಾಸವೂ ಆದ ಈ ಘೋರಾರಣ್ಯದಲ್ಲಿ, ಹೀಗೆ ಒಂಟಿಯಾಗಿ ನೀನು ಬಂದು ಆಲೆಯುತ್ತಿರಲು ಕಾರಣವೇನು? ನಿನ್ನಂತಿರುವ ಸೌಂದರ್ಯವತಿಯು ದೇವಗಂಧರ್ವ ಯಕ್ಷ ಭುಜಂಗಮರಲ್ಲಿಯೂ ಇಲ್ಲ. ನಿನ್ನ ಅದ್ವಿತೀಯ ಸೌಂದರ್ಯವನ್ನು ನೋಡಿ ನನಗತ್ಯಾಶ್ಚರ್ಯವುಂಟಾಗಿ ನಾನು ಕಾಮಬಾಣಹತನಾಗಿರುವೆನು," ಎಂದು ಮೊದಲಾಗಿ ಆಕೆಯನ್ನು ಕುರಿತು

ಹೇಳುತ್ತಿರುವಷ್ಟರಲ್ಲಿ, ಆ ಸುಂದರಿಯು ತಟ್ಟನೆ ಮಿಂಚಿನಂತೆ ಮಾಯವಾದಳು. ಇದರಿಂದ ಸಂವರಣ ರಾಜನು, ಕೈಗೆ ಸಿಕ್ಕಿದ್ದ ನಿಧಿಯನ್ನು ಕಳೆದುಕೊಂಡವನಂತೆ ಭ್ರಾಂತನಾಗಿ, ವ್ಯಥೆಪಡುತ್ತ, ದಿಕ್ಕೇ ತೋರದೆ ತಟ್ಟನೆ ನೆಲಕ್ಕೆ ಬಿದ್ದು ನಿಶ್ಚೇಷ್ಟಿತನಾದನು. ಆಗ ಆ ಸುಂದರೀಮಣಿಯಾದ ತಪತೀದೇವಿಯು ಪುನಃ ಕಾಣಿಸಿಕೊಂಡು, ಮುಗುಳ್ನಗೆಯಿಂದ ಆತನನ್ನು ಕುರಿತು, "ಏಳು ರಾಜೇಂದ್ರಾ, ಏಳು, ಜಗದ್ವಿಖ್ಯಾತ ಪ್ರತಾಪಶಾಲಿಯಾದ ನೀನು ಹೀಗೆ ಪ್ರಜ್ಞೆ ತಪ್ಪಿ ಬೀಳಬಾರದು," ಎಂದಳು. ಆ ಮಾತುಗಳನ್ನು ಕೇಳಿ ರಾಜನು ಕಣ್ದೆರೆದು, ಎದುರಲ್ಲಿ ನಿಂತಿದ್ದ ಆ ಮೋಹಿನಿಯನ್ನು ನೋಡಿ ಮೋಹಪರವಶನಾಗಿ ದೀನ ಸ್ವರದಿಂದ, "ಎಲೌ, ಮನೋಹರೇ, ನಿನ್ನ ದರ್ಶನವಾದ ಕ್ಷಣದಿಂದಲೂ ಪುಷ್ಪಬಾಣನೆಂಬ ಸರ್ಪವು ನನ್ನನ್ನು ಕಚ್ಚಿ ನನಗೆ ಪ್ರಜ್ಞೆ ತಪ್ಪುವಂತೆ ಮಾಡಿತು. ನೀನು ಕೃಪೆಮಾಡಿ ನನ್ನನ್ನು ವರಿಸಿದಲ್ಲದೆ ನನ್ನ ಪ್ರಾಣವು ಉಳಿಯಲಾರದು. ಆದಕಾರಣ ನನ್ನನ್ನು ನೀನು ಗಾಂಧರ್ವ ವಿಧಿಯಿಂದ ವರಿಸಿ ಕಾಪಾಡು," ಎಂದು ಬೇಡಿಕೊಂಡನು.

ಅದನ್ನು ಕೇಳಿ ತಪತೀದೇವಿಯು, "ರಾಜೇಂದ್ರಾ, ನಾನು ಸ್ವತಂತ್ರಳಲ್ಲ. ತಂದೆಯಧೀನಳು; ನಿನಗೆ ನಿಜವಾಗಿಯೂ ನನ್ನ ಮೇಲೆ ಪ್ರೇಮವಿದ್ದರೆ ನಮ್ಮ ತಂದೆಯನ್ನು ಕೇಳು. ನೀನು ಸಹ ನನ್ನ ಮನಸ್ಸನ್ನು ಅಪಹರಿಸಿರುವೆಯಾದರೂ ಸ್ತ್ರೀಯರು ಅಸ್ವತಂತ್ರರಾದುದರಿಂದ, ನಮ್ಮ ತಂದೆಯಾಜ್ಞೆಯಿಲ್ಲದೆ ನಾನು ನಿನ್ನ ಬಳಿ ಸೇರಲು ಸಾಧ್ಯವಿಲ್ಲ. ನಿನ್ನಂತಹ ಸತ್ಕುಲ ಪ್ರಸೂತನೂ, ಆಶ್ರಿತ ಸಂರಕ್ಷಕನೂ ಆದ ರಾಜನನ್ನೇ ವರಿಸಲು ಇಷ್ಟಪಡದಿರುವ ಕನ್ಯೆಯೂ ಇರುವಳೇ? ಆದಕಾರಣ ಸಮಯನೋಡಿ ನಮ್ಮ ತಂದೆಯಾದ ಸೂರ್ಯದೇವನನ್ನು ಕುರಿತು, ನೀನು ಜಪತಪೋಧ್ಯಾನಗಳನ್ನಾಚರಿಸಿ ಪ್ರಾರ್ಥಿಸು. ಆತನು ನನ್ನನ್ನು ನಿನಗೆ ಕೊಡಲಿಷ್ಟಪಡುವುದಾದರೆ ನಾನು ನಿನ್ನನ್ನು ವರಿಸಿ ನಿನಗೆ ನಿತ್ಯ ವಿಧೇಯಳಾಗಿರುವೆನು. ನನ್ನ ಹೆಸರು ತಪತಿಯೆಂದು ನಾನು ಸಾವಿತ್ರೀದೇವಿಯ ತಂಗಿಯು," ಎಂಬುದಾಗಿ ಹೇಳಿ ತಪತಿಯು ಅಂತರಿಕ್ಷಕ್ಕೆ ಹಾರಿ ಹೋದಳು. ಇದನ್ನು ನೋಡಿ ಸಂವರಣ ರಾಜನು ಆಕ್ಷಣವೇ ಜ್ಞಾನತಪ್ಪಿ ಧೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು.

ಆವರೆಗೆ, ರಾಜನನ್ನು ಹುಡುಕುತ್ತ ಅರಣ್ಯದಲ್ಲಿ ತಿರುಗಿ ಮಂತ್ರಿಗಳೂ ಪರಿವಾರದವರೂ ಸಹ ಆಸ್ಥಳಕ್ಕೆ ಬಂದರು. ಅವರಲ್ಲಿ ವೃದ್ಧನಾದ ಮುಖ್ಯ ಮಂತ್ರಿಯು, ರಾಜನು ಪ್ರಜ್ಞೆಯಿಲ್ಲದೆ ಬಿದ್ದಿದ್ದುದನ್ನು ನೋಡಿ, ಅರಣ್ಯದಲ್ಲಿ ಅಲೆದ ಆಯಾಸದಿಂದಲೂ, ಹಸಿವು ಬಾಯಾರಿಕೆಗಳಿಂದಲೂ ಆತನು ಸೊರಗಿ ಬಿದ್ದಿರಬಹುದೆಂದಾಲೋಚಿಸಿ, ಆತನಿಗೆ ಶೈತ್ಯೋಪಚಾರಮಾಡಿಸಲು, ರಾಜನು ಕಣ್ದೆರೆದನು. ಆಗ ಆತನು ಆ ವೃದ್ಧ ಮಂತ್ರಿಯೊಬ್ಬನನ್ನು ಮಾತ್ರ ತನ್ನ ಬಳಿಯಲ್ಲಿರುವಂತೆ ಹೇಳಿ ಮಿಕ್ಕ ಎಲ್ಲರನ್ನೂ ಕಳುಹಿಸಿಬಿಟ್ಟನು. ಅನಂತರ ರಾಜನು ನಿರ್ಮಲ ಮನಸ್ಕನಾಗಿ ಕೈಮುಗಿದುಕೊಂಡು, ತಲೆಯನ್ನಾಕಾಶಕ್ಕೆ ಎತ್ತಿ ಸೂರ್ಯದೇವನನ್ನು ಕುರಿತು ಧ್ಯಾನಮಾಡಲು ಆರಂಭಿಸಿದನು. ಹೀಗೆ ಧ್ಯಾನಾಸಕ್ತನಾದ ರಾಜನಿಗೆ ಮಂತ್ರಿಯು ಎಲ್ಲ ಸೌಕರ್ಯಗಳನ್ನೂ ಒದಗಿಸುತ್ತಿದ್ದನು. ರಾಜನು ಹೀಗೆ ನಿತ್ಯವೂ ಸೂರ್ಯಾರಾಧನ ತತ್ಪರನಾಗಿ, ಒಂದು ದಿನ ತನ್ನ ಕುಲಗುರುವಾದ ವಸಿಷ್ಠ ಮಹಾಮುನಿಯನ್ನು ಸ್ಮರಿಸಲು, ಹನ್ನೆರಡನೆಯ ದಿನ ಆ ಮಹರ್ಷಿಯು ಅಲ್ಲಿಗೆ ಬಂದನು. ತಪಶ್ಶಕ್ತಿಯಿಂದ ರಾಜನ ಕುತೂಹಲವನ್ನರಿತು, ತಪತೀದೇವಿಗೆ ಈತನು ತಕ್ಕ ಪತಿಯೆಂದಾಲೋಚಿಸಿ, ಆತನಿಗೆ ಇಷ್ಟಾರ್ಥಸಿದ್ಧಿಯಾಗುವುದೆಂಬದಾಗಿ ನಂಬಿಕೆ ಹೇಳಿ, ವಸಿಷ್ಠಮುನಿಯು ರಾಜನು ನೋಡುತ್ತಿರುವಾಗಲೇ ಅದ್ಭುತ ತೇಜಃಪ್ರಕಾಶಮಾನನಾಗಿ ಅಂತರಿಕ್ಷಕ್ಕೇರಿ ಸೂರ್ಯದೇವನ ಸನ್ನಿಧಿಯನ್ನು ಸೇರಿದನು. ಆಗ ವಸಿಷ್ಠಮಹರ್ಷಿಯಿಂದ ಪ್ರಾರ್ಥಿತನಾದ ಪ್ರಭಾಕರದೇವನು ಆತನಿಷ್ಟದಂತೆ ತನ್ನ ಪುತ್ರಿಯಾದ ತಪತೀದೇವಿಯನ್ನು ಸಂವರಣ ರಾಜನಿಗೆ ಕೊಡಲು ಸಂತೋಷವಾಗಿ ಸಮ್ಮತಿಸಿ ಆಕೆಯನ್ನು ವಸಿಷ್ಠನೊಡನೆಯೇ ಕಳುಹಿಸಿಕೊಟ್ಟನು.

ಇತ್ತಲಾ ಸಂವರಣರಾಜನು, ಹನ್ನೆರಡನೆಯ ದಿನ, ತನ್ನ ಆರಾಧನೆಯು ಪೂರಯಿಸುವ ವೇಳೆಗೆ, ಅಂತರಿಕ್ಷ ಮಾರ್ಗದಲ್ಲಿ ಮಿಂಚಿನಂತೆ ಹೊಳೆಯುತ್ತ ವಸಿಷ್ಠಮುನಿವರನೊಡನೆ ಬಂದ ತಪತಿಯನ್ನು ನೋಡಿ ಅತ್ಯಾನಂದ ಭರಿತನಾದನು. ತನ್ನ ಸೂರ್ಯಾರಾಧನೆಯ ಫಲವಾಗಿ ಗುರುವಾದ ವಸಿಷ್ಠಮಹರ್ಷಿಯ ಅನುಗ್ರಹದಿಂದ, ತಾನು ಆತುರನಾಗಿ ಬಯಸಿದ್ದ ತಪತೀದೇವಿಯನ್ನು ಪಡೆದು ಸಂವರಣ ರಾಜನು,

ಆಕೆಯೊಡನೆ, ಆ ಪರ್ವತದಲ್ಲಿ ವಿಹರಿಸುತ್ತಿರಲು ಅಪೇಕ್ಷಿಸಿ, ಗುರುಗಳ ಪ್ಪಣೆಯನ್ನು ಪಡೆದು ಅವರನ್ನು ಬೀಳ್ಕೊಟ್ಟು, ರಾಜ್ಯಭಾರವನ್ನು ಬಳಿಯಲ್ಲಿದ್ದ ಮಂತ್ರಿಯ ವಶಕ್ಕೆ ಬಿಟ್ಟು, ಆತನನ್ನೂ ಕಳುಹಿಸಿ ತಾನು ಪತ್ನಿಯೊಡನೆ ಅಲ್ಲಿಯೇ ವಿಹಾರಲೋಲನಾಗಿ ಆನಂದದಿಂದ ಇದ್ದುಬಿಟ್ಟನು.

ಹೀಗೆ ವನವಿಹಾರಲೋಲನಾಗಿ ಸಂವರಣರಾಜನು ಪತ್ನಿಯೊಡನೆ ಹನ್ನೆರಡು ವರ್ಷಗಳ ಕಾಲ ಆ ಅರಣ್ಯದಲ್ಲಿಯೇ ಇರಲು, ಆ ಕಾಲದಲ್ಲಿ, ಆತನ ದೇಶದಲ್ಲಿ ಮಳೆಯೇ ಬೀಳದೆ, ಬೆಳೆಯಾಗದೆ, ಪ್ರಬಲವಾದ ಕ್ಷಾಮವುಂಟಾಯಿತು. ಆಹಾರವಿಲ್ಲದೆ ಜನರು ಎಲ್ಲೆಲ್ಲಿಯೂ ಮೃತರಾದರು. ಇದ್ದ ಕೆಲವರೂ ತಿಂಡಿಯಿಲ್ಲದೆ ಜೀವಚ್ಛವಗಳಂತಾಗಿ ರಾಜ್ಯವೆಲ್ಲವೂ ಪಿಶಾಚಗಳ ಆವಾಸವಾದಂತೆ ಇತ್ತು. ಇದೆಲ್ಲವನ್ನೂ ನೋಡಿದ ಧರ್ಮಾತ್ಮನಾದ ವಸಿಷ್ಠಮುನೀಂದ್ರನು, ಅರಣ್ಯದಲ್ಲಿದ್ದ ಸಂವರಣ ರಾಜನಿಗೆ ಈ ಅನರ್ಥವನ್ನು ತಿಳಿಸಿ, ಆತನನ್ನು ತಪತೀದೇವಿಯೊಡನೆ ರಾಜಧಾನಿಗೆ ಕರೆತಂದು ಅರಮನೆಯಲ್ಲಿರುವಂತೆ ಮಾಡಿದನು. ಅನಂತರ ರಾಜ್ಯದಲ್ಲಿ ಹಿಂದಿನಂತೆ ಮಳೆ ಬೆಳೆಗಳು ವಿಶೇಷವಾಗಿ ಆಗಿ, ಸುಭಿಕ್ಷವೇರ್ಪಟ್ಟು ಜನರೆಲ್ಲರೂ ರಾಜ ರಾಜ್ಞಿಯರನ್ನು ಭಕ್ತಿ ಪ್ರೀತಿಗಳಿಂದ ಕೊಂಡಾಡುತ್ತ ಸುಖದಿಂದಿದ್ದರು. ಅನಂತರ ರಾಜನು ತಪತೀರಾಜ್ಞಿಯೊಡಗೂಡಿ ಹನ್ನೆರಡು ವರ್ಷಗಳ ಕಾಲ ಶಚೀದೇವಿಯೊಡಗೂಡಿದ ದೇವೇಂದ್ರನಂತೆ, ಮಹಾ ಯಾಗಗಳನ್ನಾಚರಿಸಿ ದೇವತೆಗಳಿಗೂ ತೃಪ್ತಿ ಸಂತೋಷಗಳನ್ನುಂಟುಮಾಡಿದನು. ಅರ್ಜುನಾ, ಈ ತಪತೀ ಸಂವರಣರಿಗೆ **ಕುರು** ಎಂಬ ಕುಮಾರನು ಹುಟ್ಟಿದನು. ನೀನೂ ಆ ಕುರುವಂಶದಲ್ಲಿ ಹುಟ್ಟಿ ತಪತೀವಂಶವರ್ಧನನಾದೆ," ಎಂದು ಹೇಳಿದ ಗಂಧರ್ವನ ಮಾತನ್ನು ಕೇಳಿ ಪಾರ್ಥನು ಆನಂದ ಭರಿತನಾದನು.

ಗಂಧರ್ವನು ಹೇಳಿದುದೆಲ್ಲವನ್ನೂ ಕೇಳಿ, ಅರ್ಜುನನಿಗೆ ಮಹಾತ್ಮನಾದ ವಸಿಷ್ಠಮಹರ್ಷಿಯ ಶಕ್ತಿಯನ್ನು ಕುರಿತು ಅತ್ಯಾಶ್ಚರ್ಯವಾಯಿತು. ಆಗ ಆತನು ಅಂಗಾರಪರ್ಣನನ್ನು ಕುರಿತು, "ಗಂಧರ್ವ ರಾಜಾ, ನಿನ್ನ ಮಾತುಗಳನ್ನು ಕೇಳಿ ನನಗತ್ಯಾನಂದವಾದುದಲ್ಲದೆ, ನಮ್ಮ ಪೂರ್ವ ರಾಜರಾದ ಕುರುವಂಶದ ಅರಸರಿಗೆ ಕುಲಗುರುಗಳಾದ ಆ ಮಹನೀಯ

ವಸಿಷ್ಠಮುನಿವರ್ಯರು ಯಾರು? ಅವರ ವೃತ್ತಾಂತವೆಲ್ಲವನ್ನೂ ವಿವರವಾಗಿ ಕೇಳಬೇಕೆಂಬ ಕುತೂಹಲವು ನನಗುಂಟಾಗಿರುವುದು. ಅದನ್ನು ದಯೆಯಿಟ್ಟು ಹೇಳಬೇಕು," ಎಂಬುದಾಗಿ ಕೇಳಿಕೊಂಡನು. ಆಗ ಅಂಗಾರಪರ್ಣನು ಈ ಮುಂದೆ ಹೇಳುವ ರೀತಿಯಿಂದ ಆ ವಸಿಷ್ಠ ಮುನಿವರನ ಚರಿತ್ರೆಯನ್ನು ಪಾರ್ಥನಿಗೆ ಹೇಳಿದನು :—

## ವಸಿಷ್ಠಮಹರ್ಷಿಯ ಚರಿತ್ರೆ

ವಸಿಷ್ಠನು ಬ್ರಹ್ಮನ ಮಾನಸಪುತ್ರನು. ಪತಿವ್ರತಾಶಿರೋಮಣಿಯಾದ ಅರುಂಧತಿಯ ಪತಿಯು. ಆತನು, ದೇವತೆಗಳಿಗೂ ಗೆಲ್ಲಲಾಗದ ಕಾಮಕ್ರೋಧಗಳನ್ನು ಸಂಪೂರ್ಣವಾಗಿ ಜಯಿಸಿ ತಪಸ್ಸಿದ್ಧಿಯನ್ನು ಪಡೆದು, ಪರಮ ಶಾಂತಮೂರ್ತಿಯಾಗಿದ್ದನು. ತನಗೆ ಪರಮ ವಿರೋಧಿಗಳಾಗಿ ವರ್ತಿಸಿದ ಕುಶಿಕ ವಂಶೀಯರನ್ನು ನಿರ್ಮೂಲ ಮಾಡುವಂತಹ ಶಕ್ತಿಯು ತನಗಿದ್ದರೂ, ಆ ರೀತಿ ಮಾಡದೆ ಬಿಟ್ಟು ಪರಮ ಧರ್ಮಾತ್ಮನಾಗಿದ್ದನು. ಕುಶಿಕವಂಶೀಯನಾದ ವಿಶ್ವಾಮಿತ್ರನು ಆ ಮಹಾನುಭಾವನಿಗೆ ಕೋಪ ಬರುವಂತೆ ಮಾಡಿದರೂ, ತನ್ನ ಪುತ್ರರನ್ನು ಕಳೆದುಕೊಂಡು ಮನಸ್ಸು ಕೆಟ್ಟಿದ್ದರೂ, ಮತ್ತು ತನಗೆ ಅಪರಿಮಿತವಾದ ತಪಶ್ಶಕ್ತಿಯಿದ್ದರೂ, ಆತನು ವಿಶ್ವಾಮಿತ್ರನ ನಾಶಕ್ಕಾಗಿ ಏನನ್ನೂ ಮಾಡದೆ ನಿರ್ಬಲನಂತೆ ಇದ್ದನು. ಮೃತರಾದ ತನ್ನ ಪುತ್ರರನ್ನು ಸಜೀವರನ್ನಾಗಿ ಮಾಡಿಕೊಳ್ಳಬಲ್ಲ ಶಕ್ತಿ ಆತನಿಗಿದ್ದರೂ, ಆತನು ಯಮಧರ್ಮರಾಜನ ಕಟ್ಟಳೆಯನ್ನು ಮೀರಿ ಆ ರೀತಿಮಾಡಲಿಲ್ಲ. ಇಂತಹ ಜಿತೇಂದ್ರಿಯನೂ, ಅದ್ಭುತ ತೇಜಶ್ಶಕ್ತಿಮಯನೂ ಆದ ವಸಿಷ್ಠ ಮಹಾಮುನಿಯನ್ನು ತಮ್ಮ ಗುರುವಾಗಿ ಪಡೆದುಕೊಂಡಿದ್ದುದರಿಂದಲೇ, ಇಕ್ಷ್ವಾಕು ಮೊದಲಾದವರು ಪ್ರಪಂಚವೆಲ್ಲಕ್ಕೂ ಅಧಿಪತಿಗಳಾಗಿ ಅತಿಶಯವಾದ ಕೀರ್ತಿಯಿಂದ ರಾಜ್ಯಭಾರಮಾಡಿದರು. ಅಲ್ಲದೆ, ಈತನ ಪೌರೋಹಿತ್ಯದಿಂದ ಅನೇಕ ಯಾಗಗಳನ್ನು ಮಾಡಿ ಕೀರ್ತಿಶ್ರೇಯಸ್ಸುಗಳನ್ನು ಪಡೆದರು. ಆದ ಕಾರಣ, ಅರ್ಜುನಾ, ನೀವುಗಳೂ ಸಹ ವೇದಜ್ಞನಾಗಿಯೂ ಸದ್ಗುಣ ಸಂಪನ್ನನಾಗಿಯೂ ಇರುವ ಒಬ್ಬ ಜಿತೇಂದ್ರಿಯನಾದ ಬ್ರಾಹ್ಮಣನನ್ನು ನಿಮ್ಮ ಗುರುವನ್ನಾಗಿ ಗೊತ್ತುಮಾಡಿಕೊಳ್ಳಿ. ಧರ್ಮಾರ್ಥ ಕಾಮಗಳ

ತತ್ವಗಳನ್ನು ಬಲ್ಲ ಅಂತಹ ಮಹನೀಯನ ಸಹಾಯದಿಂದ ನೀವುಗಳು ಈ ಭೂಮಂಡಲವನ್ನೇ ಜಯಿಸಿ ರಾಜ್ಯಭಾರಮಾಡಲು ಶಕ್ತರಾಗುವಿರಿ," ಎಂದು ಹೇಳಿದನು. ಆಗ ಅರ್ಜುನನು, "ಓ ಗಂಧರ್ವ ರಾಜಾ, ಮಹಾ ತಪಸ್ವಿಗಳಾದ ವಸಿಷ್ಠ ವಿಶ್ವಾಮಿತ್ರರಿಗೆ ಶತ್ರುತ್ವವುಂಟಾಗಿದ್ದಿತೆಂದು ಹೇಳಿದೆಯಲ್ಲಾ ! ಅದು ಹೇಗೆ? ದಯೆಯಿಟ್ಟು ಅದನ್ನು ವಿವರವಾಗಿ ತಿಳಿಸು," ಎಂದು ಕೇಳಿಕೊಂಡನು. ಅದಕ್ಕೆ ಅಂಗಾರಪರ್ಣನು, "ಪಾರ್ಥಾ, ಕೇಳು ! ಕನ್ಯಕುಬ್ಜವೆಂಬ ನಗರದಲ್ಲಿ ಕುಶಿಕರಾಜನ ಪುತ್ರನಾದ ಗಾಧಿಯೆಂಬ ಭರತವಂಶದ ಮಹಾರಾಜನು, ರಾಜ್ಯಭಾರ ಮಾಡುತ್ತಿದ್ದನು. ಈತನಿಗೆ ವಿಶ್ವಾಮಿತ್ರನೆಂಬ ಪುತ್ರನಿದ್ದನು. ಈ ವಿಶ್ವಾಮಿತ್ರನು ಪರಮ ಗುಣಶಾಲಿ ಮತ್ತು ಪರಾಕ್ರಮಿ. ಒಂದಾನೊಂದು ದಿನ, ವಿಶ್ವಾಮಿತ್ರರಾಜನು ಮೃಗಯಾವಿಹಾರಾರ್ಥವಾಗಿ ಸೈನ್ಯದೊಡನೆ ಮಂತ್ರಿಗಳೊಡಗೂಡಿ ಅರಣ್ಯಕ್ಕೆ ಹೋದನು. ಅಲ್ಲಿ ಅನೇಕ ಮೃಗಗಳನ್ನು ಬೇಟೆಯಾಡಿ, ಆಯಾಸಪಟ್ಟು ಬಾಯಾರಿಕೆಯಿಂದ, ಬಳಿಯಲ್ಲಿದ್ದ ವಸಿಷ್ಠ ಮುನಿಗಳ ಆಶ್ರಮಕ್ಕೆ ಬಂದನು. ರಾಜನ ಆಗಮನವನ್ನರಿತು, ವಸಿಷ್ಠಮಹರ್ಷಿಯು ಸಂತೋಷದಿಂದ ಬಂದು ಆತನನ್ನಿದಿರುಗೊಂಡು, ಆದರಿಸಿ, ಅರ್ಘ್ಯಪಾದ್ಯಾದಿಗಳಿಂದಲೂ ಮಧುರ ಫಲಾದಿಗಳಿಂದಲೂ ಸತ್ಕರಿಸಿದನು. ಆ ಮುನಿವರ್ಯನ ಬಳಿಯಲ್ಲಿ, ಕೇಳಿದ ವಸ್ತುಗಳನ್ನು ತಡವಿಲ್ಲದೆ ಕೊಡಬಲ್ಲ **ನಂದಿನಿ**ಯೆಂಬ ಕಾಮಧೇನು ವೊಂದಿತ್ತು. ಅದರ ಮೂಲಕವಾಗಿ, ವಸಿಷ್ಠನು ರಾಜನಿಗೂ ಮಂತ್ರಿಗಳಿಗೂ ರಾಜನ ಸೈನ್ಯಾದಿಸಮಸ್ತ ಪರಿವಾರಕ್ಕೂ ಬೇಕುಬೇಕಾದಂತಹ ಪದಾರ್ಥಗಳನ್ನೊದಗಿಸಿ ಔತಣಮಾಡಿ, ಅಮೂಲ್ಯವಾದ ವಸ್ತ್ರಾಭರಣಗಳನ್ನು ಸಹ ಅರ್ಪಿಸಿದನು. ಒಂದು ಸಾಮಾನ್ಯವಾದ ಹಸುವು ಇಂತಹ ಮಹಿಮೆಯುಳ್ಳದುದೆಂದರಿತು ವಿಶ್ವಾಮಿತ್ರ ರಾಜನಿಗೆ ಪರಮಾಶ್ಚರ್ಯ ಸಂತೋಷಗಳುಂಟಾದವು. ಆಗ ಆತನು ವಸಿಷ್ಠಮಹರ್ಷಿಯೊಡನೆ ಆಧೇನುವನ್ನು ಬಹಳವಾಗಿ ಕೊಂಡಾಡಿ, "ಪೂಜ್ಯರೇ, ನಾನು ತಮಗೆ ಹತ್ತುಸಾವಿರ ಗೋವುಗಳನ್ನು ಸಮರ್ಪಿಸುವೆನು, ಅವುಗಳಿಗೆ ಪ್ರತಿಯಾಗಿ ಈ ನಂದಿನಿಯನ್ನು ದಯೆಯಿಟ್ಟು ನನಗೆ ಕೊಡಬೇಕು. ಇಲ್ಲವಾದರೆ ನನ್ನ ರಾಜ್ಯವನ್ನೇ ತಮಗೆ ಕೊಟ್ಟುಬಿಡುವೆನು. ಅದನ್ನು

ತಾವು ಸುಖವಾಗಿ ಅನುಭವಿಸಿಕೊಂಡು ಈ ನಂದಿನೀಧೇನುವನ್ನು ಅನುಗ್ರಹಿಸಬೇಕು," ಎಂಬದಾಗಿ ಕೇಳಿಕೊಂಡನು. ಆಗ ವಸಿಷ್ಠ ಮುನಿವರನು, "ರಾಜೇಂದ್ರಾ, ನಾನು ದೇವತೆಗಳ ಮತ್ತು ಪಿತೃಗಳ ತೃಪ್ತಿಗಾಗಿ ಕರ್ಮಾನುಷ್ಠಾನ ಮಾಡುವುದಕ್ಕೂ, ಅತಿಥಿ ಅಭ್ಯಾಗತರನ್ನು ಸತ್ಕರಿಸಿ ಅವರ ಸೇವೆಮಾಡುವುದಕ್ಕೂ, ಮತ್ತು ಯಜ್ಞಾದಿ ಕರ್ಮಗಳನ್ನು ನೆರವೇರಿಸುವುದಕ್ಕೂ ಅನುಕೂಲವಾಗಿ, ಈ ನಂದಿನೀಧೇನುವನ್ನಿಟ್ಟುಕೊಂಡಿದ್ದೇನೆ. ಆದರಿಂದ ನೀನು ನಿನ್ನ ರಾಜ್ಯವೆಲ್ಲವನ್ನೂ ನನಗೆ ಕೊಟ್ಟರೂ ನಾನದನ್ನು ನಿನಗೆ ಕೊಡಲಾರೆನು," ಎಂದನು. ಅದಕ್ಕೆ ವಿಶ್ವಾಮಿತ್ರ ರಾಜನು, "ಸ್ವಾಮೀ, ನೀವು ವೇದವನ್ನೋದಿಕೊಂಡು ತಪಸ್ಸಿದ್ಧಿಯಿಂದ ಆತ್ಮಜ್ಞಾನವನ್ನು ಪಡೆಯತಕ್ಕವರೇ ಹೊರತು ನಮ್ಮಂತೆ ನಿಮಗೆ ಅಧಿಕಾರ ದರ್ಪಗಳಿಲ್ಲ. ಆದುದರಿಂದ, ಈಗ ನೀವು ಹತ್ತುಸಾವಿರ ಗೋವುಗಳನ್ನು ತೆಗೆದುಕೊಂಡು ಈ ನಂದಿನೀಧೇನುವನ್ನು ನನಗೆ ಕೊಡದೆ ಇರುವುದಾದರೆ, ನಾನು ಅದನ್ನು ಬಲಾತ್ಕಾರದಿಂದಲೇ ತೆಗೆದುಕೊಂಡು ಹೋಗುವೆನು. ಅದಕ್ಕೇನು ಹೇಳುವಿರಿ?" ಎಂದನು. ಅದಕ್ಕೆ ವಸಿಷ್ಠ ಮುನಿಯು "ಮಹಾರಾಜಾ, ನೀನು ಅಧಿಕಾರ ಮತ್ತು ಪ್ರಬಲ ಪರಾಕ್ರಮ ದರ್ಪಗಳುಳ್ಳವನೇನೋ ನಿಜ. ಆದಕಾರಣ, ಈ ವಿಷಯದಲ್ಲಿ ಇನ್ನು ಆಲೋಚಿಸಬೇಕಾದುದೇನಿದೆ? ನಿನ್ನಿಷ್ಟಬಂದಂತೆ ಮಾಡು," ಎಂದುತ್ತರಕೊಟ್ಟನು.

ಹೀಗೆಂದ ಒಡನೆಯೇ ವಿಶ್ವಾಮಿತ್ರನು ಚಂದ್ರಕಾಂತಿಯಂತೆ ಬೆಳ್ಳಗೆ ಪ್ರಕಾಶಿಸುತ್ತಿದ್ದ ಆ ಧೇನುವನ್ನು ಹಿಡಿದೆಳೆದಾಡಿ ಕೋಲಿನಿಂದ ಹೊಡೆದು ಸೆಳೆದುಕೊಂಡು ಹೋಗಲು ಪ್ರಯತ್ನಿಸಿದನು. ಆದರೂ ಆಧೇನುವು ವಸಿಷ್ಠನ ಬಳಿಯಿಂದ ಚಲಿಸದೆ ತಲೆಯೆತ್ತಿ ಕೂಗುತ್ತ ನಿಂತೇ ಇತ್ತು. ಆಗ ಆ ಮುನಿಯು "ಓ ನಂದಿನೀ, ನಿನ್ನ ಆರ್ತಸ್ವರವನ್ನು ಕೇಳುತ್ತಲೇ ಇರುವೆನು. ಆದರೆ, ವಿಶ್ವಾಮಿತ್ರ ರಾಜನು ನಿನ್ನನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗಲು ಪ್ರಯತ್ನಿಸಿರುವನು. ನಾನಾದರೋ ಕೇವಲ ಕ್ಷಮಾಗುಣದಿಂದ ಕೂಡಿದ ಬಡ ಬ್ರಾಹ್ಮಣನು. ಏನುಮಾಡಲಿ? ನಿನಗೆ ಹೋಗಲಿಷ್ಟವಿಲ್ಲದಿದ್ದರೆ ನೀನಿಲ್ಲಿಯೇ ಇರು. ನಿನ್ನನ್ನು ಕಳುಹಿಸುವ ಇಷ್ಟವು ನನಗಿಲ್ಲವೇ ಇಲ್ಲ," ಎಂದನು. ಅದನ್ನು

ಕೇಳಿ ನಂದಿನಿಗೆ ಧೈರ್ಯವುಂಟಾಯಿತು. ಈವರೆಗೆ ವಿಶ್ವಾಮಿತ್ರನ ಸೈನ್ಯವು ಸಹ ಮುಂದೆ ಬಂತು. ಅದನ್ನು ನೋಡಿ ನಂದಿನೀಧೇನುವಿಗೆ ಮಹಾ ಕೋಪಬಂದು ಕಣ್ಣುಗಳು ಕೆಂಡಗಳಂತಾದವು. ದೇಹವೆಲ್ಲವೂ ಮಧ್ಯಾಹ್ನದ ಸೂರ್ಯನಂತೆ ಜ್ವಾಲಾಮಯವಾಯಿತು; ಒದರುತ್ತಿದ್ದ ಬಾಲದಿಂದ ಕೆಂಡಗಳ ಮಳೆಯೇ ಸುರಿಯಲಾರಂಭವಾಯಿತು. ವಿಶ್ವಾಮಿತ್ರನ ಸೈನ್ಯವು ಬಳಿಗೆ ಬರುವಷ್ಟರೊಳಗಾಗಿ, ಅದು ಮೈಯನ್ನೊದರಲು, ಅಂಗಾಂಗಗಳಿಂದಲೂ ಅಸಂಖ್ಯಾತವೆನಿಸಿದ ಆಯುಧಪಾಣಿಗಳಾದ ಭಟರ ಸೇನೆಗಳು ಜನಿಸಿದವು. ಬಾಲದಿಂದ ಪಲ್ಲವರೂ, ಕೆಚ್ಚಲಿನಿಂದ ದ್ರವಿಡರೂ ಶಕರೂ, ಹೊಟ್ಟೆಯಿಂದ ಯವನರೂ ಶಬರರೂ, ಪಕ್ಕೆಗಳಿಂದ ಶರವಣರೂ, ಬಾಯಿ ನೊರೆಯಿಂದ ಕಿರಾತರೂ, ಯವನರೂ, ಸಿಂಹಳರೂ, ಬರ್ಬರರೂ, ಪುಳಿಂದರೂ, ಚೀಣರೂ, ಹೂಣರೂ, ಕೇರಳರೂ, ಮ್ಲೇಚ್ಛರೇ ಮೊದಲಾದ ನಾನಾವಿಧ ವೀರಭಟರ ಸೈನ್ಯಗಳು ಹುಟ್ಟಿ ವಿಶ್ವಾಮಿತ್ರನ ಸೈನ್ಯದ ಮೇಲೆ ಬಿದ್ದು ಹೊಡೆಯಲಾರಂಭಿಸಿದವು. ನಾನಾವಿಧವಾದ ಆಯುಧಗಳನ್ನು ಧರಿಸಿ ಕದನಕ್ಕೆ ಸಿದ್ಧವಾಗಿ ಬಂದಿದ್ದ ವಿಶ್ವಾಮಿತ್ರನ ಸೈನ್ಯವು ಈ ನಂದಿನಿಯ ಸೈನ್ಯದ ಆಯುಧಗಳ ಪೆಟ್ಟನ್ನು ತಡೆಯಲಾರದೆ ರಾಜನ ಎದುರಲ್ಲೇ ದಿಕ್ಕು ದಿಕ್ಕುಗಳಿಗೂ ಪಲಾಯನ ಮಾಡಿತು. ನಂದಿನಿಯ ಸೈನ್ಯವು ಅಷ್ಟು ಆಗ್ರಹಗೊಂಡಿದ್ದರೂ, ವಿಶ್ವಾಮಿತ್ರನ ಸೈನ್ಯದಲ್ಲಿ ಒಬ್ಬನನ್ನಾದರೂ ಕೊಲ್ಲಲಿಲ್ಲ. ನಂದಿನಿಯು ರಾಜನ ಸೈನ್ಯವನ್ನು ಎಪ್ಪತ್ತೇಳು ಮೈಲಿಗಳ ದೂರಕ್ಕೆ ಓಡಿಸಿ ಬಿಟ್ಟಿತು. ಆ ಸೈನ್ಯವು ಎದೆಯೊಡೆದು ಆ ಬ್ರಾಹ್ಮಣನ ಶಕ್ತಿಯಿಂದಾಶ್ಚರ್ಯಪಟ್ಟು ಘೀಳಿಡುತ್ತ ತಲೆಗಳುಳಿದರೆ ಸಾಕೆಂದು ಓಡಿಹೋಯಿತು. ಇದೆಲ್ಲವನ್ನೂ ನೋಡಿದ ವಿಶ್ವಾಮಿತ್ರನು ಬಹಳ ಬೇಸರಪಟ್ಟು, "ಧಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮತೇಜೋ ಬಲಂ ಬಲಂ (ಕ್ಷತ್ರಿಯ ಬಲಕ್ಕೆ ಧಿಕ್ಕಾರವಿರಲಿ, ಬ್ರಾಹ್ಮಣ ತೇಜಸ್ಸಿನ ಬಲವೇ ಬಲ) ಆದಕಾರಣ, ತಪೋನಿಷ್ಠೆಯಿಂದುಂಟಾದ ಬಲವೇ ನಿಜವಾದ ಬಲ" ಎಂಬದಾಗಿ ಹೇಳಿ, ತನ್ನ ರಾಜ್ಯಕೋಶ ವಿಭವ ಸೌಖ್ಯಗಳೆಲ್ಲವನ್ನೂ ತ್ಯಜಿಸಿ, ತಾನೂ ತಪಸ್ಸಿಗೆ ಕುಳಿತನು. ಬಹು ಕಾಲದ ಮೇಲೆ ಆತನಿಗೆ ತಪಸ್ಸಿದ್ಧಿಯಾಗಿ ಕಡೆಗೆ ಆತನು ಬ್ರಹ್ಮರ್ಷಿತ್ವವನ್ನು ಪಡೆದು, ದೇವೇಂದ್ರನ ಜೊತೆಯಲ್ಲಿ ಅಮೃತಪಾನವನ್ನು ಸಹ

ಮಾಡಿದನು," ಎಂಬದಾಗಿ ಅಂಗಾರಪರ್ಣನು ಹೇಳಿದ ವೃತಾಂತವನ್ನು ಕೇಳಿ ಅರ್ಜುನನು ಸಂತೋಷಪಟ್ಟು, ಆತನ ಮುಖದಿಂದ **ಕಲ್ಮಾಷ ಪಾದನ** ಕಥೆಯನ್ನೂ, **ಪರಾಶರರ** ಜನನ, **ಕಾರ್ತವೀರ್ಯನ** ಚರಿತ್ರೆ, ಬಡಬಾಗ್ನಿಯ ವೃತ್ತಾಂತ ಮೊದಲಾದವುಗಳನ್ನೂ ಕೇಳಿ, ಆತನನ್ನು ಕುರಿತು, "ಗಂಧರ್ವರಾಜಾ, ನೀನು ಈವರೆಗೂ ಬ್ರಾಹ್ಮಣ ಶಕ್ತಿಯನ್ನು ಕುರಿತು ಹೇಳಿ ನಮ್ಮನ್ನಾನಂದಪಡಿಸಿದೆ. ಇನ್ನು ನಾವುಗಳು ನಮ್ಮ ಪುರೋಹಿತನನ್ನಾಗಿ ನಿಯಮಿಸಿಕೊಳ್ಳಲು ಅರ್ಹನಾದ ಬ್ರಾಹ್ಮಣನು ಯಾರು? ದಯೆಯಿಟ್ಟು ಅದನ್ನು ಹೇಳಬೇಕು," ಎಂದು ಕೇಳಲು, ಅಂಗಾರಪರ್ಣನು, "ಪಾರ್ಥಾ, ಈ ಅರಣ್ಯದಲ್ಲಿ **ಉತ್ಕಚಕ** ವೆಂಬ ಒಂದು ಪವಿತ್ರ ಕ್ಷೇತ್ರವಿರುವುದು. ಅಲ್ಲಿ **ಧೌಮ್ಯ**ನೆಂಬ ಮುನಿಯು ತಪಸ್ಸು ಮಾಡುತ್ತಿರುವನು. ಬೇಕಾದರೆ, ಆತನನ್ನು ನೀವು ನಿಮ್ಮ ಪುರೋಹಿತನನ್ನಾಗಿ ಇಟ್ಟುಕೊಳ್ಳಬಹುದು," ಎಂದು ಹೇಳಿದನು. ಅದಕ್ಕೆ ಸಂತೋಷಪಟ್ಟು ಅರ್ಜುನನು ಗಂಧರ್ವನಿಗೆ ತನ್ನಲ್ಲಿದ್ದ ಆಗ್ನೇಯಾಸ್ತ್ರವನ್ನು ಸಮಂತ್ರಕವಾಗಿ ಕೊಟ್ಟು, ತಾನು ಆತನಿಂದ ಚಾಕ್ಷುಷೀ ವಿದ್ಯೆಯನ್ನು ಕಲಿತುಕೊಂಡು, "ಗಂಧರ್ವೋತ್ತಮಾ, ನೀನು ನಮಗೆ ದಯಮಾಡಿಕೊಟ್ಟ ದಿವ್ಯಾಶ್ವಗಳು, ಇನ್ನು ಸ್ವಲ್ಪಕಾಲ ನಿನ್ನ ಬಳಿಯಲ್ಲಿಯೇ ಇರಲಿ, ಸಮಯ ಬಂದಾಗ ನಾವು ಅವುಗಳನ್ನು ನಿನ್ನಿಂದ ತೆಗೆದುಕೊಳ್ಳುವೆವು," ಎಂದು ಹೇಳಲು, ಅಂಗಾರಪರ್ಣನು ಆಗಬಹುದೆಂದು ಒಪ್ಪಿ ಆಶೀರ್ವದಿಸಿದನು. ತರುವಾಯ ಪಾಂಡವರೂ ಅಂಗಾರಪರ್ಣನೂ ಸಂತೋಷದಿಂದ ಪರಸ್ಪರವಾಗಿ ಭಾಗೀರಥೀ ತೀರದಿಂದ ಬೀಳ್ಕೊಟ್ಟು ತಮ್ಮ ತಮ್ಮ ಮಾರ್ಗಗಳನ್ನು ಹಿಡಿದು ಹೋದರು.

ಅಧ್ಯಾಯ ೧೫

## ದ್ರೌಪದೀ ಸ್ವಯಂವರ

ಅನಂತರ ಪಾಂಡವರು, ಗಂಧರ್ವನು ಹೇಳಿದಂತೆ 'ಉತ್ಕಚಕ' ಕ್ಷೇತ್ರಕ್ಕೆ ಹೋಗಿ ಧೌಮ್ಯ ಮಹರ್ಷಿಗಳ ಮತ್ತು ಅಲ್ಲಿನ ಮುನಿಗಳ ಆಶೀರ್ವಾದಗಳನ್ನು ಹೊಂದಿದರು. ಧೌಮ್ಯರು ಕುಂತೀಪುತ್ರರ ಪ್ರಾರ್ಥನೆಯನ್ನು ಗೌರವಿಸಿ, ಅವರನ್ನು ತಮ್ಮ ಶಿಷ್ಯರನ್ನಾಗಿ ಪರಿಗ್ರಹಿಸಿ ತಾವು ಅವರ ಕುಲಗುರುಗಳಾಗಿರಲು ಒಪ್ಪಿಕೊಂಡರು. ಅನಂತರ ಪಾಂಡವರು ಸಂತೋಷಪಟ್ಟು ಅಲ್ಲಿಂದ ದ್ರೌಪದೀ ಸ್ವಯಂವರಕ್ಕಾಗಿ ಪಾಂಚಾಲನಗರಿಗೆ ಪ್ರಯಾಣಮಾಡಿದರು. ಮಾರ್ಗದಲ್ಲಿ ಪಾಂಚಾಲ ನಗರಕ್ಕೆ ಸ್ವಯಂವರವನ್ನು, ನೋಡಲು ಹೋಗುತ್ತಿದ್ದ ಬ್ರಾಹ್ಮಣ ರನೇಕರು ಅವರನ್ನು ಸಂಧಿಸಿ ಹಿತವಚನಗಳನ್ನು ಹೇಳಿದರು. ಹೀಗೆ ಅವರು ತಮ್ಮ ಪ್ರಯಾಣವನ್ನು ಮುಂದುವರಿಸಿ ಬರುತ್ತಿರುವಾಗ, ಮಾರ್ಗದಲ್ಲಿ ಪುನಃ ಶ್ರೀ ವೇದವ್ಯಾಸ ಮಹರ್ಷಿಯು ಅವರನ್ನು ಸಂಧಿಸಿ ಆಶೀರ್ವದಿಸಿ ಕಳುಹಿಸಿದನು. ಅವರೆಲ್ಲರೂ ಪಾಂಚಾಲ ನಗರವನ್ನು ಸೇರಿ ಅಲ್ಲಿ ಒಬ್ಬ ಕುಂಬಾರನ ಮನೆಯಲ್ಲಿ ಇಳಿದುಕೊಂಡರು. ಅಲ್ಲಿ ಅವರು ಬ್ರಾಹ್ಮಣರಂತೆ ಭಿಕ್ಷಾಟನದಿಂದ ಜೀವನ ಮಾಡಿಕೊಂಡಿದ್ದರು. ಇವರ ನಿಜಾಂಶವೇನೆಂಬುದು ಯಾರಿಗೂ ಗೊತ್ತಾಗಲಿಲ್ಲ.

ಪಾಂಚಾಲಾಧಿಪತಿಯಾದ ಯಜ್ಞಸೇನ ರಾಜನಿಗೆ, ತನ್ನ ಪುತ್ರಿ ಯಾದ ದ್ರೌಪದಿಯನ್ನು ಅರ್ಜುನನಿಗೇ ಕೊಟ್ಟು ವಿವಾಹ ಮಾಡ ಬೇಕೆಂಬ ಕುತೂಹಲ ವಿದ್ದರೂ, ಅದನ್ನು ಮಾತ್ರ ಆತನು ಯಾರಿಗೂ ತಿಳಿ ಸಿರಲಿಲ್ಲ. ಆದಕಾರಣ ಆತನು, ಅರ್ಜುನ ನಿಂದಲ್ಲದೆ ಇತರರಿಗೆ ಬಾಗಿಸಲು ಅಸಾಧ್ಯವಾಗಿರುವಂತೆ ಒಂದು ಮಹಾ ಧನುಸ್ಸನ್ನು ಮಾಡಿಸಿ, ಮೇಲ್ಗಡೆ ಯಲ್ಲಿ ಯಂತ್ರದ ಮೂಲಕ ಸುತ್ತುತ್ತಿರುವ ಒಂದು ಮತ್ಸ್ಯದ ಗುರಿಯನ್ನೇರ್ಪಡಿಸಿ, ಕೆಲವು ಬಾಣಗಳನ್ನು ತರಿಸಿಟ್ಟು, ಆ ಧನುಸ್ಸಿಗೆ ಹೆದೆಗಟ್ಟಿ ಆ ಬಾಣಗಳಿಂದ ಮೇಲಣ ಗುರಿಯನ್ನು ಮಧ್ಯದಲ್ಲಿದ್ದ ಚಕ್ರದ ರಂಧ್ರದೊಳಗಿನಿಂದ ಹೊಡೆದ ವೀರನಿಗೆ ತನ್ನ ಮಗಳಾದ

ಕೃಷ್ಣೆಯನ್ನು ಕೊಟ್ಟು ವಿವಾಹ ಮಾಡುವೆನೆಂಬದಾಗಿ ಪಣವನ್ನೇರ್ಪಡಿಸಿ ಸ್ವಯಂವರವನ್ನು ಪ್ರಕಟಿಸಿದ್ದನು.

ಈ ಪ್ರಕಟನೆಯನ್ನು ಕೇಳಿ ಅನೇಕ ಮಂದಿ ರಾಜರೂ ರಾಜಕುಮಾರರೂ ಸ್ವಯಂವರಕ್ಕೆ ಬಂದುದಲ್ಲದೆ, ಈ ಮಹೋತ್ಸವವನ್ನು ನೋಡಲು, ಅನೇಕ ಮಂದಿ ಪ್ರಸಿದ್ಧರಾದ ಮಹರ್ಷಿಗಳೂ ಸಹ ಅಲ್ಲಿಗೆ ಬಂದರು. ದ್ರುಪದರಾಜನು, ಅವರವರಿಗೆ ತಕ್ಕಂತೆ ಎಲ್ಲರಿಗೂ ಸರಿಯಾದ ಮರ್ಯಾದೆಗಳನ್ನು ನಡೆಯಿಸಿ ಉಪಚರಿಸಿ ಅನುಕೂಲಗಳನ್ನು ಮಾಡಿಸಿಕೊಟ್ಟನು. ಪಾಂಚಾಲನಗರದ ಈಶಾನ್ಯ ಭಾಗದ ವಿಶಾಲವಾದ ಬಯಲಿನಲ್ಲಿ, ಸುತ್ತಲೂ ದಿವ್ಯವಾದ ರಾಜಭವನಗಳೂ ನೂರಾರು ಬಾಗಿಲುಗಳೇ ಮೊದಲಾದವುಗಳಿಂದ ಕೂಡಿ, ಸುವರ್ಣ ರತ್ನಮಯ ದಿವ್ಯಾಲಂಕಾರಗಳಿಂದ ಬಹಳ ಅಂದವಾಗಿ **ಸ್ವಯಂವರ ಮಂಟಪವು** ಕಟ್ಟಲ್ಪಟ್ಟದ್ದಿತು. ಅಗರು ಶ್ರೀಗಂಧ ಪುನುಗು ಜವಾಜಿ ಕಸ್ತೂರಿ ಕುಂಕುಮ ಕೇಸರಿ ಪಚ್ಚಕರ್ಪೂರ ಮೊದಲಾದ ಸುಗಂಧ ದ್ರವ್ಯಗಳ ಮನೋಹರವಾದ ವಾಸನೆಯೇ ಅಲ್ಲಿ ಎಲ್ಲೆಲ್ಲಿಯೂ ತುಂಬಿತ್ತು. ನಾನಾ ವಿಧವಾದ ಸಾವಿರಾರು ವಾದ್ಯಗಳು ಘೋರ್ಗರೆಯುತ್ತ ದಿಗಂತಗಳೇ ಪ್ರತಿಧ್ವನಿಗೊಡುತ್ತಿದ್ದವು. ವಿಧ ವಿಧವಾದ ಪರಿಮಳ ಭರಿತ ಪುಷ್ಪ ಮಾಲೆಗಳಿಂದ ಮಂಟಪವೆಲ್ಲವನ್ನೂ ಅಂದವಾಗಿ ಅಲಂಕಾರಮಾಡಿದ್ದುದಲ್ಲದೆ ಎಲ್ಲೆಲ್ಲಿಯೂ ಸುಗಂಧ ಧೂಳಿಯು ಚೆಲ್ಲಿದ್ದಿತು. ಈ ಸ್ವಯಂವರ ಮಂಟಪದಲ್ಲಿದ್ದ ಸಾವಿರಾರು ಅನರ್ಘ ರತ್ನಖಚಿತ ಪೀಠಗಳಲ್ಲಿ, ನಾನಾ ದೇಶದ ರಾಜಾಧಿರಾಜರುಗಳೂ ರಾಜ ಕುಮಾರರುಗಳೂ, ಮಹರ್ಷಿಗಳೂ ಬ್ರಾಹ್ಮಣರೂ ಇತರರೂ ಸಹ ತಮ್ಮ ಸ್ಥಾನಾನುಸಾರವಾಗಿ ಕುಳಿತಿದ್ದರು. ಪಾಂಡವರು ಬ್ರಾಹ್ಮಣರ ಗುಂಪಿನಲ್ಲಿ ಕುಳಿತು ಪಾಂಚಾಲ ರಾಜನ ಐಶ್ವರ್ಯ ವೈಭವಾದಿಗಳನ್ನು ನೋಡಿ ಆಶ್ಚರ್ಯಪಟ್ಟರು. ಅಲ್ಲಿಗೆ ಅನೇಕ ಮಂದಿ ಗಾಯಕರೂ, ನರ್ತಕಿಯರೇ ಮೊದಲಾದ ಕಲಾವಿದರೂ ಲೆಕ್ಕವಿಲ್ಲದೆ ಬಂದು ತಮ್ಮ ಕುಶಲ ವಿದ್ಯಾಚಾತುರ್ಯಗಳನ್ನು ಪ್ರದರ್ಶಿಸುತ್ತಿದ್ದರು. ಹೀಗೆ ಹದಿನೈದು ದಿನಗಳ ವರೆಗೆ ನಿತ್ಯವೂ ಸ್ವಯಂವರದ ಮಂಟಪದಲ್ಲಿ ಸಭೆಯು ಸೇರಿ, ಅನೇಕ ಕುಶಲವಿದ್ಯಾ ಪ್ರದರ್ಶನಗಳು ನಡೆಯುತ್ತಿದ್ದವು. ಸಭೆಯು ದಿನ ದಿನಕ್ಕೆ ಹೆಚ್ಚುತ್ತ

ಬಂತು. ಹದಿನಾರನೆಯ ದಿನ ದ್ರುಪದರಾಜ ಪುತ್ರಿಯು ದಿವ್ಯಾಲಂಕಾರ ಭೂಷಿತೆಯಾಗಿ, ಒಂದು ಸುವರ್ಣ ಭಾಜನದಲ್ಲಿ ಅರ್ಘ್ಯಪಾದ್ಯಾದಿ ಪೂಜಾ ವಸ್ತುಗಳನ್ನೂ, ಒಂದು ಅತ್ಯುತ್ತಮವಾದ ಪುಷ್ಪಮಾಲಿಕೆಯನ್ನೂ ಇಟ್ಟು ಕೊಂಡು ಸಭೆಗೆ ಬಂದಳು. ಸಕಲ ವಾದ್ಯಗಳೂ ಏಕಕಾಲದಲ್ಲಿ ಮೊಳಗಿ ದಿಕ್ತಟಗಳು ಪ್ರತಿಧ್ವನಿಗೊಡುತ್ತಿರಲು, ಪುರೋಹಿತನು ಹೋಮಾಗ್ನಿಗೆ ಪೂರ್ಣಾಹುತಿಯನ್ನು ಹಾಕಿ ಸಮಸ್ತ ದೇವತೆಗಳನ್ನೂ ತೃಪ್ತಿಗೊಳಿಸಿ ದನು. ಬ್ರಾಹ್ಮಣರ ಸ್ವಸ್ತಿವಾಚನವಾದೊಡನೆಯೇ ಸಕಲ ವಾದ್ಯಗಳೂ ನಿಂತು ಸಭೆಯು ಶಾಂತ ಸಾಗರದಂತಾಯಿತು. ಆಗ ಧೃಷ್ಟದ್ಯುಮ್ನನು ಸಭಾಮಧ್ಯದಲ್ಲಿ ಎದ್ದುನಿಂತು ಮೇಘಧ್ವನಿಯಂತೆ ಗಟ್ಟಿಯಾಗಿಯೂ ಗಂಭೀರವಾಗಿಯೂ ಇದ್ದ ಮಧುರ ವಾಣಿಯಿಂದ, ಅಲ್ಲಿ ಸೇರಿದ್ದ ಸಭ್ಯ ರೆಲ್ಲರನ್ನೂ ಕುರಿತು ಕೆಲವು ಮುಖ್ಯವಾದ ಮಾತುಗಳನ್ನು ಹೇಳಿದನು. ಏನೆಂದರೆ:—"ಇಲ್ಲಿ ದಯಮಾಡಿ ನೆರೆದಿರತಕ್ಕ ರಾಜವಂಶೀಯರೇ, ಇದೋ, ಇಲ್ಲಿ ಒಂದು ಧನುಸ್ಸೂ, ಕೆಲವು ತೀಕ್ಷ್ಣಬಾಣಗಳೂ ಇರುವವು. ಇವುಗಳಿಂದ, ಆ ಮೇಲೆ ಕಾಣುವ ಗುರಿಗೆ ಈ ಯಂತ್ರದ ರಂಧ್ರದ ಮಾರ್ಗವಾಗಿ ಬಾಣ ಪ್ರಯೋಗಮಾಡಿ ಸರಿಯಾಗಿ ಹೊಡೆಯ ಬೇಕಾಗಿದೆ. ಸದ್ವಂಶ ಸಂಭವನಾಗಿ ಸೌಂದರ್ಯ ವಿದ್ಯಾಶಕ್ತಿಸಂಪನ್ನ ನಾದ ಪುರುಷನು ಈ ಪಣದಲ್ಲಿ ಗೆಲ್ಲುವುದಾದರೆ, ಅತನು ಈ ನನ್ನ ತಂಗಿಯಾದ ಕೃಷ್ಣೆಯನ್ನು ಪತ್ನಿಯನ್ನಾಗಿ ಪಡೆಯುವನು," ಎಂಬ ದಾಗಿ ಹೇಳಿ ಅಲ್ಲಿ ನೆರೆದಿದ್ದ ಎಲ್ಲರ ಹೆಸರು, ಕುಲ ವಿದ್ಯಾ ಪರಾಕ್ರಮಾದಿಗಳೆಲ್ಲವನ್ನೂ ತನ್ನ ತಂಗಿಗೆ ಹೇಳುತ್ತ ಬಂದನು. ದುರ್ಯೋಧನಾದಿ ಧೃತರಾಷ್ಟ್ರಪುತ್ರರನ್ನೂ, ಕರ್ಣ, ಶಕುನಿ, ಸೌಬಲ, ಬೃಹದ್ಬಲಾದಿಗಳನ್ನೂ, ಗಾಂಧಾರರಾಜಪುತ್ರರನ್ನೂ, ಅಶ್ವತ್ಥಾಮ, ಭೋಜ, ದಂಡಧರ, ಚೇಕಿತಾನ, ಚಂದ್ರಸೇನ, ಶಲ್ಯ, ಸೋಮದತ್ತ ಮೊದಲಾದ ಅತಿರಥ ಮಹಾರಥರನ್ನೂ, ಬಲರಾಮ, ಶ್ರೀಕೃಷ್ಣ, ಸಾಂಬ, ಅಕ್ರೂರ, ಸಾತ್ಯಕಿ, ಉದ್ಧವ, ಅನಿರುದ್ಧ ಮೊದಲಾದ ಯಾದವ ರನ್ನೂ, ಭಗೀರಥ, ಜಯದ್ರಥ, ಬೃಹದ್ರಥ, ಶಿಶುಪಾಲ, ಜರಾಸಂಧಾದಿ ಮಹಾ ವೀರರನ್ನೂ ಇನ್ನೂ ಜಗತ್ಪ್ರಸಿದ್ಧರಾಗಿದ್ದ ಅಸಂಖ್ಯಾತ ರಾಜ ರನ್ನೂ, ಮಹಾ ಪರಾಕ್ರಮಿಗಳನ್ನೂ ತೋರಿಸಿ, ಅವರ ವೃತ್ತಾಂತಗ

ಳೆಲ್ಲವನ್ನೂ ವಿವರಿಸಿ ಹೇಳಿ, "ತಂಗೀ, ಇವರೆಲ್ಲರೂ ನಿನ್ನ ಕೈಹಿಡಿಯಲು ಅತಿಕುತೂಹಲದಿಂದ ಬಂದಿರುವರು. ಇವರುಗಳೆಲ್ಲರೂ, ನಮ್ಮ ಪಣದಂತೆ ಗುರಿಯನ್ನು ಬಾಣದಿಂದ ಹೊಡೆಯಲು ಪ್ರಯತ್ನಿಸುವರು. ಇವರುಗಳಲ್ಲಿ ಯಾವ ಧೀರನು ಗುರಿಗೆ ಸರಿಯಾಗಿ ಬಾಣವನ್ನು ಹೊಡೆದು ಪಣವನ್ನು ಗೆಲ್ಲುವನೋ ಆ ಮಹಾವೀರನನ್ನು ನೀನು ನಿನ್ನ ಪತಿಯನ್ನಾಗಿ ವರಿಸು," ಎಂಬದಾಗಿ ಹೇಳಿದನು.

ಅನಂತರ ಕೃಷ್ಣೆಯು, ಅಲಂಕಾರ, ಅಹಂಕಾರ, ಅಧಿಕಾರ, ಮಮಕಾರ, ಶಕ್ತಿ, ಯುಕ್ತಿ, ಕುಲ, ಬಲ, ಧನ, ಯೌವನ, ಮೊದಲಾದವುಗಳ ಮದದಿಂದ ತುಂಬಿತುಳುಕುತ್ತಿದ್ದ ರಾಜಕುಮಾರರುಗಳನ್ನು ನೋಡುತ್ತ ಬಂದು, ಪ್ರತಿಯೊಬ್ಬನೂ ತನ್ನನ್ನೇ ಕೃಷ್ಣೆಯು ಮೋಹಿಸಿ ವರಿಸುವಳೆಂಬ ನಂಬಿಕೆಯಿಂದ ಬೀಗುತ್ತಿದ್ದಂತೆ ಕಂಡ ಅವರುಗಳ ಮುಖಗಳನ್ನು ನೋಡಿ ಮನಸ್ಸಿನಲ್ಲೇ ವಿಸ್ಮಯ ಪಡುತ್ತಿದ್ದಳು.

ಈ ಸಮಯದಲ್ಲಿ ಅಲ್ಲಿದ್ದ ಶ್ರೀಕೃಷ್ಣನು, ಬೂದಿಮುಚ್ಚಿದ ಕೆಂಡಗಳಂತೆ ವೇಷಾಂತರದಿಂದ ಬ್ರಾಹ್ಮಣರ ಮಧ್ಯದಲ್ಲಿ ಕುಳಿತಿದ್ದ ಪಂಚಪಾಂಡವರನ್ನು ನೋಡಿ, ಮೆಲ್ಲನೆ ಬಲರಾಮನನ್ನು ಕುರಿತು, "ಅಣ್ಣಾ ಅಲ್ಲಿ ನೋಡು, ಆ ಬ್ರಾಹ್ಮಣರ ಗುಂಪಿನಲ್ಲಿ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವರು ಕುಳಿತಿರುವರು," ಎಂದು ತೋರಿಸಿದನು. ಬಲರಾಮನು ಅವರೆಲ್ಲರನ್ನೂ ನೋಡಿ, ಸಂತೋಷ ಸೂಚಕವಾದ ಮುಖದಿಂದ ಕೃಷ್ಣನ ಕಡೆಗೆ ತಿರುಗಿನೋಡಿ ಸುಮ್ಮನಾದನು. ಅಲ್ಲಿ ನೆರೆದಿದ್ದವರೆಲ್ಲರೂ ಮಹಾಪರಾಕ್ರಮಿಯಾದ ಶ್ರೀಕೃಷ್ಣನನ್ನು ನೋಡಿ ಹಲ್ಲು ಕಡಿಯುತ್ತ, ದ್ರುಪದ ರಾಜನ ಮುಖವನ್ನೇ ನೋಡುತ್ತಿದ್ದರೇ ಹೊರತು, ಯಾರೂ ಪಾಂಡವರನ್ನು ನೋಡಲೇ ಇಲ್ಲ.

ಅನಂತರ ಮನೋಹರವಾಗಿ ಮೊಳಗುತ್ತಿದ್ದ ಮಧುರ ವಾದ್ಯಘೋಷಗಳಲ್ಲಿ, ದಿವ್ಯಾಲಂಕಾರ ಭೂಷಿತರಾದ ಕರ್ಣ, ದುರ್ಯೋಧನ, ಸಾಲ್ವ, ಶಲ್ಯ, ಅಶ್ವತ್ಥಾಮ, ಮೊದಲಾದ ಮಹಾ ವೀರರೂ, ಕಳಿಂಗ, ವಂಗ, ಪಾಂಡ್ಯ, ಪೌಂಡ್ರ, ವಿದೇಹಾದಿ ಸಕಲ ದೇಶಗಳ ರಾಜಕುಮಾರರೂ, ಯವನಾಧಿಪತಿಪುತ್ರರೂ, ಇನ್ನೂ ಅನೇಕ ಮಂದಿ ರಾಜವಂಶದ ತರುಣರೂ ಸಹ ತಾವು ಕೃಷ್ಣಾದೇವಿಯ (ದ್ರೌಪದಿಯ) ನ್ನು

ಪಡೆಯ ಬಲ್ಲೆವೆಂಬ ನಂಬಿಕೆಯಿಂದ ತಮ್ಮ ವಿಧವಿಧವಾದ ಅಸ್ತ್ರ ವಿದ್ಯಾ ಕೌಶಲಗಳನ್ನು ಪ್ರದರ್ಶಿಸಿದರು. ಅನಂತರ ಇವರುಗಳೆಲ್ಲರೂ ಒಬ್ಬೊಬ್ಬ ರಾಗಿ ಯಂತ್ರದ ಬಳಿಗೆ ಬಂದು ಧನುಸ್ಸಿಗೆ ಹೆದೆಯನ್ನೇರಿಸಲು ಪ್ರಯತ್ನಿಸಿ ತಮ್ಮ ಧನುರ್ವಿದ್ಯಾ ಕೌಶಲವೆಲ್ಲವನ್ನೂ ಪ್ರದರ್ಶಿಸಿ ಶಕ್ತಿ ಯೆಲ್ಲವನ್ನೂ ಪ್ರಯೋಗಿಸಿ, ಕಡೆಗೆ ವಿಫಲರಾಗಿ ಧನುಸ್ಸಿನಿಂದ ಬಹು ದೂರ ಚಿಮ್ಮಲ್ಪಟ್ಟು ಪ್ರಜ್ಞೆತಪ್ಪಿ ಬಿದ್ದುಬಿಟ್ಟರು. ಅವರು ಧರಿಸಿದ್ದ ಆಭರಣಗಳೂ ಪುಷ್ಪಮಾಲಿಕೆಗಳೂ ದಿಕ್ಕು ದಿಕ್ಕಿಗೂ ಹಾರಿಬಿದ್ದವು. ಸ್ವಲ್ಪ ಹೊತ್ತಿನ ಮೇಲೆ ಅವರಿಗೆ ಜ್ಞಾನ ಬಂದು, ತಮ್ಮ ಪ್ರಯತ್ನವು ವಿಫಲವಾಯಿತೆಂಬ ದುಃಖದಿಂದ ಕುದಿಯುತ್ತ ತಮ್ಮ ತಮ್ಮ ಸ್ಥಾನ ಗಳಿಗೆ ಹೋಗಿ ಮೌನವಾಗಿ ಕುಳಿತರು.

ಹೀಗೆ ಅವಮಾನಿತರೂ ವಿಫಲರೂ ಆದ ರಾಜಕುಮಾರರ ರೀತಿ ಯನ್ನು ನೋಡಿ, ಮಹಾವೀರಾಗ್ರಣಿಯಾದ ಕರ್ಣನು ಆ ಧನುಸ್ಸಿನ ಬಳಿಗೆ ಹೋಗಿ ತಟ್ಟನೆ ಅದನ್ನು ಎತ್ತಿ ಅದಕ್ಕೆ ಹೆದೆಯೇರಿಸಿ, ನಾರಿಯ ಮೇಲೆ ಬಾಣಗಳನ್ನಿಟ್ಟನು. ಆಗ ಸೂರ್ಯನಂತೆ ತೇಜಃಪ್ರತಾಪಗಳಿಂದ ಶೋಭಿಸುತ್ತಿದ್ದ ಅವನನ್ನು ನೋಡಿ ಪಾಂಡವರು, "ಇವನೇ ಈ ಗುರಿಯನ್ನು ಹೊಡೆದು ಪಣವನ್ನು ಗೆದ್ದುಬಿಡುವನು," ಎಂಬದಾಗಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡರು. ಆದರೆ ದ್ರುಪದಪುತ್ರಿಯು, ಗಟ್ಟಿ ಯಾಗಿ, "ನಾನು ಸೂತಪುತ್ರನಾದವನನ್ನು ಪತಿಯಾಗಿ ಅಂಗೀಕರಿ ಸುವುದಿಲ್ಲ." ಎಂಬದಾಗಿ ಕೂಗಿಕೊಂಡಳು. ಅದನ್ನು ಕೇಳಿ ಕರ್ಣನು ಮಹಾಕೋಪದಿಂದಲೂ, ಅವಹೇಳನದಿಂದಲೂ ಸೂರ್ಯನ ಕಡೆಗೆ ನೋಡಿ, ತಾನಾಗಲೇ ಎತ್ತಿದ್ದ ಧನುಸ್ಸನ್ನು ಬೀಸಾಡಿ ಹೊರಟು ಹೋದನು. ಮಿಕ್ಕ ಕ್ಷತ್ರಿಯರು, ಅಸಾಧ್ಯ ಕಾರ್ಯವೆಂದು ಪಣವನ್ನು ಗೆಲ್ಲುವ ಪ್ರಯತ್ನ ವನ್ನೇ ಮಾಡಲಿಲ್ಲ. ಆಗ ದಮಘೋಷ ಪುತ್ರನಾದ ಶಿಶುಪಾಲನು, ಧನುಸ್ಸಿಗೆ ನಾರಿಯನ್ನು ಕಟ್ಟಲು ಪ್ರಯತ್ನಿಸಿ, ಸಾಧ್ಯವಾಗದೆ ನೆಲಕ್ಕೆ ಬಿದ್ದುಬಿಟ್ಟನು. ತರುವಾಯ ಮಹಾಪ್ರತಾಪಶಾಲಿಯಾದ ಜರಾ ಸಂಧನು ಬಂದು ಧನುಸ್ಸನ್ನು ನೋಡಿ, ಅದನ್ನು ಕಟ್ಟಲು ಪ್ರಯತ್ನಿಸಿ ಅವನೂ ಶಿಶುಪಾಲನಂತೆಯೇ ನೆಲಕ್ಕೆ ಬಿದ್ದು ವಿಫಲನಾದನು. ಇದ ರಿಂದ ಅವಮಾನಿತನಾಗಿ ಜರಾಸಂಧನು ಆ ಕೂಡಲೇ ತನ್ನ ರಾಜಧಾನಿಗೆ

ಪ್ರಯಾಣ ಮಾಡಿಬಿಟ್ಟನು. ಅನಂತರ, ಮದ್ರ ದೇಶಾಧಿಪತಿಯಾದ ಶಲ್ಯನು ಬಂದು ಪ್ರಯತ್ನಿಸಿ ಅವರಂತೆಯೇ ನೆಲಕ್ಕೆ ಬಿದ್ದು ಮೊಣಕಾಲ ನ್ನೊಡೆದುಕೊಂಡು ಅವಮಾನಿತನಾದನು. ಇದನ್ನು ನೋಡಿ, ಸಭೆ ಯಲ್ಲಿಯ ಜನರು ನಾನಾ ವಿಧವಾಗಿ ಮಾತುಗಳನ್ನಾಡಿಕೊಳ್ಳುತ್ತಿದ್ದರು.

ಹೀಗೆ ರಾಜರೆಲ್ಲರೂ ವಿಫಲರಾದುದನ್ನು ಕಂಡು ಬ್ರಾಹ್ಮಣರ ನಡುವೆ ಕುಳಿತಿದ್ದ ಅರ್ಜುನನು ಮೆಲ್ಲನೆ ಮೇಲಕ್ಕೆ ಎದ್ದನು. ಅವನ ಮುಖದ ಕಳೆಯನ್ನೂ, ಅವನು ಧನುಸ್ಸಿನ ಬಳಿಗೆ ಹೋಗುತ್ತಿದ್ದು ದನ್ನೂ ನೋಡಿ, ಅಲ್ಲಿದ್ದ ಅನೇಕ ಮಂದಿ ಬ್ರಾಹ್ಮಣೋತ್ತಮರು ತಮ್ಮ ಕೃಷ್ಣಾಜಿನಗಳನ್ನು ಒದರುತ್ತ ಸಂತೋಷ ಧ್ವನಿಗಳನ್ನು ಮಾಡಿದರು. ಕೆಲವರು ಇದರಿಂದ ಸಂತೋಷಪಟ್ಟರೂ, ಮತ್ತೆ ಕೆಲವರಿಗೆ ಇದರಿಂದ ಅಸಮಾಧಾನವೇ ಆಯಿತು. ಆದರಿಂದ ಅವರಲ್ಲಿ ಕೆಲವರು, "ಏನಿದು? ವಿಚಿತ್ರ! ಅಸ್ತ್ರವಿದ್ಯೆಯನ್ನೇ ಅರಿಯದ ದುರ್ಬಲನಾದ ಈ ಬ್ರಾಹ್ಮಣ ತರುಣನು, ವೀರಾಧಿವೀರರಾದ ಶಲ್ಯನೇ ಮೊದಲಾದ ಅಸ್ತ್ರ ಶಸ್ತ್ರ ಕಲಾ ಪಾರಂಗತರೂ, ಅದ್ಭುತ ಪರಾಕ್ರಮಿಗಳೂ ಕಟ್ಟಲಾರದೆ ಹೋದ ಧನುಸ್ಸನ್ನು ಎತ್ತಿ ಅದಕ್ಕೆ ಹೆದೆಗಟ್ಟುವುದೆಂದರೇನು? ಆ ಬಾಣಗಳಿಂದ ಯಂತ್ರ ರಂಧ್ರದಲ್ಲಿ ಬಾಣವು ಹೋಗುವಂತೆ ಗುರಿಯನ್ನು ನೋಡಿ ಹೊಡೆಯುವುದೆಂದರೇನು? ಇಂತಹ ಹುಡುಗಾಟದ ಪ್ರಯತ್ನ ದಲ್ಲಿ ಇವನು ವಿಫಲನಾಗಿ, ಇಲ್ಲಿ ನೆರೆದಿರುವ ರಾಜರುಗಳ ಅಪಹಾಸ್ಯ ಕ್ಕೀಡಾಗುವುದೇನೋ ನಿಜ. ಇದರಿಂದ ನಮ್ಮ ಬ್ರಾಹ್ಮಣರ ಗುಂಪಿಗೇ ಅವಮಾನವಾಗುವುದು. ಆದಕಾರಣ, ಈ ಒಣಜಂಬದ ಹುಡುಗಾಟದ ಕೆಲಸಕ್ಕೆ ಹೋಗದಂತೆ ತಡೆದುಬಿಡಿ, ಇವನನ್ನು ಮೊದಲು ತಡೆದುಬಿಡಿ," ಎಂಬದಾಗಿ ಕೂಗಿಕೊಂಡರು. ಅದನ್ನು ಕೇಳಿ, ಆ ಬ್ರಾಹ್ಮಣ ತರುಣನು "ಸ್ವಾಮೀ, ಸಹಿಸಿ; ನಾವು ಅಪಹಾಸ್ಯಕ್ಕೀಡಾಗುವುದೂ ಇಲ್ಲ. ಅವ ಮಾನವನ್ನು ಹೊಂದುವುದೂ ಇಲ್ಲ. ರಾಜರುಗಳಿಗೆ ಅಸಮಾಧಾನವೂ ಆಗುವುದಿಲ್ಲ," ಎಂಬದಾಗಿ ಹೇಳಿದನು. ಇದನ್ನು ಕೇಳಿ ಮತ್ತೆ ಕೆಲವರು ಬ್ರಾಹ್ಮಣರು, "ಸ್ವಾಮೀ, ಆಜಾನುಬಾಹುವೂ ಧೀರನೂ ಆಗಿ ಕಾಣುವ ಈತನಿಗೆ ಗುರಿಯನ್ನು ಹೊಡೆಯುವ ಶಕ್ತಿ ಯುಕ್ತಿಗಳಿಲ್ಲದೆ ಇದ್ದಲ್ಲಿ ಈತನು ಈ ಪ್ರಯತ್ನಕ್ಕೆ ತಾನಾಗಿ ಹೋಗುತ್ತಿರಲಿಲ್ಲ.

ನಿರಾಹಾರರಾಗಿಯೂ, ವಾತಾಶನದಿಂದಲೂ ಫಲಪರ್ಣಾಶನಗಳಿಂದಲೂ ತಪೋನಿರತರಾಗಿ ನಾನಾ ವ್ರತೋಪವಾಸಗಳನ್ನು ಮಾಡಿ ಬಡವಾದ ದೇಹವುಳ್ಳವರಾದರೂ ಬ್ರಾಹ್ಮಣರು ಈವರೆಗೆ ಸಾಧಿಸದಿರುವ ಕಾರ್ಯವೇ ಮೂರು ಲೋಕಗಳಲ್ಲಿಯೂ ಇಲ್ಲ. ಬ್ರಹ್ಮತೇಜಸ್ಸಿನ ಮುಂದೆ ಮತ್ತಿ ಯಾವ ತೇಜಸ್ಸೂ ನಿಲ್ಲಲಾರದು. ಆದಕಾರಣ, ಹಿರಿದಾಗಲಿ ಕಿರಿದಾಗಲಿ, ಯಾವ ಕಾರ್ಯವನ್ನು ಕೈಕೊಂಡರೂ ಅದರಲ್ಲಿ ಬ್ರಾಹ್ಮಣನು ವಿಫಲನಾಗುವನೆಂದೆಣಿಸಿ ಆತನನ್ನು ನಿರುತ್ಸಾಹಿಯನ್ನಾಗಿ ಮಾಡಬಾರದು. ಜಮದಗ್ನಿಪುತ್ರನಾದ ಪರಶುರಾಮನು ಪ್ರಪಂಚದ ಕ್ಷತ್ರಿಯರೆಲ್ಲರನ್ನೂ ಗೆಲ್ಲಲಿಲ್ಲವೇ? ಬ್ರಾಹ್ಮಣನಾದ ಅಗಸ್ತ್ಯನು ತನ್ನ ಬ್ರಹ್ಮತೇಜಸ್ಸಿನಿಂದ ಅಗಾಧವಾದ ಸಾಗರವನ್ನೇ ಹೀರಿಬಿಡಲಿಲ್ಲವೇ? ಅದರಿಂದ ಈ ತರುಣ ಬ್ರಾಹ್ಮಣನು ಧನುಸ್ಸನ್ನು ಬಾಗಿಸಿ ಅದಕ್ಕೆ ಹೆದೆಯೇರಿಸಿ ಗುರಿಯನ್ನು ಹೊಡೆಯಲಿ," ಎಂದರು. ಅದನ್ನು ಕೇಳಿ, ಅಲ್ಲಿದ್ದ ಬ್ರಾಹ್ಮಣೋತ್ತಮರನೇಕರು, "ತಥಾಸ್ತು, ಶುಭಮಸ್ತು," ಎಂದು ಶುಭವನ್ನೇ ನುಡಿದರು. ಹೀಗೆ ಬ್ರಾಹ್ಮಣರು ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿರುವಲ್ಲಿ, ಅರ್ಜುನನು ಧನುಸ್ಸಿನ ಬಳಿಗೆ ಬಂದು ಅದಕ್ಕೆ ಪ್ರದಕ್ಷಿಣಮಾಡಿ ನಮಸ್ಕರಿಸಿ, ಮನಸ್ಸಿನಲ್ಲಿ ವರದಾಯಕನಾದ ಈಶ್ವರನನ್ನೂ, ಸರ್ವಶಕ್ತನಾದ ಶ್ರೀ ಕೃಷ್ಣಪರಮಾತ್ಮನನ್ನೂ ಧ್ಯಾನಿಸಿ, ಧನುಸ್ಸನ್ನು ನಿರಾಯಾಸವಾಗಿ ಎತ್ತಿದನು. ಅನಂತರ, ಪರಮಸಾಹಸಿಗಳೂ ಧನುರ್ವಿದ್ಯಾವಿಶಾರದರೂ ಆದ ರುಕ್ಮಿ, ಸುನೀತ, ದುರ್ಯೋಧನ, ಶಲ್ಯ, ಮೊದಲಾದ ಮಹಾ ವೀರರೂ ಕಟ್ಟಲಾರದೆಹೋದ ಆ ಮಹಾ ಧನುಸ್ಸನ್ನು ಕಣ್ಮುಚ್ಚಿ ತೆರೆಯುವುದರೊಳಗಾಗಿ ಕಟ್ಟಿಹಿಡಿದನು. ತರುವಾಯ ಬಾಣಗಳನ್ನು ಸಂಧಾನಮಾಡಿ, ಮೇಲ್ಗಡೆಯಲ್ಲಿಟ್ಟಿದ್ದ ಯಂತ್ರದ ರಂಧ್ರದ ಮೂಲಕ ಗುರಿಯನ್ನು ಹೊಡೆದು, ಅದು ಆ ಯಂತ್ರದ ರಂಧ್ರದೊಳಗಿನಿಂದಲೇ ಕೆಳಗೆ ಬೀಳುವಂತೆ ಮಾಡಿದನು.

ಇದನ್ನು ನೋಡಿ ರಾಜಸಭೆಯಲ್ಲಿ ಗಲಭೆಯುಂಟಾಯಿತು. ದೇವತೆಗಳ ಪುಷ್ಪವೃಷ್ಟಿಯು ಸೂಸಿತು. ಬ್ರಾಹ್ಮಣರನೇಕರು ಆನಂದದಿಂದ, ತಾವು ಹೊದ್ದಿದ್ದ ಧೋತ್ರಗಳನ್ನೇ ಹಾರಿಸುತ್ತ ತಮ್ಮ ಅತ್ಯಂತ ಸಂತೋಷವನ್ನು ಸೂಚಿಸಿದರು. ರಾಜಪಕ್ಷದ ಪುಷ್ಪವೃಷ್ಟಿಯಂತೂ

ಅವಿಚ್ಛಿನ್ನವಾಗಿ ಸುರಿಯಿತು. ಅಸಂಖ್ಯಾತ ವಾದ್ಯಗಳು ಮೊಳಗಿದವು. ಗಾಯಕರೂ ಕವಿಗಳೂ ವಿಜಯಶಾಲಿಯಾದ ಆ ಮಹಾವೀರನನ್ನು ಹೊಗಳಿ ಉತ್ಸಾಹದಿಂದ ಗಾನ ಮಾಡಿದರು. ದ್ರುಪದ ರಾಜನಿಗೂ ಅತ್ಯಾನಂದವಾಯಿತು. ಆಗ ವಿಫಲರಾಗಿ ಗಲಭೆಯೆಬ್ಬಿಸಿದ್ದ ರಾಜರುಗಳು ಕೆರಳಿ ಸಮರವೊದಗಿದರೆ, ತಾನು ಸೈನ್ಯಾದಿಗಳನ್ನು ಕೊಟ್ಟು ಸಹಾಯ ಮಾಡುವುದಾಗಿ ದ್ರುಪದನು ಅಳಿಯನಾಗುವ ಬ್ರಾಹ್ಮಣ ತರುಣನಿಗೆ (ಪಾರ್ಥನಿಗೆ) ವಾಗ್ದಾನ ಮಾಡಿದನು. ರಾಜಸಭೆಯಲ್ಲಿ ಗಲಭೆಯು ಮೇರೆ ಮೀರಿತು. ಆಗ ಯುಧಿಷ್ಠಿರನು ನಕುಲ ಸಹದೇವರೊಡನೆ ತಾವು ಇಳಿದಿದ್ದ ಮನೆಗೆ ಹೊರಟುಹೋದನು. ಇಂದ್ರನಂತೆ ಪರಾಕ್ರಮಶಾಲಿಯಾಗಿ ಗುರಿಯನ್ನು ಹೊಡೆದು ಪಣವನ್ನು ಸಾಧಿಸಿದ ಕುಂತೀಪುತ್ರನನ್ನು ನೋಡಿ ಕೃಷ್ಣಾದೇವಿಯು (ದ್ರೌಪದಿಯು) ಅತ್ಯಂತಾನಂದ ಭರಿತಳಾಗಿ, ಒಂದು ಶುಭ್ರವಾದ ನಿಲುವಂಗಿಯನ್ನೂ, ದಿವ್ಯವಾದ ಪುಷ್ಪಮಾಲಿಕೆಯನ್ನು ತೆಗೆದುಕೊಂಡು ಅವನ ಬಳಿಗೆ ಬಂದು, ಪುಷ್ಪಮಾಲೆಯನ್ನವನ ಕಂಠದಲ್ಲಿ ಅಲಂಕರಿಸಿ ನಿಲುವಂಗಿಯನ್ನು ತೊಡಿಸಿದಳು. ಬ್ರಾಹ್ಮಣರೆಲ್ಲರೂ ಅತ್ಯಾನಂದದಿಂದ ದಂಪತಿಗಳಿಗೆ ಕೈಮುಗಿದು ಆಶೀರ್ವದಿಸಿದರು. ತರುವಾಯ ಅವರಿಬ್ಬರೂ ಸ್ವಯಂವರ ಮಂಟಪದಿಂದ ಅರಮನೆಗೆ ಹೊರಟರು.

ದ್ರುಪದರಾಜನು ತನ್ನ ಪುತ್ರಿಯನ್ನು ಆ ಬ್ರಾಹ್ಮಣ ತರುಣನಿಗೆ ಕೊಟ್ಟು ವಿವಾಹಮಾಡಲು ಸಂಮತಿಸಿದನೆಂದು ತಿಳಿದ ಕೂಡಲೇ, ಅಲ್ಲಿ ಸೇರಿದ್ದ ರಾಜರೆಲ್ಲರೂ ಒಬ್ಬರೊಬ್ಬರ ಮುಖಗಳನ್ನು ನೋಡಿಕೊಂಡು ಕೋಪದಿಂದ ಉರಿದು ಬೀಳುವಂತಾದರು. ಆಗ ಅವರು ತಮ್ಮ ತಮ್ಮಲ್ಲಿ "ಈ ನೀಚ ರಾಜನು ನಮ್ಮೆಲ್ಲರನ್ನೂ ಕರೆಯಿಸಿ, ಮೊದಲು ಗೌರವಿಸಿ, ಔತಣ ಮರ್ಯಾದೆಗಳನ್ನು ಮಾಡಿ ಈಗ ಹೀಗೆ ಎಲ್ಲರಿಗೂ ಅವಮಾನ ಮಾಡಿದನಲ್ಲಾ! ಇಲ್ಲಿ ನೆರೆದಿರುವ ಮಹಾ ರಾಜಸಭೆಯಲ್ಲಿ ತನಗೆ ಸಮಾನನಾದ ರಾಜನು ಒಬ್ಬನೂ ಇಲ್ಲವೆಂದೆಣಿಸಿದನೋ ಈ ನೀಚನು? ಸ್ವಯಂವರವು ಕ್ಷತ್ರಿಯರಿಗೆ ಮಾತ್ರವೇ ಶ್ರುತಿಯಲ್ಲಿ ಹೇಳಿರುವುದಲ್ಲದೆ ಬ್ರಾಹ್ಮಣನನ್ನು ಕ್ಷತ್ರಿಯ ಕನ್ಯೆಯು ವರಿಸಬಹುದೆಂದೆಲ್ಲಿಯೂ ಹೇಳಿಲ್ಲ.

ಈಗಲೂ ಈ ದ್ರುಪದರಾಜಪುತ್ರಿಯು ನಮ್ಮಲ್ಲಿ ಯಾರನ್ನಾದರೂ ತನ್ನ ಪತಿಯನ್ನಾಗಿ ವರಿಸಿದರೆ ಸರಿ; ಇಲ್ಲವಾದರೆ, ಅವಳನ್ನು ಅಗ್ನಿಯಲ್ಲಿ ಹಾಕಿ ಸುಟ್ಟು, ನಾವುಗಳು ನಮ್ಮ ನಮ್ಮ ರಾಜಧಾನಿಗಳಿಗೆ ಹೋಗೋಣ. ಆ ಬ್ರಾಹ್ಮಣನು ರಾಜರ ವಿಷಯದಲ್ಲಿ ಅಪರಾಧ ಮಾಡಿರುವನಾದರೂ ಅವನನ್ನು ನಾವುಗಳು ಕೊಲ್ಲಬಾರದು. ಏತಕ್ಕೆಂದರೆ, ನಮ್ಮ ರಾಜ್ಯ, ಕೋಶ, ಪ್ರಾಣ, ಸಂತಾನ ಮೊದಲಾಗಿ ಸಮಸ್ತವೂ ಬ್ರಾಹ್ಮಣರಿಗಾಗಿ ಮೀಸಲಾಗಿರುವುದು. ಆದರೆ, ಇತರ ಸ್ವಯಂವರ ಗಳಿಗೂ ಹೀಗೆ ಬ್ರಾಹ್ಮಣರು ಬಂದು ಆತಂಕ ತಾರದಿರುವಂತೆಯೂ, ನಮ್ಮೆಲ್ಲರಿಗೂ ಅವಮಾನವಾಗದಂತೆಯೂ ಈಗ ನಾವುಗಳು ಸರಿಯಾದ ಪ್ರತಿಕ್ರಿಯೆಯನ್ನು ಮಾಡಲೇ ಬೇಕು," ಎಂಬದಾಗಿ ಮಾತನಾಡಿ ಕೊಂಡು ತಮ್ಮ ಅಸ್ತ್ರಶಸ್ತ್ರ ಗದಾದ್ಯಾಯುಧಗಳನ್ನು ಹಿಡಿದು ದ್ರುಪದ ರಾಜನನ್ನು ಕೊಲ್ಲುವುದಕ್ಕಾಗಿ ನುಗ್ಗಿಕೊಂಡು ಬಂದರು. ಇದನ್ನು ನೋಡಿ, ಅಲ್ಲಿದ್ದ ಭೀಮಾರ್ಜುನರಿಬ್ಬರೂ, ದ್ರುಪದರಾಜನ ಸಹಾಯಕ್ಕೆ ಬಂದು ಮದಿಸಿದಾನೆಗಳಂತೆ ಆ ಕೆರಳಿದ ರಾಜರುಗಳ ಮೇಲೆ ನುಗ್ಗಿದರು. ಅಲ್ಲದೆ, ಭೀಮನು ಅಲ್ಲಿದ್ದ ಒಂದು ದೊಡ್ಡದಾದ ಮರವನ್ನು ಬುಡ ಮುಟ್ಟ ಕಿತ್ತು, ಅದರಿಂದ ಎಲ್ಲ ರಾಜರುಗಳನ್ನೂ ಬಡಿದೋಡಿಸಿ, ಅವರಿಗೆ ಯಮಸ್ವರೂಪನಾಗಿ ನಿಂತನು. ಅರ್ಜುನನು ಧನುಷ್ಟಂಕಾರ ಮಾಡುತ್ತ, "ಯುದ್ಧಮಾಡಲು ಬರುವ ಧೀರರಿದ್ದರೆ ಬನ್ನಿ" ಎಂದು ಕೂಗಿಕೊಂಡನು. ಈ ಗಲಭೆಯನ್ನು ಕೇಳಿ ಯುಧಿಷ್ಠಿರನೂ ನಕುಲ ಸಹದೇವರೂ ಅಲ್ಲಿಗೆ ಓಡಿಬಂದರು.

ಇದೆಲ್ಲವನ್ನೂ ನೋಡಿದ ಶ್ರೀಕೃಷ್ಣನು ಬಲರಾಮನನ್ನು ನೋಡಿ ಮೆಲ್ಲನೆ, "ನೋಡಿದೆಯೋ ಅಣ್ಣಾ! ಈ ಆರು ಅಡಿಗಳ ದೊಡ್ಡ ಧನುಸ್ಸನ್ನು ಹಿಡಿದು, ರಾಜಮಂಡಲಿಯನ್ನೇ ಕಾದಲು ಕರೆಯುತ್ತಿರುವ ಈ ಧೀರನೇ ಅರ್ಜುನನೆಂಬುದು ಸ್ಪಷ್ಟವಾಯಿತಲ್ಲವೇ? ಆ ಮರವನ್ನು ಮುರಿದು ರಾಜರುಗಳನ್ನು ಬಡಿದೋಡಿಸಿದ ವೀರನೇ ಭೀಮಸೇನನು! ಇಂತಹ ಅದ್ಭುತಕಾರ್ಯವು ಮತ್ತೆ ಯಾರಿಂದ ತಾನೇ ಆದೀತು?" ಎಂದನು. ಅದಕ್ಕೆ ಬಲರಾಮನು, "ನಿಜ, ಕೃಷ್ಣಾ! ಇವರೇ ಭೀಮಾ ರ್ಜುನರು; ಆಕಡೆ ನೋಡು, ಸಿಂಹಗಮನದಿಂದ ಗಂಭೀರವಾಗಿ ಬಂದು

ನಿಂತಿರುವ ಆ ಸುಂದರ ಪುರುಷನೇ ಧರ್ಮಪುತ್ರನು. ಆತನ ಪಕ್ಕದಲ್ಲಿ ಕಾರ್ತಿಕೇಯನಂತೆ ನಿಂತಿರುವ ಆ ಸುಂದರ ತರುಣರೇ ಆಶ್ವಿನೇಯ ರಾದ ನಕುಲ ಸಹದೇವರು. ಹೇಗಾದರೂ ನಮ್ಮ ಸೋದರತ್ತೆ ಪೃಥಾ ದೇವಿಯ ಮಕ್ಕಳಾದ ಪಂಚಪಾಂಡವರು ಲಾಕ್ಷಾಗೃಹದಿಂದ ತಪ್ಪಿಸಿಕೊಂಡು ಬಂದು ಜೀವದಿಂದಿರುವುದನ್ನು ತಿಳಿದು ನನಗೆ ಪರಮ ಸಂತೋಷವಾಗಿದೆ," ಎಂದನು.

ಆಗ ಅಲ್ಲಿದ್ದ ಬ್ರಾಹ್ಮಣರು ಅರ್ಜುನನನ್ನು ನೋಡಿ, "ಅಯ್ಯಾ! ನೀನು ಹೆದರಬೇಡ, ನಾವೂ ಬೇಕಾದರೆ ನಿನ್ನ ಸಹಾಯಕ್ಕೆ ಬರುವೆವು," ಎಂಬದಾಗಿ ತಮ್ಮ ಕೃಷ್ಣಾಜಿನಗಳನ್ನೊದರುತ್ತ ಕೂಗಿಕೊಂಡರು. ಅದಕ್ಕೆ ಅರ್ಜುನನು, "ಸ್ವಾಮೀ, ತಾವು ಶ್ರಮಪಡಬೇಕಾಗಿಲ್ಲ. ದಯೆ ಖಿಟ್ಟು ವಿನೋದವನ್ನು ನೋಡುತ್ತಿರಿ. ನಾನೊಬ್ಬನೇ ಈ ರಾಜರೆಲ್ಲ ರನ್ನೂ ನನ್ನ ಬಾಣಗಳಿಂದ ಹೊಡೆದೋಡಿಸುವೆನು," ಎನ್ನುತ್ತ ಮುಂದೆ ನುಗ್ಗುವಷ್ಟರಲ್ಲಿ, ಆ ರಾಜರೆಲ್ಲರೂ ಕರ್ಣನನ್ನು ಮುಂದಾಳನ್ನಾಗಿ ಮಾಡಿಕೊಂಡು ಅರ್ಜುನನ ಮೇಲೆ ನುಗ್ಗಿದರು. ಆಗ ಕರ್ಣನು ಅರ್ಜುನನಿಗೂ, ಶಲ್ಯನು ಭೀಮಸೇನನಿಗೂ ಎದುರಾಗಿ, ಅದ್ಭುತವಾಗಿ ಯುದ್ಧಮಾಡುತ್ತ ಹೋರಾಡಿದರು. ಕಡೆಗೆ, ಕರ್ಣನು ಅರ್ಜುನನ ಶರಕೌಶಲ ಸಾಮರ್ಥ್ಯಗಳಿಗಾಶ್ಚರ್ಯಪಟ್ಟು, "ಎಲೈ ಮಹಾ ವೀರನೇ, ಧನುರ್ವಿದ್ಯೆಯೇ ಮೂರ್ತಿಭವಿಸಿಬಂದಂತಿರುವ ನೀನು ಕ್ಷತ್ರಿಯ ವಿಜಯಿಯಾದ ಆ ಪರಶುರಾಮನೋ ಅಥವಾ ದೇವೇಂದ್ರನೋ, ಇಲ್ಲವೇ ರಾಕ್ಷಸ ಧ್ವಂಸಕನಾದ ಮಹಾ ವಿಷ್ಣುವೋ, ಯಾರು? ನಿನ್ನ ಸ್ವರೂಪ ವನ್ನು ಮರೆಮಾಚಿ ಹೀಗೆ ಬ್ರಾಹ್ಮಣ ವೇಷದಿಂದ ಬಂದು ನನ್ನೊಡನೆ ಇಷ್ಟು ಪರಾಕ್ರಮ ಕೌಶಲಗಳಿಂದ ಕಾದಿದ ನೀನು ಯಾರು? ದಿಟವಾಗಿ ಹೇಳು," ಎಂದನು. ಅದನ್ನು ಕೇಳಿ ಪಾರ್ಥನು, "ಕರ್ಣಾ, ನಾನು ಪರಶುರಾಮನೂ ಅಲ್ಲ, ದೇವೇಂದ್ರನೂ ಅಲ್ಲ, ಮಹಾ ವಿಷ್ಣುವೂ ಅಲ್ಲ. ನಮ್ಮ ಗುರುವಿನ ಅನುಗ್ರಹದಿಂದ ಬ್ರಹ್ಮ ಮತ್ತು ಪೌರಂದರ ದಿವ್ಯಾಸ್ತ್ರ ಗಳಲ್ಲಿ ವಿಶಾರದನಾದ ಬ್ರಾಹ್ಮಣನು. ನಿನ್ನನ್ನು ಈ ದಿನ ಸೋಲಿ ಸುವುದಕ್ಕಾಗಿಯೇ ಬಂದಿರುವೆನು, ನಿಲ್ಲು" ಎಂದು ಹೇಳಿದನು. ಆಗ ಕರ್ಣನು ತನ್ನಲ್ಲಿ ತಾನು, "ಆಹಾ, ಬ್ರಹ್ಮತೇಜಸ್ಸಿನ ಮುಂದೆ

ಕ್ಷಾತ್ರತೇಜಸ್ಸಿನ ಪ್ರತಾಪವು ನಡೆಯಲಾರದೆಂಬುದನ್ನು ಬಲ್ಲೆನು," ಎಂದು ಹೇಳಿ ಯುದ್ಧಮಾಡದೆ ನಿಂತು ಬಿಟ್ಟನು.

ಆಕಡೆ ಭೀಮಸೇನನೂ ಶಲ್ಯನೂ ಸಹ ಕೆರಳಿದ ಆನೆಗಳಂತೆ ಅದ್ಭುತವಾಗಿ ಯುದ್ಧಮಾಡಿ ಹೋರಾಡಿದನಂತರ, ಭೀಮಸೇನನು ಶಲ್ಯನನ್ನು ಹಿಡಿದು ಗಿರಗಿರನೆ ತಿರುಗಿಸಿ, ಬಹು ದೂರಕ್ಕೆ ಎಸೆದು ಬಿಟ್ಟನು. ಇದೆಲ್ಲವನ್ನೂ ನೋಡುತ್ತಿದ್ದ ಜನರು ಪರಮಾಶ್ಚರ್ಯದಿಂದ ಬೆರಗಾಗಿ ನಿಂತಿರುವಲ್ಲಿ, ಶಲ್ಯನ ಪರಾಭವದಿಂದ ಕರ್ಣನಿಗೂ ಸ್ವಲ್ಪ ಭಯವೇ ಉಂಟಾಯಿತು. ಅತ್ಯಂತ ಪರಾಕ್ರಮಶಾಲಿಯಾದ ಶಲ್ಯನ ಸ್ಥಿತಿಯೇ ಹೀಗಾಗಿರುವಲ್ಲಿ, ಇನ್ನು ತಾವು ಈ ದಾಂಡಿಗನ ಕೈಗೆ ಸಿಕ್ಕಿದರೆ ತಮ್ಮ ಗತಿಯೇನಾದೀತೆಂದು ಮಿಕ್ಕ ರಾಜರುಗಳೆಲ್ಲರೂ ಭಯದಿಂದ ತಲ್ಲಣಿಸಿ ಹೋದರು. ಆಗ ಅಲ್ಲಿದ್ದ ಶ್ರೀಕೃಷ್ಣನು, ರಾಜರೆಲ್ಲರನ್ನೂ ನೋಡಿ, ತನಗೆ ನಿಜಾಂಶವು ತಿಳಿದಿದ್ದರೂ ಸಹ, ಅವರುಗಳನ್ನು ಕುರಿತು ಮೃದುಮಧುರ ವಚನಗಳಿಂದ ಶಾಂತಗೊಳಿಸಿ, "ಬ್ರಾಹ್ಮಣನು ಪಂಥವನ್ನು ಗೆದ್ದು ಕ್ಷತ್ರಿಯ ಕನ್ಯೆಯನ್ನು ಪಡೆದುಕೊಂಡಿರುವನು. ಬ್ರಹ್ಮತೇಜಸ್ಸಿನ ಅಭ್ಯುದಯದಿಂದ ಕ್ಷತ್ರಿಯರಾದ ನಾವುಗಳೆಲ್ಲರೂ ಸಂತೋಷಪಟ್ಟು ಶಾಂತರಾಗಿ ಆತನನ್ನು ಅಭಿನಂದಿಸಬೇಕಾದುದು ಧರ್ಮವು. ಆದುದರಿಂದ, ನೀವುಗಳೆಲ್ಲರೂ ಯುದ್ಧವನ್ನು ನಿಲ್ಲಿಸಿ, ವೈರವನ್ನು ಬಿಟ್ಟು, ಸಂತೋಷದಿಂದ ನಿಮ್ಮ ನಿಮ್ಮ ರಾಜಧಾನಿಗಳಿಗೆ ಪ್ರಯಾಣ ಮಾಡುವುದು ಉಚಿತವು," ಎಂದು ಮೊದಲಾಗಿ ಸಮಯೋಚಿತವಾಗಿ ಮಾತನಾಡಿದನು. ಅದಕ್ಕೆ ಅವರೆಲ್ಲರೂ ಒಪ್ಪಿ ಸಂತೋಷದಿಂದ, "ಈ ದಿವ್ಯ ಬ್ರಾಹ್ಮಣನಿಗೇ ಜಯವಾಯಿತು. ಪಾಂಚಾಲ ರಾಜಪುತ್ರಿಯು ಬ್ರಾಹ್ಮಣನ ಪತ್ನಿಯಾದಳು," ಎಂದು ಮಾತನಾಡಿಕೊಳ್ಳುತ್ತ ತಮ್ಮ ತಮ್ಮ ರಾಜ್ಯಗಳಿಗೆ ಪ್ರಯಾಣಮಾಡಿದರು.

ಈವರೆಗೆ ಕುಂಬಾರನ ಮನೆಯಲ್ಲಿ ಒಂಟಿಯಾಗಿದ್ದ ಕುಂತಿಯು, ತನ್ನ ಮಕ್ಕಳು ಬಹಳ ಹೊತ್ತಾದರೂ ಬರಲಿಲ್ಲವಲ್ಲಾ, ಭಿಕ್ಷವನ್ನೂ ತರಲಿಲ್ಲವಲ್ಲಾ! ಧೃತರಾಷ್ಟ್ರನ ಕಡೆಯವರು ಇವರನ್ನೇನಾದರೂ ಗುರುತಿಸಿ ಕೊಂದೇ ಹಾಕಿಬಿಟ್ಟರೋ ಅಥವಾ ಯಾರಾದರೂ ರಾಕ್ಷಸರು ಹಿಡಿದು ವಧಿಸಿದರೋ, ಅವರಿಗೆ ಮುಂದೆ ಶುಭವೊದಗುವುದೆಂದು ಹೇಳಿಹ

ವೇದವ್ಯಾಸ ಮಹರ್ಷಿಯೇ ಬುದ್ಧಿಕೆಟ್ಟು ಹಾಗೆ ಹೇಳಿದನೋ! ಮಕ್ಕಳ ಸ್ಥಿತಿಯೇನಾಗಿರುವುದೋ! ಎಂಬದಾಗಿ ಬಹು ವ್ಯಸನದಿಂದ ನಾನಾ ವಿಧವಾಗಿ ಆಲೋಚಿಸುತ್ತಿದ್ದಳು. ಇಷ್ಟು ಹೊತ್ತಿಗೆ ಮಧ್ಯಾಹ್ನವು ಮೀರಿತು. ಇತ್ತಲಾಭೀಮಾರ್ಜುನರು ದ್ರೌಪದಿಯನ್ನೂ ಕರೆದು ಕೊಂಡು ಬ್ರಾಹ್ಮಣರ ಗುಂಪಿನಲ್ಲಿ ನುಗ್ಗಿ ಹೊರಟು ಮನೆಗೆ ಬಂದರು. ಒಳಗಡೆಯಿದ್ದ ಕುಂತಿಯು ಇವರನ್ನು ನೋಡಲಿಲ್ಲ. ತಾಯಿ ಒಳಗಿರು ವಳೆಂದು ತಿಳಿದು, "ಅಮ್ಮಾ, ಈ ದಿನ ನಾವೊಂದು ಭಿಕ್ಷೆಯನ್ನು ತಂದಿರುವೆವು," ಎಂದು ಕೂಗಿ ಹೇಳಿದರು. ಅದಕ್ಕೆ ಕುಂತಿಯು, ಅಲ್ಲಿಂದಲೇ ಸಂತೋಷದಿಂದ, "ಐವರೂ ಅದನ್ನು ಉಪಯೋಗಿಸಿ ಕೊಂಡು ಸುಖಪಡಿ," ಎಂದು ಹೇಳಿ ಹೊರಗೆಬಂದು ನೋಡಲು, ಪರಮ ಸೌಂದರ್ಯವತಿಯಾದ ಯಾಜ್ಞಸೇನಿಯು (ದ್ರೌಪದಿಯು) ಅಲ್ಲಿದ್ದಳು. ಈ ಸುಂದರಿಯನ್ನೇ ತನ್ನ ಮಕ್ಕಳು ತಂದ ಭಿಕ್ಷೆಯೆಂದು ಹೇಳಿದರೆಂದು ತಿಳಿದು, ಕುಂತಿಯು, "ಅಯ್ಯೋ! ನಾನು ಎಂತಹ ಕಾರ್ಯಮಾಡಿದೆ! ಇನ್ನು ನನ್ನ ಅಚಾತುರ್ಯ ವಾಕ್ಯದಿಂದ ಈ ಕನ್ಯೆಗೂ ನನ್ನ ಮಕ್ಕಳಿಗೂ ನನಗೂ ಪಾಪವು ಘಟಿಸದಂತೆ ಈಗ ಏನುಮಾಡಲಿ?" ಎಂಬದಾಗಿ ಆಲೋಚಿಸಿ, ಅಲ್ಲಿ ಸಂತೋಷದಿಂದ ನಿಂತಿದ್ದ ಯಾಜ್ಞಸೇನಿಯ ಕೈಯನ್ನು ಹಿಡಿದು ಅವಳನ್ನು ಯುಧಿಷ್ಠಿರನ ಬಳಿಗೆ ಕರೆತಂದು, "ಯುಧಿ ಷ್ಠಿರಾ, ಭೀಮಾರ್ಜುನರು ಈಕೆಯನ್ನು ಕರೆತಂದು, 'ಭಿಕ್ಷೆಯನ್ನು ತಂದಿದ್ದೇವೆ' ಎಂದು ಹೇಳಲು, ಒಳಗಿದ್ದ ನಾನು, ಅದು ಸಾಮಾನ್ಯ ಭಿಕ್ಷೆಯೆಂದು ತಿಳಿದು ನೀವೆಲ್ಲರೂ ಉಪಯೋಗಿಸಿಕೊಂಡು ಸುಖ ಪಡಿ," ಎಂದು ಕಾಣದೆ ಹೇಳಿಬಿಟ್ಟೆನು. ಇದರಿಂದ ನನ್ನ ಮಾತು ವ್ಯರ್ಥ ವಾಗದಂತೆಯೂ, ಈ ರಾಜಪುತ್ರಿಗೆ ಪಾಪವು ಘಟಿಸದಂತೆಯೂ, ಮನ ಸ್ಸಂತೋಷವಾಗುವಂತೆಯೂ ಮಾಡಲು ಈಗ ನಾವುಗಳು ಯಾವರೀತಿ ನಡೆದುಕೊಳ್ಳಬೇಕು? ಧರ್ಮಸೂಕ್ಷ್ಮವನ್ನರಿತ ನೀನು ಈ ವಿಷಯವನ್ನು ಪರ್ಯಾಲೋಚಿಸಿ ಹೇಳು," ಎಂದಳು. ಆಗ ಯುಧಿಷ್ಠಿರನು ಕುಂತಿಗೆ ಸಮಾಧಾನವನ್ನು ಹೇಳಿ ಅರ್ಜುನನನ್ನು ನೋಡಿ, "ಪಾರ್ಥಾ, ಯಾಜ್ಞ ಸೇನಿಯನ್ನು ಗೆದ್ದು ಪಡೆದವನು ನೀನು. ಆದರಿಂದ ನೀನೇ ಅವಳನ್ನು ಮದುವೆಯಾಗಬೇಕು," ಎಂದನು. ಅದಕ್ಕೆ ಅರ್ಜುನನು, "ಅಣ್ಣಾ,

ಧರ್ಮಜ್ಞನಾದ ನೀನು ನನ್ನನ್ನು ಈ ಪಾಪಕಾರ್ಯಕ್ಕೆ ಪ್ರೇರಿಸಬಹುದೇ? ಮಾತೃವಾಕ್ಯ ಪರಿಪಾಲನೆ ಮಾಡುವುದು ನಮ್ಮೆಲ್ಲರ ಕರ್ತವ್ಯವಲ್ಲವೇ? ಆದರಿಂದ ಮೊದಲು ನೀನು, ಅನಂತರ ಅಣ್ಣ ಭೀಮಸೇನನು, ತರುವಾಯ ನಾನು ಮತ್ತು ನಕುಲ ಸಹದೇವರು, ಈ ರೀತಿಯಾಗಿ ನಾವೈವರೂ ಈಕೆಯ ಪಾಣಿಗ್ರಹಣ ಮಾಡಬೇಕು. ನೀನು ಚೆನ್ನಾಗಿ ಮತ್ತೊಂದಾವೃತ್ತಿ ಆಲೋಚಿಸಿ, ನಮ್ಮೆಲ್ಲರಿಗೂ ಕೀರ್ತಿದಾಯಕವಾಗಿಯೂ, ಸನ್ಮಾರ್ಗ ಪ್ರವರ್ತಕವಾಗಿಯೂ, ಪಾಂಚಾಲಾಧಿಪತಿಗೆ ಅನುಕೂಲವಾಗಿಯೂ ಇರುವಂತೆ ತೀರ್ಪನ್ನು ಹೇಳು; ನಾವು ನಾಲ್ವರೂ ನಿನ್ನ ಅಪ್ಪಣೆಯಂತೆ ನಡೆದುಕೊಳ್ಳಲು ಸಿದ್ಧವಾಗಿರುವೆವು," ಎಂದನು. ಆಗ ಬುದ್ಧಿಶಾಲಿಯಾದ ಯುಧಿಷ್ಠಿರನು, ತಮ್ಮಂದಿರ ಮುಖಗಳನ್ನು ನೋಡಿ, ಅರ್ಜುನನ ಮಾತು ಅವರೆಲ್ಲರಿಗೂ ಸಮ್ಮತವಾಗಿರಬೇಕೆಂದರಿತು, ಈಗ ತಾನು ಅದಕ್ಕೆ ವಿರೋಧವಾಗಿ ನುಡಿದರೆ, ತಮ್ಮ ತಮ್ಮಲ್ಲಿ ಐಕಮತ್ಯವು ಕೆಟ್ಟೀತೆಂದಾಲೋಚಿಸಿ, "ದ್ರೌಪದಿಯು ನಮ್ಮ ಐದು ಮಂದಿಗೂ ಪತ್ನಿಯಾಗಿರಲಿ" ಎಂದು ಹೇಳಿದನು. ಇದಾದನಂತರ ಶ್ರೀಕೃಷ್ಣ ಬಲರಾಮರಿಬ್ಬರೂ ಗೋಪ್ಯವಾಗಿ ಬಂದು ಪಾಂಡವರನ್ನಭಿನಂದಿಸಿ ಸೋದರತ್ತೆಯಾದ ಕುಂತೀದೇವಿಗೆ ನಮಸ್ಕರಿಸಿ, ಅವರೆಲ್ಲರೂ ಲಾಕ್ಷಾಗೃಹದ ಅಗ್ನಿಯಿಂದ ಪಾರಾದುದಕ್ಕೆ ಅತ್ಯಂತ ಸಂತೋಷಪಟ್ಟು, ಇತರರು ಯಾರಿಗೂ ತಿಳಿಯದಂತೆ ಹೊರಟು ಹೋದರು.

## ಕುಂಬಾರನ ಮನೆಯ ವಾಸ

ಭೀಮಾರ್ಜುನರು ದ್ರೌಪದಿಯನ್ನು ಕರೆದುಕೊಂಡು ಕುಂಬಾರನ ಮನೆಗೆ ಹೋಗುತ್ತಿದ್ದುದನ್ನು ನೋಡಿ, ದ್ರೌಪದಿಯ ಅಣ್ಣನಾದ ಧೃಷ್ಟದ್ಯುಮ್ನನು, ಆ ರಾತ್ರಿ ಅವರು ಕಾಣದಂತೆ ಮೆಲ್ಲನೆ ಒಬ್ಬನೇ ಅವರಿದ್ದ ಮನೆಯ ಒಳಗೆ ಹೋಗಿ, ಯಾರಿಗೂ ಗೋಚರವಿಲ್ಲದೆ ಒಂದು ಕಡೆಯಲ್ಲಿ ಅಡಗಿಕೊಂಡಿದ್ದನು. ಎಂದಿನಂತೆ ಭೀಮಾರ್ಜುನ ನಕುಲ ಸಹದೇವರು ಗ್ರಾಮಸಂಚಾರದಿಂದ ಭಿಕ್ಷಾಟನೆಮಾಡಿ ತಂದ ಅನ್ನವನ್ನು ಎಲ್ಲರೂ ಭೋಜನಮಾಡಿ, ಮಲಗಿರುವಾಗ ಆ ಐದು ಮಂದಿ ಸೋದರರೂ ದೇವಲೋಕದ ಅಸ್ತ್ರ ಶಸ್ತ್ರಾದಿಗಳ ವಿಚಾರವಾಗಿಯೂ, ಹಸ್ತಿ ಅಶ್ವ ರಥ

ಪದಾತಿಗಳೇ ಮೊದಲಾದವುಗಳ ವಿಷಯುವಾಗಿಯೂ ಮನೋರಂಜಕ ವಾಗಿ ಪರಸ್ಪರ ಮಾತನಾಡಿಕೊಳ್ಳುತ್ತಿದ್ದುದನ್ನು, ಹೊರಗೆ ಪ್ರಚ್ಛನ್ನ ನಾಗಿದ್ದ ಧೃಷ್ಟದ್ಯುಮ್ನನು ಅಕ್ಕರೆಯಿಂದ ಕೇಳಿ, ಮನಸ್ಸಿನಲ್ಲಿ ಸಂತೋಷ ಪಟ್ಟುಕೊಂಡನು. ಅಲ್ಲದೆ ದ್ರೌಪದಿಯೂ ಸಹ ಈ ವಿಚಾರಗಳನ್ನು ಬಹಳ ಆಸಕ್ತಿಯಿಂದ ಗಮನಿಸಿ ಕೇಳುತ್ತಲೂ ಇದ್ದಳು. ರಾತ್ರಿಯೆಲ್ಲ ವನ್ನೂ ಧೃಷ್ಟದ್ಯುಮ್ನನು ಅಲ್ಲಿಯೇ ಕಳೆದು, ಬೆಳಗಾಗುತ್ತಲೇ ಈ ವಿಚಾರಗಳೆಲ್ಲವನ್ನೂ ತಂದೆಗೆ ತಿಳಿಸಲು ಅರಮನೆಗೆ ಆತುರದಿಂದ ಬಂದನು. ಈವರೆಗೆ ತನ್ನ ಪುತ್ರಿಯನ್ನು ಪಣದಲ್ಲಿ ಗೆದ್ದು ಕರೆದುಕೊಂಡು ಹೋದ ವರು ಯಾರೆಂಬ ನಿಜವನ್ನರಿಯದೆ ಪಾಂಚಾಲರಾಜನು ವ್ಯಸನಾಕ್ರಾಂತ ನಾಗಿ ಧೃಷ್ಟದ್ಯುಮ್ನನನ್ನು ಕರೆದು, "ನಮ್ಮ ಕೃಷ್ಣಾದೇವಿಯನ್ನು ಕರೆದುಕೊಂಡು ಹೋದವರು ಯಾರು? ಯಾವನಾದರೂ ಅನರ್ಹ ನಾದ ಕೀಳು ಮನುಷ್ಯನು ಅವಳನ್ನು ಕರೆದುಕೊಂಡು ಹೋದನೋ, ಅಥವಾ ಉಚ್ಚಕುಲದ ಕ್ಷತ್ರಿಯನೇ ಅವಳನ್ನು ಹೊಂದಿದನೋ, ಇಲ್ಲವೇ ಉತ್ತಮ ಬ್ರಾಹ್ಮಣನೇ ನಿಜವಾಗಿಯೂ ಅವಳನ್ನು ಪರಿಗ್ರಹಿಸಿದನೋ ಒಂದೂ ತಿಳಿಯಲಿಲ್ಲವಲ್ಲಾ! ಅರ್ಜುನನಿಗೆ ಪತ್ನಿಯಾಗುವಂತಹ ಪುತ್ರಿ ಯನ್ನು ಪಡೆಯಬೇಕೆಂಬದಾಗಿ ನಾನು ಎಷ್ಟೋ ವ್ರತೋಪವಾಸ ಗಳನ್ನು ಮಾಡಿದೆನಲ್ಲಾ! ಈಗ ಅವಳನ್ನು ಯಾರು ಕರೆದುಕೊಂಡು ಹೋಗಿರಬಹುದು? ಕುರುವಂಶದ ಪಾಂಡು ರಾಜನಪುತ್ರರು ಪ್ರಾಣ ದಿಂದಿದ್ದಾರೆಯೇ? ಅವಳನ್ನು ಪಣದಲ್ಲಿ ಗೆದ್ದು ಕರೆದುಕೊಂಡು ಹೋದ ವನು ಪಾರ್ಥನೇ ಇರಬಹುದೇ?" ಎಂಬದಾಗಿ ಪ್ರಶ್ನೆಮಾಡಲು, ಧೃಷ್ಟದ್ಯುಮ್ನನು ಹಸನ್ಮುಖನಾಗಿ, ತಂದೆಗೆ ತಾನು ಆ ಹಿಂದಿನ ರಾತ್ರಿ ಕುಂಬಾರನ ಮನೆಯಲ್ಲಿ ನೋಡಿ, ಕೇಳಿದ ವಿಷಯಗಳೆಲ್ಲವನ್ನೂ ವಿವರಿಸಿ ಹೇಳಿ, ಭಾರ್ಗವನೆಂಬ ಕುಂಬಾರನ ಮನೆಯಲ್ಲಿ ಆ ಐದು ಮಂದಿ ಪುರುಷರಲ್ಲದೆ ಮಹಾ ತೇಜಸ್ವಿನಿಯಾದ ಸ್ತ್ರೀಯೊಬ್ಬಳು ಅವರೆಲ್ಲರ ತಾಯಿಯಂತೆ ಕಂಡಳೆಂತಲೂ, ಅವರುಗಳೈವರೂ, ಆಡಿಕೊಂಡ ಮಾತು ಗಳಿಂದ ಅವರು ವೈಶ್ಯರಾಗಲಿ, ಶೂದ್ರರಾಗಲಿ, ಬ್ರಾಹ್ಮಣರಾಗಲಿ, ಇರಲಾರರೆಂತಲೂ ಯಾಜ್ಞಸೇನಿಯನ್ನು ಗೆದ್ದುಕೊಂಡ ವೀರನು ಕ್ಷತ್ರಿಯನೇ ಆಗಿರಬೇಕೆಂತಲೂ, ಹೇಳಿದನು. ಮಗನ ಮಾತು

ಗಳೆಲ್ಲವನ್ನೂ ಕೇಳಿ ದ್ರುಪದರಾಜನು, "ಕುಮಾರಾ, ಪಾಂಡವರು ಅರಗಿನ ಮನೆಯಲ್ಲಿ ಅಗ್ನಿಯಿಂದ ತಪ್ಪಿಸಿಕೊಂಡರೆಂಬ ವಾರ್ತೆಯನ್ನು ನಾನು ಕೇಳಿದ್ದೆನು. ಆ ಸಮ್ಮ ಪಣದ ಧನುಸ್ಸನ್ನು ಲೀಲೆಯಿಂದ ಹಿಡಿದು ಹೆದೆಗಟ್ಟಿ ಮತ್ಸ್ಯಯಂತ್ರದ ಮೂಲಕ ಗುರಿಯನ್ನು ಹೊಡೆದ ರೀತಿಯನ್ನು ನೋಡಿ, ಮತ್ತು ಅವರು ರಾತ್ರಿ ಅವರು ಆಡಿಕೊಂಡ ಸಮರ ಕಲಾ ಮರ್ಮಗಳುಳ್ಳ ಮಾತುಗಳನ್ನು ಕೇಳಿ, ಅವರು ವೇಷಾಂತರದಿಂದ ಬಂದಿರುವ ಕುಂತೀ ಪುತ್ರರಾದ ಪಾಂಡವರೇ ಆಗಿರಬೇಕೆಂದು ನನ್ನ ಮನಸ್ಸಿಗೆ ನಿರ್ಧರವಾಗಿರುವುದು," ಎಂಬದಾಗಿ ಹೇಳಿ, ಸಂತೋಷದಿಂದ, ಪುರೋಹಿತನನ್ನು ಕರೆದು, ಕುಂಬಾರನ ಮನೆಯಲ್ಲಿ ಇಳಿದುಕೊಂಡಿರುವ ವರೈದುಮಂದಿಯೂ ಪಾಂಡುರಾಜನ ಪುತ್ರರಹುದೇ ಅಲ್ಲವೇ ಎಂಬ ದನ್ನು ತಿಳಿದುಕೊಂಡು ಬರುವಂತೆ ಹೇಳಿ ಕಳುಹಿಸಿಕೊಟ್ಟನು. ಆತನು ಬಂದು ಆ ಯುಧಿಷ್ಠಿರಾದಿಗಳನ್ನು ಕಂಡು ಅರ್ಘ್ಯಪಾದ್ಯಾದಿಗಳಿಂದ ಸತ್ಕೃತನಾಗಿ ಅವರ ಕುಲಗೋತ್ರಗಳನ್ನು ವಿಚಾರಿಸಲು, ಯುಧಿಷ್ಠಿರನು, ಆತನನ್ನು ನೋಡಿ, "ಸ್ವಾಮೀ, ಈಗ ಆ ವಿಚಾರವೊಂದನ್ನೂ ನಿಮ್ಮ ರಾಜನು ಮಾಡಬೇಕಾಗಿಲ್ಲ. ಆತನ ಪ್ರಶ್ನೆಗಳೆಲ್ಲಕ್ಕೂ ಧನುಸ್ಸಿಗೆ ಹೆದೆ ಯೇರಿಸಿ ಮತ್ಸ್ಯಯಂತ್ರದ ಮೂಲಕ ಗುರಿಯನ್ನು ಹೊಡೆದುದರಲ್ಲಿಯೇ ಉತ್ತರಗಳಿರುವುವು. ಲಕ್ಷಣವತಿಯಾದ ಆತನ ಪುತ್ರಿಯು ಆತನ ಇಚ್ಛೆಯಂತೆ ತಕ್ಕಸ್ಥಾನವನ್ನು ಸೇರಿರುವಳು," ಎಂದು ಹೇಳುತ್ತಿರು ವಷ್ಟರಲ್ಲಿಯೇ, ಅರಮನೆಯಲ್ಲಿ ಎಲ್ಲರಿಗೂ ಔತಣದ ಏರ್ಪಾಟಾಗಿರು ವುದೆಂತಲೂ, ಕೂಡಲೇ ಎಲ್ಲರೂ ಹೊರಟು ಬರಬೇಕೆಂತಲೂ ವರ್ತಮಾನವು ಬಂದುದಲ್ಲದೆ, ರಾಜಾರ್ಹವಾದ ಕುದುರೆಗಳಿಂದ ಕಟ್ಟಲ್ಪಟ್ಟ ರಥಗಳು ಬಂದು ಕುಂಬಾರನ ಮನೆಯ ಮುಂದೆ ಸಿದ್ಧವಾದವು. ಆಗ ಪುರೋಹಿತನನ್ನು ಮುಂದಾಗಿ ಕಳುಹಿಸಿಕೊಟ್ಟು, ಎಲ್ಲರೂ ಕುಂತೀ ಯಾಜ್ಞಸೇನಿಯರೊಡಗೂಡಿ ರಥಗಳನ್ನೇರಿ ಸಂತೋಷದಿಂದ ಅರಮನೆಗೆ ಬಂದರು. ದ್ರುಪದರಾಜನು ಅವರೆಲ್ಲರನ್ನೂ ಉಚಿತ ಮರ್ಯಾದೆಯಿಂದ ಬರಮಾಡಿಕೊಂಡು ದಿವ್ಯ ರತ್ನಪೀಠಗಳಲ್ಲಿ ಕುಳ್ಳಿರಿಸಿ ಉಪಚರಿಸಿದನು. ಕುಂತೀದೇವಿಯೂ ದ್ರೌಪದಿಯೂ ಸಹ ಒಳಗೆ ಪ್ರವೇಶಮಾಡಲು, ಪಾಂಚಾಲ ರಾಜನ ಪತ್ನಿಯು ಕುಂತೀದೇವಿಯನ್ನು ಗೌರವಿಸಿ ಉಪ

ಚರಿಸಿ ಮಗಳನ್ನಭಿನಂದಿಸಿದಳು. ಅಲ್ಲಿ ಕುಳಿತಿದ್ದ ಆಜಾನುಬಾಹುಗಳಾದ ಆ ಐವರು ಅಣ್ಣತಮ್ಮಂದಿರ, ಸೌಂದರ್ಯ ತೇಜಸ್ಸು ಗಾಂಭಿರ್ಯಾದಿಗಳನ್ನು ನೋಡಿ ರಾಜನೂ, ರಾಜ ಬಂಧುಗಳೂ ರಾಜ ಪರಿವಾರವೇ ಮೊದಲಾಗಿ ಸರ್ವರೂ ಅತ್ಯಾಶ್ಚರ್ಯ ಭರಿತರಾಗಿ ಅವರನ್ನೇ ನೋಡುತ್ತಿದ್ದರು. ವಿಶೇಷ ಭಕ್ಷ ಭೋಜ್ಯಾದಿಗಳಿಂದ ಕೂಡಿದ ರಾಜಾರ್ಹವಾದ ಔತಣವು ನಡೆಯಿತು. ಎಲ್ಲರೂ ಸಂತೋಷದಿಂದ ಊಟಮಾಡಿದನಂತರ, ದ್ರುಪದರಾಜನು ಮೊದಲೇ ಶೇಖರಿಸಿ ಪ್ರದರ್ಶಿಸಿದ್ದ ನಾನಾ ವಿಧವಾದ ವಸ್ತುಗಳ ಮೇಲೆ ಈ ಐವರ ದೃಷ್ಟಿಯೂ ಬಿತ್ತು. ಚತುರ್ವರ್ಣಗಳವರಿಗೂ ಬೇಕಾದ ಅತ್ಯುತ್ತಮ ವಸ್ತುಗಳು ಅಲ್ಲಿದ್ದರೂ, ಅವರು ಐವರೂ ಯುದ್ಧ ಸಂಬಂಧವಾದ ಶಸ್ತ್ರಾಸ್ತ್ರ ಕವಚ ಧನುಸ್ಸುಗಳೇ ಮೊದಲಾದ ಪದಾರ್ಥಗಳನ್ನೇ ತೆಗೆದು ಪರೀಕ್ಷಿಸುತ್ತ, ಅವುಗಳ ವಿಚಾರವಾಗಿಯೇ ತಮ್ಮ ಉತ್ಸಾಹ ವಿಶ್ವಾಸಗಳನ್ನೂ ಅವುಗಳ ಭೇದಗಳನ್ನೂ, ಉಪಯೋಗ ಕ್ರಮಗಳನ್ನೂ ಕುರಿತು ವಿಧವಿಧವಾಗಿ ಮಾತನಾಡುತ್ತ ಬಂದರು. ಅದನ್ನು ನೋಡಿ, ದ್ರುಪದರಾಜನಿಗೂ ಆತನ ಪುತ್ರರಿಗೂ ಅಲ್ಲಿ ನೆರೆದಿದ್ದ ಮಂತ್ರಿ ಸಾಮಾಜಿಕರಿಗೂ, ಇವರು ಕುಂತೀಪುತ್ರರಾದ ಪಾಂಡವರೇ ಅಹುದೆಂದು ಮನಸ್ಸಿನಲ್ಲಿ ನಿರ್ಧಾರವಾಯಿತು. ತನ್ನ ಇಷ್ಟಾರ್ಥವು ನೆರವೇರಿತೆಂದು ಯಜ್ಞಸೇನ ರಾಯನಿಗೆ ಸಂತೋಷವಾದರೂ ತನ್ನ ಊಹೆಯು ಇನ್ನೂ ಸ್ಥಿರಪಡದೇ ಇದ್ದ ಕಾರಣ, ಧರ್ಮರಾಜನನ್ನು ಕುರಿತು, ವಿನಯ ಗೌರವಗಳಿಂದ "ಸ್ವಾಮೀ, ನನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂದೇಹವು ತಮ್ಮಿಂದ ಪರಿಹಾರವಾಗಬೇಕಾಗಿರುವುದು. ತಾವು ನಿಜವಾಗಿಯೂ ಬ್ರಾಹ್ಮಣರೋ? ಅಥವಾ ಕ್ಷತ್ರಿಯರೋ? ಇಲ್ಲವೇ ನಮ್ಮ ಕೃಷ್ಣಾದೇವಿಯನ್ನು ವರಿಸಬೇಕೆಂಬ ಉದ್ದೇಶದಿಂದ ಮಾಯಾ ಬ್ರಾಹ್ಮಣರೂಪವನ್ನು ಧರಿಸಿ ಬಂದಿರುವ ದೇವತೆಗಳೋ ದಯೆಯಿಟ್ಟು ತಿಳಿಸಿ, ನನ್ನ ಮನಸ್ಸನ್ನು ಸಂತೋಷಪಡಿಸಬೇಕು," ಎಂದು ಪ್ರಾರ್ಥಿಸಿಕೊಂಡನು. ಆಗ ಧರ್ಮಪುತ್ರನು, "ಪಾಂಚಾಲ ಭೂಪಾಲಾ, ನೀನು ಸಂದೇಹವನ್ನೂ ಚಿಂತೆಯನ್ನೂ ಬಿಡು, ನಿನ್ನ ಅಭಿಲಾಷೆಯಂತೆಯೇ ಕಾರ್ಯವು ನಡೆದಿರುವುದು. ನಾವುಗಳು ಕ್ಷತ್ರಿಯರು, ಕುರುವಂಶದ ಪಾಂಡುರಾಜನ

ಪುತ್ರರು, ನಾನು ಕುಂತೀದೇವಿಯ ಹಿರಿಯ ಮಗನು, ಇವರಿಬ್ಬರೂ ನನ್ನ ತಮ್ಮಂದಿರಾದ ಭೀಮಾರ್ಜುನರು, ಇವರಿಬ್ಬರ ಸಾಹಸದಿಂದ ಈ ದಿನ ನಿನ್ನ ಪುತ್ರಿಯು ಲಭಿಸಿದಳು ಅದೋ ಅಲ್ಲಿ ದ್ರೌಪದಿಯ ಬಳಿಯಲ್ಲಿ ನಿಂತಿರುವಾಕೆಯೇ ಕುಂತೀದೇವಿಯು, ಮತ್ತು ಇವರೇ ಮಾದ್ರೀ ಪುತ್ರರಾದ ನಕುಲ ಸಹದೇವರು. ನೀನು ನಮ್ಮೆಲ್ಲರಿಗೂ ಹಿರಿಯನೂ ಮತ್ತು ಆಶ್ರಯದಾತನೂ ಆಗಿರುವೆ," ಎಂದು ಹೇಳಿದನು. ಇದನ್ನು ಕೇಳಿ ದ್ರುಪದ ರಾಜನ ಆನಂದಕ್ಕೆ ಪಾರವೇ ಇಲ್ಲವಾಯಿತು. ಅನಂತರ ಆತನು ಧರ್ಮಪುತ್ರನಿಂದ, ಅವರು ಲಾಕ್ಷಾಗೃಹದಹನದಿಂದ ತಪ್ಪಿಸಿ ಕೊಂಡು ಬಂದ ಬಗೆ ಹೇಗೆಂಬುದನ್ನೇ ಮೊದಲಾಗಿ ಅವರ ಚರಿತ್ರೆ ಯೆಲ್ಲವನ್ನೂ ಕೇಳಿ ತಿಳಿದುಕೊಂಡು, ಧೃತರಾಷ್ಟ್ರನು ಬಹಳ ಅನ್ಯಾಯ ಮಾಡಿದನೆಂದು ಆತನ ಮೇಲೆ ಬಹಳ ಅಸಮಾಧಾನ ಪಟ್ಟು, ಹೇಗಾ ದರೂ ತಾನು ಪಾಂಡವರಿಗೆ ಸಹಾಯ ಮಾಡಿ ಮತ್ತೆ ರಾಜ್ಯವನ್ನು ಕೊಡಿಸುವೆನೆಂದು ವಾಗ್ದಾನ ಮಾಡಿದನು. ಅನಂತರ ಪಾಂಡವರು ಕುಂತೀ ದ್ರೌಪದೀಸಹಿತರಾಗಿ, ದ್ರುಪದರಾಜನ ಅಪ್ಪಣೆಯಂತೆ ಪ್ರತ್ಯೇಕ ವಾದ ಅರಮನೆಯೊಂದರಲ್ಲಿ ಸಕಲ ರಾಜ ವೈಭವಗಳಿಂದ ವಾಸ ಮಾಡಲು ಏರ್ಪಾಡುಗಳು ನಡೆದವು.

ದ್ರುಪದರಾಜನು ಧರ್ಮರಾಜನನ್ನು ನೋಡಿ, "ಯುಧಿಷ್ಠಿರಾ, ಇಂದು ಶುಭದಿನವಾದುದರಿಂದ ಅರ್ಜುನನಿಗೂ ನಮ್ಮ ಕೃಷ್ಣಾದೇವಿ (ದ್ರೌಪದಿ) ಗೂ ವಿವಾಹ ಮಂಗಳವನ್ನು ವಿಧಿಕ್ರಮವಾಗಿ ನೆರವೇರಿಸ ಬೇಕೆಂಬದಾಗಿ ನನ್ನ ಉದ್ದೇಶವಿರುವುದು," ಎಂದನು. ಅದಕ್ಕೆ ಯುಧಿಷ್ಠಿರನು, "ರಾಜೇಂದ್ರಾ, ದ್ರೌಪದಿಯನ್ನು ಈಗ ನಾವು ಐದು ಮಂದಿ ಸೋದರರೂ ಮದುವೆಯಾಗಬೇಕಾಗಿದೆ. ಇದು ನಮ್ಮ ತಾಯಿಯ ಆಜ್ಞೆ. ನನಗೂ, ನಮ್ಮ ಭೀಮಾರ್ಜುನ ನಕುಲ ಸಹದೇವ ರಿಗೂ ಯಾರೊಬ್ಬರಿಗೂ ಇನ್ನೂ ಮದುವೆಯಿಲ್ಲ. ಆದುದರಿಂದ ದ್ರೌಪ ದಿಯು ವಯೋನುಗುಣವಾದ ಕ್ರಮದಿಂದ ನಮ್ಮ ಐವರನ್ನೂ ಅಗ್ನಿ ಸಾಕ್ಷಾತ್ತಾಗಿ ವಿವಾಹ ಮಾಡಿಕೊಂಡು ನಮ್ಮೈವರಿಗೂ ರಾಜ್ಞಿಯಾಗ ಬೇಕಾಗಿರುವದು," ಎಂದನು.

ಇದನ್ನು ಕೇಳಿ ದ್ರುಪದರಾಜನು ಆಶ್ಚರ್ಯಪಟ್ಟು, "ಓ ಕುರುಕುಲ

ದೀಪಾ, ಗಂಡನೊಬ್ಬನಿಗೆ ಅನೇಕ ಮಂದಿ ಹೆಂಡತಿಯರಿರಬಹುದೆಂಬ ವಿಧಾಯಕವುಂಟು. ಹಾಗೆಯೇ ಒಬ್ಬ ಹೆಂಡತಿಗೆ ಅನೇಕ ಮಂದಿ ಗಂಡಂದಿರಿರಬಹುದೆಂಬುದನ್ನು ನಾನೆಲ್ಲಿಯೂ ಎಂದೂ ಕೇಳಲಿಲ್ಲ. ಧರ್ಮ ಪುತ್ರನಾಗಿ ಧರ್ಮ ಸೂಕ್ಷ್ಮಗಳನ್ನು ತಿಳಿದ ನೀನು, ವೇದಧರ್ಮಕ್ಕೂ ಆಚಾರಕ್ಕೂ ವಿರೋಧವಾದ ಇಂತಹ ಪಾಪಕರವಾದ ನಡೆವಳಿಕೆಯನ್ನು ನಡೆಯಬಾರದು. ಹೀಗಿರುವಲ್ಲಿ ನೀನೇತಕ್ಕೆ ಇಂತಹ ಕಾರ್ಯಕ್ಕೆ ಉದ್ಯುಕ್ತನಾದೆ?" ಎಂದು ಕೇಳಿದನು. ಆಗ ಯುಧಿಷ್ಠಿರನು, "ಮಹಾರಾಜಾ, ನಾನು ಅನೃತವಾದಿಯೂ ಅಲ್ಲ. ಪಾಪಕಾರ್ಯ ಪ್ರವರ್ತಕನೂ ಅಲ್ಲ. ಇದು ನಮ್ಮ ಮಾತೃವಿನ ಆಜ್ಞೆ. ಮಾತೃವಾಕ್ಯಪರಿಪಾಲನವು ಪಾಪಕರವಲ್ಲ. ಆದರಿಂದ ನೀನು ಭಯ ಸಂದೇಹಗಳನ್ನು ಬಿಟ್ಟು ನಮ್ಮ ಇಷ್ಟಕ್ಕೆ ಸಂಮತಿಸು," ಎಂದನು. ಅದಕ್ಕೆ ದ್ರುಪದರಾಜನು, "ಹಾಗಾದರೆ, ನೀನೂ, ನಮ್ಮ ಧೃಷ್ಟದ್ಯುಮ್ನನೂ ಮತ್ತು ಕುಂತೀ ದೇವಿಯೂ ಈ ಮೂವರೇ ಪ್ರತ್ಯೇಕವಾಗಿ ಕುಳಿತು ಈ ವಿಚಾರವನ್ನು ನಿರ್ಧರಿಸಿರಿ. ಅನಂತರ ನಾಳಿನ ದಿನ ನಾನು ಮುಂದಿನ ಕರ್ತವ್ಯಗಳನ್ನು ಮಾಡುವೆನು," ಎಂದನು. ಆಗಬಹುದೆಂದು ಒಪ್ಪಿ ಅವರು ಮೂವರೂ ಈ ವಿಚಾರವಾಗಿ ಪರಸ್ಪರ ಚರ್ಚಿಸಿ ಮಾತನಾಡುತ್ತಿರುವ ಸಮಯಕ್ಕೆ ಸರಿಯಾಗಿ, ಲೋಕಸಂಚಾರಮಾಡಿಕೊಂಡು ವೇದವ್ಯಾಸ ಮಹರ್ಷಿಗಳು ಆ ಸ್ಥಳಕ್ಕೆ ಬಂದರು.

ಅದನ್ನು ನೋಡಿ ದ್ರುಪದರಾಜನು ಸಂತೋಷದಿಂದ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಚರ್ಚೆಯಲ್ಲಿದ್ದ ವಿಚಾರವನ್ನು ಎಲ್ಲರೆದುರಲ್ಲಿಯೂ ವಿಜ್ಞಾಪಿಸಿಕೊಳ್ಳಲು, ಆ ಮಹರ್ಷಿಗಳು, "ದ್ರುಪದ ರಾಜಾ, ಯುಧಿಷ್ಠಿರನು ಹೇಳಿದುದು ತಪ್ಪಲ್ಲ. ಇದರಿಂದ ನಿನಗೆ ಯಾವ ದೋಷವೂ ಇಲ್ಲ ಯಾರಿಗೂ ಇದರಿಂದ ಪಾಪಲೇಪವೂ ಇಲ್ಲ. ಹೀಗೆ ಸಂಧಿಯೊದಗಲು ಪೂರ್ವವಿಚಾರವು ಒಂದು ಮೂಲವಾಗಿರುವುದು. ನಾನದನ್ನು ಇವರಿಗೆ ಯಾರಿಗೂ ಹೇಳಲಾರೆ, ನೀನೊಬ್ಬನೇ ನನ್ನೊಡನೆ ಬಾ, ವಿವರವಾಗಿ ತಿಳಿಸುವೆನು," ಎಂದು ಹೇಳಿ ಆತನನ್ನು ಅರಮನೆಯೊಳಗೆ ಒಂದು ಗೋಪ್ಯವಾದ ಸ್ಥಳಕ್ಕೆ ಕರೆದುಕೊಂಡು ಹೋಗಿ, ದ್ರೌಪದಿಯನ್ನು ಪಾಂಡವರೈದು ಮಂದಿಯೂ ವಿವಾಹ

ಮಾಡಿಕೊಳ್ಳುವುದು ಸರಿಯೇ ಹೊರತು ದೋಷವಲ್ಲವೆಂಬ ವಿಚಾರವನ್ನು ವಿವರವಾಗಿ ಹೇಳ ತೊಡಗಿದನು :

## ಅಧ್ಯಾಯ ೧೬
## ಪಂಚೇಂದ್ರೋಪಾಖ್ಯಾನ

ಪೂರ್ವಕಾಲದಲ್ಲಿ ದೇವತೆಗಳು ನೈಮಿಶಾರಣ್ಯದಲ್ಲಿ ಒಂದು ಮಹಾ ಯಾಗವನ್ನು ಮಾಡಿದರು. ಅದರಲ್ಲಿ ಕಾರ್ಯಾಸಕ್ತನಾಗಿದ್ದ ಯಮ ಧರ್ಮರಾಜನು ಭೂಲೋಕದಲ್ಲಿ ಜನರಾರನ್ನೂ ಸಂಹರಿಸದೆ ಹೋದ ಕಾರಣ ಜನಸಂಖ್ಯೆಯು ಹೆಚ್ಚಾಗಿ ಅವರೂ ದೇವತೆಗಳಂತೆಯೇ ಮರಣ ವಿಲ್ಲದಂತಾದರು. ಇದರಿಂದ ಇಂದ್ರಾದಿ ದೇವತೆಗಳು, ತಮಗೆ ಮಾನವ ರಿಂದ ತಾಪವುಂಟಾದೀತೆಂದು ಬೆದರಿ, ಬ್ರಹ್ಮದೇವನಿಗೆ ಮೊರೆಯಿಟ್ಟರು. ಆತನು ದೇವತೆಗಳ ಯಜ್ಞವಿಚಾರವನ್ನು ಅವರಿಗೆ ತಿಳಿಸಿ, ಯಮನು ಅಲ್ಲಿರುವ ಕಾರಣ ಭೂಲೋಕದ ಜನರನ್ನು ಕೊಲ್ಲದಿರುವನೆಂತಲೂ, ಯಜ್ಞವು ಪೂರ್ತಿಯಾದನಂತರ ಆತನು ಪುನಃ ಬಂದು ತನ್ನ ಲಯ ಕಾರ್ಯವನ್ನು ಕೈಕೊಂಡು ಜನರನ್ನು ಸಂಹರಿಸುವನೆಂತಲೂ ಹೇಳಿದನು. ಆಗ ಇಂದ್ರಾದಿಗಳು ತಾವೂ ಆ ಯಾಗವನ್ನು ನೋಡಬೇಕೆಂದು ಹೋಗುವಲ್ಲಿ, ಆ ಸ್ಥಳದಲ್ಲಿದ್ದ ಭಾಗೀರಥೀ ನದಿಯಲ್ಲಿ ಒಬ್ಬ ಸುಂದರ ಸ್ತ್ರೀಯು ನೀರಿಗಾಗಿ ಬಂದು ದುಃಖಿಸುತ್ತ ಸ್ನಾನಮಾಡುತ್ತಿದ್ದಳು. ಆಕೆಯ ಕಣ್ಣಿಂದ ಬೀಳುತ್ತಿದ್ದ ಒಂದೊಂದು ತೊಟ್ಟು ಕಣ್ಣೀರೂ ನೀರಿನಲ್ಲಿ ಬಿದ್ದಕೂಡಲೇ ಒಂದೊಂದು ಬಂಗಾರದ ಕಮಲವಾಗುತ್ತಿತ್ತು. ಈ ಆಶ್ಚರ್ಯವನ್ನು ನೋಡಿದ ದೇವೇಂದ್ರನು ಆಕೆಯ ಬಳಿಗೆ ಹೋಗಿ, "ಎಲೌ, ಸಾಧ್ವೀಮಣೀ, ನೀನು ಯಾರು? ಹೀಗೆ ದುಃಖಿಸುತ್ತಿರಲು ಕಾರಣವೇನು? ದಯೆಯಿಟ್ಟು ತಿಳಿಸು," ಎಂದು ಕೇಳಿಕೊಂಡನು. ಅದನ್ನು ಕೇಳಿ ಆಕೆಯು, "ರಾಜೇಂದ್ರಾ! ನಾನೊಬ್ಬ ಭಾಗ್ಯಹೀನಳು. ನೀನು ನನ್ನ ಹಿಂದೆ ಬರುವುದಾದರೆ ನನ್ನ ದುಃಖಕ್ಕೆ ಕಾರಣವೇ ನೆಂಬುದನ್ನು ಕಾಣುವೆ," ಎಂದಳು. ಅದಕ್ಕೆ ಇಂದ್ರನು ಒಪ್ಪಲು, ಸ್ವಲ್ಪ ಹೊತ್ತಿನಲ್ಲಿಯೇ ಉಭಯರೂ ಹಿಮವತ್ಪರ್ವತದ ಶಿಖರದ ಬಳಿಗೆ ಬಂದರು. ಅಲ್ಲಿ ಒಂದು ಬಂಡೆಯ ಮೇಲೆ ಒಬ್ಬ ಸುಂದರ ತರುಣನು

ಒಬ್ಬ ಸುಂದರಿಯೊಡನೆ ವಿನೋದದಿಂದ ಪಗಡೆಯಾಡುತ್ತ ಕುಳಿತಿದ್ದನು. ಆತನನ್ನು ನೋಡಿ ಇಂದ್ರನು, "ಎಲೈ, ನಾನು ಯಾರು ಬಲ್ಲೆಯೋ? ಈ ಪ್ರಪಂಚವೆಲ್ಲಕ್ಕೂ ಒಡೆಯನು! ಇದೆಲ್ಲವೂ ನನ್ನ ಆಧಿಪತ್ಯಕ್ಕೆ ಸೇರಿರುವುದು," ಎಂಬದಾಗಿ ಗರ್ಜಿಸಿದನು. ಹೀಗೆ ರೇಗಿದ ದೇವೇಂದ್ರನನ್ನು ನೋಡಿ, ತರುಣನಂತಿದ್ದ ಪರಶಿವನು ಸ್ವಲ್ಪ ಕಿರುನಗೆ ನಕ್ಕನು. ಆ ಕೂಡಲೇ ದೇವೇಂದ್ರನು ತನ್ನ ಶಕ್ತಿಯೆಲ್ಲವೂ ಉಡುಗಿ ಶಿಲಾಸ್ತಂಭದಂತೆ ನಿಂತುಬಿಟ್ಟನು. ಪಗಡೆಯಾಟವು ಮುಗಿದ ಕೂಡಲೇ ಮಹಾದೇವನು, ಅಲ್ಲಿ ಅಳುತ್ತ ನಿಂತಿದ್ದ ಸಾಧ್ವಿಯನ್ನು ನೋಡಿ, "ಎಲೌ, ಅವನನ್ನು ಈ ಕಡೆಗೆ ಕರೆದುಕೊಂಡು ಬಾ, ಮತ್ತೊಂದಾವೃತ್ತಿ ಅವನು ಗರ್ವಕ್ಕೆ ವಶವಾಗದಂತೆ ಮಾಡುವೆನು," ಎಂದನು. ಅದರಂತೆ ಆಕೆಯು ಇಂದ್ರನನ್ನು ಕರೆತರಲು, ಆ ತರುಣನು ಬಂದು ಮುಟ್ಟಿದೊಡನೆಯೇ ಇಂದ್ರನು ಪ್ರಜ್ಞೆತಪ್ಪಿ ಧೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು. ಆ ತರುಣನೇ ಜಗದೀಶ್ವರನಾದ ಶಂಕರನು. ಆಗ ಮಹಾದೇವನು "ಇಂದ್ರಾ, ಏಳು" ಎಂದು ಎಚ್ಚರಿಸಿ, "ಇನ್ನುಮುಂದೆ ನೀನು ಹೀಗೆ ಅಹಂಕಾರಕ್ಕೆ ವಶನಾಗಿರಬೇಡ. ಇಲ್ಲಿರುವ ಬಂಡೆಯನ್ನು ತೆಗೆದು ಗವಿಯೊಳಗೆ ನೋಡು, ನಿನ್ನಂತೆಯೇ ಮಹಾತೇಜಸ್ವಿಗಳಾಗಿರುವ ನಾಲ್ವರು ಪುರುಷರೊಡನೆ ನೀನೂ ಇರು," ಎಂದನು. ಅದರಂತೆ ಇಂದ್ರನು ಬಂಡೆಯನ್ನು ತೆಗೆಯಲು, ಆ ಗವಿಯೊಳಗೆ ತನ್ನಂತೆಯೇ ಇದ್ದ ನಾಲ್ವರು ಇಂದ್ರರನ್ನು ನೋಡಿದನು. ಆಗ "ಅಯ್ಯೋ! ನಾನೂ ಇವರಂತೆಯೇ ಇಲ್ಲಿ ಸೆರೆ ಬಿದ್ದಿರಬೇಕೇ?" ಎಂದು ಕೂಗಿಕೊಂಡನು ಆಗ ಶಂಕರನು, "ಇಂದ್ರಾ, ನಿನ್ನಂತಹ ಅಹಂಕಾರಿಗಳಲ್ಲಿ ನನಗೆ ದಯೆ ಬರಲಾರದು. ಈ ನಾಲ್ಕು ಮಂದಿಯೂ ನಿನ್ನಂತೆಯೇ ಅಹಂಕಾರ ಪಟ್ಟವರಾದುದರಿಂದ ಅವರಿಗೂ ಈಗತಿ ಬಂದಿರುವುದು. ನೀನೂ ಅವರೊಡನೆ ಸ್ವಲ್ಪ ಕಾಲವಿರು. ನೀವುಗಳೈವರೂ ಭೂಲೋಕದಲ್ಲಿ ಹುಟ್ಟಿ ಅನೇಕ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿತು, (ಹಿಂದೆ ನೀವು ಬ್ರಹ್ಮನಿಗೆ ಮೊರೆಯಿಟ್ಟಿದ್ದಂತೆ) ಅನೇಕ ಮಂದಿ ಮಾನವರನ್ನು ಕೊಂದು ಮತ್ತೆ ನಿಮ್ಮ ಸ್ಥಾನಕ್ಕೆ ಬಂದು ಸೇರುವಿರಿ," ಎಂದು ಹೇಳಿದನು. ಅದನ್ನು ಕೇಳಿ, ಅಲ್ಲಿದ್ದ ಮೊದಲನೆಯ ಇಂದ್ರನು, "ಮಹಾದೇವಾ, ನಿನ್ನ ಅಪ್ಪಣೆಗೆ ಪ್ರತಿಯಿಲ್ಲ; ಆದರೆ,

ಧರ್ಮರಾಜನೂ, ವಾಯುದೇವನೂ, ಈಗಿನ ದೇವೇಂದ್ರನೂ, ಮತ್ತು ಯಮಳರಾದ ಅಶ್ವಿನೀದೇವತೆಗಳೂ ಸಹ ನಮ್ಮನ್ನು ಭೂಲೋಕದಲ್ಲಿ ತಮ್ಮ ಪುತ್ರರನ್ನಾಗಿ ಪಡೆಯಲಿ, ನಾವುಗಳು ಭೂಲೋಕದ ಮತ್ತು ದೇವಲೋಕದ ಶಸ್ತ್ರಾಸ್ತ್ರಗಳಿಂದ ಆ ಮಾನವರೊಡನೆ ಯುದ್ಧಮಾಡಿ ಅವರನ್ನು ಕೊಂದು ಪುನಃ ನಿನ್ನಾಜ್ಞೆಯಂತೆ ಇಂದ್ರಲೋಕಕ್ಕೆ ಬಂದು ಸೇರುವೆವು." ಎಂದು (ಪೂರ್ವದ ಇಂದ್ರನು) ಹೇಳಿದನು. ಅದನ್ನು ಕೇಳಿ, ತತ್ಕಾಲದಲ್ಲಿ ಇಂದ್ರನಾಗಿದ್ದಾತನು, "ಮಹಾದೇವಾ, ನಾನೇ ಭೂಲೋಕಕ್ಕೆ ಹೋಗುವುದಕ್ಕೆ ಪ್ರತಿಯಾಗಿ, ನನ್ನ ಅಂಶದಿಂದಲೇ, ನಿನ್ನಾಜ್ಞೆಯನ್ನು ನಡೆಯಿಸಬಲ್ಲ ಪುರುಷನೊಬ್ಬನನ್ನು ಸೃಷ್ಟಿಸಿ ಕಳುಹಿಸುವೆನು. ಅವನೇ ಈ ಹಳೆಯ ಇಂದ್ರರಲ್ಲಿ ಐದನೆಯವನಾಗಲಿ," ಎಂಬದಾಗಿ ಕೇಳಿಕೊಂಡನು. ಅದಕ್ಕೆ ಮಹಾದೇವನು ಒಪ್ಪಿ, ಇಂದ್ರನ ಭಾಗ್ಯಲಕ್ಷ್ಮಿಯಾಗಿದ್ದ ಆ ಸುಂದರಿಯನ್ನು ನೋಡಿ, 'ಎಲೌ, ಇವರೈವರೂ ಬೇರೆ ಬೇರೆಯಾದ ಅಂಶಗಳಿಂದ ಭೂಲೋಕದಲ್ಲಿ ಪ್ರತ್ಯೇಕ ರೂಪಗಳಿಂದ ಪುರುಷರಾಗಿ ಜನಿಸಿದರೂ, ಆ ಐವರೂ ಸೇರಿ ಒಬ್ಬನೇ ಇಂದ್ರನೆಂಬುದನ್ನು ನೀನು ಬಲ್ಲವಳಾಗಿರುವೆ. ಆದುದರಿಂದ ನೀನೂ ಸಹ ಭೂಲೋಕದಲ್ಲಿ ಅಯೋನಿಜೆಯಾಗಿ ಜನಿಸಿ ಇವರೈವರಿಗೂ ಪತ್ನಿಯಾಗಿದ್ದು ಮತ್ತೆ ಸ್ವರ್ಗಲೋಕಕ್ಕೆ ಬಂದುಬಿಡು," ಎಂದು ಹೇಳಿದನು. ಅದರಂತೆ ಒಪ್ಪಿ ಐದುಮಂದಿ ಇಂದ್ರರೂ ಅವರ ಭಾಗ್ಯಲಕ್ಷ್ಮಿಯೂ ಸಹ ಶಂಕರನೊಡನೆ ಶ್ರೀಮನ್ನಾರಾಯಣನ ಬಳಿಗೆ ಹೋಗಿ ಈ ವಿಚಾರವನ್ನು ತಿಳಿಸಿದರು. ಆತನೂ ಇದಕ್ಕೆ ಒಪ್ಪಿ ತಾನೂ ಸಹ ತನ್ನ ಎರಡು ಅಂಶಗಳಿಂದ ಭೂಲೋಕದಲ್ಲಿ ಶ್ರೀಕೃಷ್ಣ ಬಲರಾಮರಾಗಿ ಅವತರಿಸಿ ಆ ಇಂದ್ರರಿಗೆ ಸಹಾಯ ಮಾಡುವುದಾಗಿ ತಿಳಿಸಿದನು. ಹೀಗೆ ಐದು ಮಂದಿ ಇಂದ್ರರೂ ಪಂಚಪಾಂಡವರ ರೂಪದಿಂದ ಜನಿಸಿ ಈಶ್ವರನ ಅಪ್ಪಣೆಯಂತೆ ತಮ್ಮ ಭಾಗ್ಯಲಕ್ಷ್ಮಿಯನ್ನು ಮದುವೆಯಾಗುವ ತತ್ವವಿದು. ಈ ಐವರೂ ಪ್ರತ್ಯೇಕವಾದ ಐದುಮಂದಿ ಮಾನವರಾಗಿ ಕಂಡರೂ, ಎಲ್ಲರೂ ಸೇರಿ ಒಬ್ಬನೇ ಇಂದ್ರನಾದ್ದರಿಂದ, ಇವರ ಈ ಭಾಗ್ಯಲಕ್ಷ್ಮೀಸ್ವರೂಪಿಣಿಯಾದ ಕೃಷ್ಣಾದೇವಿ (ದ್ರೌಪದಿ) ಯು ಈ ಐವರನ್ನೂ ವಿವಾಹ ಮಾಡಿಕೊಳ್ಳುವುದು ಧರ್ಮವು. ಇದು

ಧರ್ಮವಿರುದ್ಧವಾಗಿಲ್ಲ. ನೀನು ಸಂತೋಷದಿಂದ ದ್ರೌಪದಿಯನ್ನು ಈ ಪಂಚಪಾಂಡವರಿಗೂ ಕ್ರಮವಾಗಿಕೊಟ್ಟು ವಿವಾಹಮಾಡು. ಈ ನಿನ್ನ ಪುತ್ರಿಯು ದೇವೇಂದ್ರನ ಭಾಗ್ಯಲಕ್ಷ್ಮಿಯಲ್ಲದೆ ಇದ್ದಲ್ಲಿ ಸಾಮಾನ್ಯ ಮಾನವ ಸ್ತ್ರೀಯಲ್ಲಿ ಕಾಣದಿರುವ ಈ ಸೂರ್ಯನಂತಹ ದಿವ್ಯ ತೇಜಸ್ಸೂ, ಸುತ್ತಲೂ ಎರಡು ಮೈಲಿಗಳಷ್ಟು ದೂರ ವ್ಯಾಪಿಸಿರುವ ದೇಹ ಪರಿಮಳವೂ ಇದ್ದು, ಈಕೆಯು ಅಯೋನಿಜೆಯಾಗಿ ನಿನ್ನ ಯಜ್ಞ ಕುಂಡದಲ್ಲಿ ಜನಿಸುತ್ತಿದ್ದಳೇ? ಇವೆಲ್ಲವನ್ನೂ ಆಲೋಚಿಸಿ ನೀನು ನಿನ್ನ ಮನಸ್ಸಿನ ಸಂದೇಹವನ್ನು ತೊಲಗಿಸು. ಈ ನಿನ್ನ ಪುತ್ರಿಯ ವಿವಾಹವನ್ನು ಭೂಲೋಕದ ಸಾಮಾನ್ಯ ಸ್ತ್ರೀಪುರುಷರ ವಿವಾಹ ದಂತೆ ಎಂದು ಭಾವಿಸಬೇಡ. ಐದು ಮಂದಿ ಪಾಂಡವರೂ ಸೇರಿ ಒಬ್ಬನೇ ಇಂದ್ರನಾದುದರಿಂದ ತತ್ವತಃ ದ್ರೌಪದಿಯು ಇಂದ್ರ ನೊಬ್ಬನನ್ನೇ ವರಿಸಿದಂತೆ ಭಾವಿಸು. ಇದರ ತತ್ವವನ್ನು ನೋಡಲು ನಿನಗೆ ದಿವ್ಯದೃಷ್ಟಿಯನ್ನೀಗ ಕೊಡುವೆನು. ಅದರಿಂದ ನೀನು ಎಲ್ಲ ವನ್ನೂ ವಿವರವಾಗಿ ನೋಡಿ ತಿಳಿದುಕೊಳ್ಳುವೆ," ಎಂಬದಾಗಿ ಹೇಳಿ ದ್ರುಪದರಾಜನಿಗೆ ದಿವ್ಯದೃಷ್ಟಿಯನ್ನಿತ್ತನು. ಆಗ ದ್ರುಪದರಾಜನಿಗೆ ಪಾಂಡವರೈದುಮಂದಿಯೂ ಅದ್ಭುತ ತೇಜಸ್ಸೌಂದರ್ಯ ಯೌವನ ಗಳಿಂದ ಕೂಡಿ ದಿವ್ಯ ವಸ್ತ್ರಾಲಂಕಾರಭೂಷಿತರಾಗಿ, ಒಂದೇ ಆಕಾರದ ಐದು ಮಂದಿ ಇಂದ್ರರಂತೆ ಕಂಡುದಲ್ಲದೆ, ತನ್ನ ಮಗಳಾದ ದ್ರೌಪದಿಯು ಅತ್ಯಂತ ತೇಜಸ್ಸೌಂದರ್ಯವತಿಯಾಗಿ ದೇವತಾಸ್ತ್ರೀ ಯಂತೆಯೂ, ಆತನಿಗೆ ಗೋಚರವಾಗಿದ್ದ ಐದುಮಂದಿ ಇಂದ್ರರೂ ಒಬ್ಬ ರಲ್ಲೊಬ್ಬರು ಸೇರಿ ಒಬ್ಬನೇ ಇಂದ್ರನು ದ್ರೌಪದಿಯ ಪಾಣಿಗ್ರಹಣ ಮಾಡಿದಂತೆಯೂ ಗೋಚರವಾಯಿತು. ಈ ಆಶ್ಚರ್ಯಕರವಾದ ದೃಶ್ಯ ವನ್ನು ನೋಡಿ ದ್ರುಪದರಾಜನು ಅತ್ಯಂತ ವಿಸ್ಮಯಾನಂದ ಭರಿತನಾಗಿ, ವೇದವ್ಯಾಸ ಮುನಿಗಳಿಗೆ ನಮಸ್ಕಾರಮಾಡಿ ಕೈಮುಗಿದು, "ಮಹಾನು ಭಾವಾ, ನಿಮ್ಮ ಕೃಪೆಯಿಂದ ನನ್ನ ಸಂದೇಹವು ನಿವಾರಣೆಯಾಗಿ ಅತ್ಯಂತಾನಂದವಾಯಿತು. ನನಗೆ ದೇವಲೋಕದ ರಹಸ್ಯವನ್ನು ಪ್ರತ್ಯಕ್ಷವಾಗಿ ತೋರಿಸಿದ ತಮಗೆ ನಾನು ಅತ್ಯಂತ ಕೃತಜ್ಞತಾನಂದ ಗಳಿಂದ ವಂದಿಸುತ್ತೇನೆ," ಎಂದನು.

ಆಗ ವೇದವ್ಯಾಸರು, "ರಾಜೇಂದ್ರಾ, ಈ ನಿನ್ನ ಪುತ್ರಿಯಾಗಿರುವ ದ್ರೌಪದಿಯು, ದೇವಲೋಕದ ಭಾಗ್ಯಲಕ್ಷ್ಮಿಯು, ಇವಳೇ ಹಿಂದೆ ಒಬ್ಬ ಮಹರ್ಷಿಯ ಉದರದಲ್ಲಿ ಅತ್ಯಂತ ಸೌಂದರ್ಯವುಳ್ಳ ಕನ್ಯೆಯಾಗಿ ಹುಟ್ಟಿದ್ದಳು. ಆಕೆಗೆ ಸರಿಯಾದ ಪತಿಯು ದೊರೆಯದಿದ್ದ ಕಾರಣ ಆ ಕನ್ಯೆಯು ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ಆತನನ್ನು ಮೆಚ್ಚಿಸಿದಳು. ಪರಮೇಶ್ವರನು ಪ್ರತ್ಯಕ್ಷನಾಗಿ, "ನಿನಗೆ ಯಾವ ಇಷ್ಟಾರ್ಥವುಬೇಕು?" ಎಂಬದಾಗಿ ಕೇಳಲು, ಆ ಕನ್ಯೆಯು "ಪತಿಂದೇಹಿ, ಪತಿಂದೇಹಿ, ಪತಿಂದೇಹಿ, ಪತಿಂದೇಹಿ, ಪತಿಂದೇಹಿ," ಎಂಬದಾಗಿ ಐದು ಸಲ ತನಗೆ ತಕ್ಕ ಪತಿಯನ್ನು ಕೊಡಬೇಕೆಂದು ಕೇಳಿಕೊಂಡಳು. ಆಗ ಪರಶಿವನು, "ಎಲೌ ನೀನು ಐದಾವೃತ್ತಿ 'ಪತಿಂದೇಹಿ' ಎಂಬದಾಗಿ ಕೇಳಿಕೊಂಡಿರುವುದರಿಂದ ನಿನಗೆ ಐದುಮಂದಿ ಪತಿಗಳಾಗುವರು," ಎಂದು ಹೇಳಿ ಅಂತರ್ಧಾನವಾದನು. ಇದರಿಂದ ಆ ದೇವಲೋಕದ ಭಾಗ್ಯ ಲಕ್ಷ್ಮಿಯನ್ನು ಬ್ರಹ್ಮನೇ ಸೃಷ್ಟಿಸಿ, ನಿನ್ನ ಯಜ್ಞಕುಂಡದಲ್ಲಿ ಉದಿಸಲೇ ಲೆಂಪಡಿಸಿದನು. ಇದರಿಂದ ಈಕೆಯು ಈರೀತಿಯಾಗಿ ಏಕಾಂಶವುಳ್ಳ ಐದು ಮಂದಿಗೆ ಪತ್ನಿಯಾಗುವುದು ಪರಮೇಶ್ವರನ ಇಚ್ಛೆಯು. ಇದರಿಂದ ಯಾರಿಗೂ ಯಾವ ದೋಷವೂ ಇಲ್ಲವು. ಅವರೈವರೂ ಸೇರಿ ಒಬ್ಬನೇ ಇಂದ್ರನಾದುದರಿಂದ ನೀನು ಮನಸ್ಸಿನ ಸಂಶಯವನ್ನು ಬಿಟ್ಟು, ಮುಂದಿನ ವಿವಾಹ ಕಾರ್ಯಗಳನ್ನು ಪಾಂಡವರ ಗುರುಗಳಾದ ಧೌಮ್ಯ ಮಹರ್ಷಿಗಳ ಮೂಲಕ ನಡೆಯಿಸು. ಈ ದಿನವೇ ವಿವಾಹಕ್ಕೆ ದಿನವು ಪ್ರಶಸ್ತ ವಾಗಿರುವುದು," ಎಂದು ಹೇಳಿ, ಧರ್ಮರಾಜನನ್ನು ಕುರಿತು, "ಯುಧಿ ಷ್ಠಿರಾ, ನೀನು ಪಾಂಡುರಾಜನ ಜ್ಯೇಷ್ಠ ಕುಮಾರನು, ಈ ದಿನ ಶುಭ ಲಗ್ನದಲ್ಲಿ ನೀನು ಮೊದಲು ದ್ರೌಪದಿಯನ್ನು ಪಾಣಿಗ್ರಹಣ ಮಾಡಿಕೋ. ಅನಂತರ ನಾಳಿನಿಂದ ನಿನ್ನ ತಮ್ಮಂದಿರು ಒಬ್ಬೊಬ್ಬರು ಒಂದೊಂದು ದಿನ ಆಕೆಯನ್ನು ಕ್ರಮವಾಗಿ ವಿವಾಹ ಮಾಡಿಕೊಳ್ಳಲಿ," ಎಂದು ಹೇಳಿ ಹೊರಟುಹೋದರು

ಅನಂತರ ದ್ರುಪದರಾಜನು, ವಿವಾಹಕ್ಕೆ ಸಕಲವನ್ನೂ ಏರ್ಪಡಿಸಿ, ಧೌಮ್ಯ ಮಹರ್ಷಿಗಳ ಮೂಲಕ ಆ ದಿನವೇ, ಸಕಲ ಬಂಧು ಮಿತ್ರ ಮಂತ್ರಿ ಸಾಮಂತರೊಡಗೂಡಿ ಅಸಂಖ್ಯಾತ ಜನರುಳ್ಳ ಮಹಾ ಸಭೆಯ

ಮಧ್ಯದಲ್ಲಿ, ಬ್ರಾಹ್ಮಣರಾಶೀರ್ವಾದ ಘೋಷಗಳಲ್ಲಿಯೂ, ದಿಕ್ತಟಗಳನ್ನು ತುಂಬಿದ್ದ ವಾದ್ಯ ಘೋಷಗಳಲ್ಲಿಯೂ ಅತ್ಯಂತ ವೈಭವದಿಂದ ದ್ರೌಪದಿಯನ್ನು ಧರ್ಮಪುತ್ರನಿಗೆ ಕೊಟ್ಟು ವಿವಾಹ ಮಂಗಳವನ್ನು ವಿಧಿ ಕ್ರಮವಾಗಿ ನೆರವೇರಿಸಿದನು. ಧೌಮ್ಯ ಮಹರ್ಷಿಗಳು ಸಕಲ ವೇದೋಕ್ತ ಕರ್ಮಗಳನ್ನೂ ಕ್ರಮವಾಗಿ ನಡೆಯಿಸಿ, ಮಾರನೆಯ ದಿನ ಭೀಮಸೇನನಿಗೂ, ಆ ಮಾರನೆಯ ದಿನ ಅರ್ಜುನನಿಗೂ, ಅನಂತರ ಒಂದೊಂದು ದಿನ ನಕುಲ ಸಹದೇವರಿಗೂ ದ್ರೌಪದೀ ದೇವಿಯೊಡನೆ ವಿವಾಹ ಮಂಗಳವನ್ನು ನಡೆಯಿಸಿದರು. ಒಂದೊಂದು ದಿನ ವಿವಾಹವಾದನಂತರವೂ ದ್ರೌಪದಿಯು ಮೊದಲಿಗಿಂತಲೂ ಇನ್ನೂ ಚಿಕ್ಕ ಕನ್ಯೆಯಾಗಿಯೇ ಕಾಣುತ್ತಿದ್ದಳು. ಹೀಗೆ ಜಗದ್ವಿಖ್ಯಾತ ವೈಭವದಿಂದ ದ್ರುಪದರಾಜನು ಐದು ದಿನಗಳು, ಐದು ಮಂದಿ ಪಾಂಡವರಿಗೂ ದ್ರೌಪದಿಯನ್ನು ಕೊಟ್ಟು ವಿವಾಹ ಮಂಗಳವನ್ನು ನೆರವೇರಿಸಿ, ಅವರಲ್ಲಿ ಪ್ರತಿಯೊಬ್ಬರಿಗೂ ಅಪರಿಮಿತವಾದ ಐಶ್ವರ್ಯವನ್ನೂ ನೂರು ಮದಿಸಿದಾನೆಗಳನ್ನೂ ಅನೇಕ ಕುದುರೆಗಳನ್ನೂ ರಥಪದಾತಿಗಳನ್ನೂ ಕೊಟ್ಟುದಲ್ಲದೆ, ಅವರ ಸೇವೆಗಾಗಿ ಅನೇಕ ಮಂದಿ ಸೇವಕ ಸೇವಕಿಯರನ್ನೂ ಕೊಟ್ಟನು. ಆತನು ಕೊಟ್ಟ ಧನಕನಕ ವಸ್ತ್ರವಾಹನಾದಿಗಳು ಅಷ್ಟಿಷ್ಟೆಂದು ಲೆಕ್ಕವೇ ಇಲ್ಲ. ಶ್ರೀಕೃಷ್ಣನೂ ಪಾಂಡವರಿಗೆ ಅನೇಕ ಹಸ್ತಿಅಶ್ವರಥಾದಿಗಳನ್ನೂ ಧನಕನಕ ವಸ್ತ್ರಭೂಷಣಾದಿಗಳನ್ನೂ ಕಳುಹಿಸಿಕೊಟ್ಟನು. ಹೀಗೆ ದ್ರೌಪದೀ ಪಾಂಡವರ ವಿವಾಹ ಮಂಗಳವು ಜಗದ್ವಿಖ್ಯಾತವಾಗಿ ನಡೆದು, ಪಾಂಡವರ ಕಷ್ಟವು ನಿವಾರಣೆಯಾಗಿ ಅವರು ಸುಖವಾಗಿದ್ದರು.

## ಅಧ್ಯಾಯ ೧೭

## ದುರ್ಯೋಧನನ ದುಃಖ

ಸ್ವಯಂವರಕ್ಕೆ ಬಂದಿದ್ದ ರಾಜರುಗಳನೇಕರು, ಮೊದಲೇ ತಮ್ಮ ತಮ್ಮ ರಾಜಧಾನಿಗಳನ್ನು ಸೇರಿ, ಕ್ಷತ್ರಿಯಕನ್ಯೆಯಾದ ದ್ರೌಪದಿಯು ಒಬ್ಬ ಬಡ ಬ್ರಾಹ್ಮಣನ ಕೈಸೇರಿದಳೆಂತಲೂ, ದ್ರುಪದರಾಜನು ತಮ್ಮೆಲ್ಲ ರನ್ನೂ ಸ್ವಯಂವರಕ್ಕೆ ಕರೆಯಿಸಿ ಅನ್ಯಾಯಮಾಡಿ ಅವಮಾನಿಸಿದ ನೆಂತಲೂ ಚಿಂತಾಕ್ರಾಂತರಾಗಿದ್ದರು. ತರುವಾಯ ಅವರ ಕಡೆಯ ಗೂಢಚಾರರುಗಳು ನಿಜವನ್ನು ತಿಳಿದು ಬಂದು, ದ್ರೌಪದಿಯು ಪಾಂಡವರ ಪತ್ನಿಯಾದಳೆಂತಲೂ, ಧನುಸ್ಸನ್ನು ಕಟ್ಟಿ ಮತ್ಸ್ಯಯಂತ್ರದ ಗುರಿಯನ್ನು ಹೊಡೆದವನೇ ಅರ್ಜುನನೆಂತಲೂ, ಪ್ರಬಲ ಬಲಶಾಲಿಯಾದ ಶಲ್ಯರಾಜ ನನ್ನು ಸಹ ಪರಾಭವಿಸಿ ಉರುಳಾಡಿಸಿ ಬಿಟ್ಟವನು ಮತ್ತು ಮರವನ್ನು ಮುರಿದುಕೊಂಡು ರಾಜರೆಲ್ಲರನ್ನೂ ಬಡಿದಟ್ಟಿದ ಪರಾಕ್ರಮಿಯು ಭೀಮ ಸೇನನೆಂತಲೂ ಹೇಳಿದರು. ಇದನ್ನು ಕೇಳಿ, ಪಾಂಡವರು ಕುಂತೀ ಸಹಿತರಾಗಿ ಲಾಕ್ಷಾಗೃಹದಲ್ಲಿ ಬೆಂದುಹೋಗಿದ್ದರೆಂದು ತಿಳಿದಿದ್ದ ರಾಜರುಗಳಿಗೆ ಪರಮಾಶ್ಚರ್ಯವಾಯಿತು. ಇದರಿಂದ ಪಾಂಡವರು ಮೃತ್ಯು ವಶದಿಂದ ಪಾರಾಗಿ, ಶಾಂತರಾದ ಬ್ರಾಹ್ಮಣರಂತೆ ವೇಷಧಾರಿಗಳಾಗಿ ಬಂದು, ವಿಜಯಶಾಲಿಗಳಾದುದನ್ನು ತಿಳಿದು ಅವರೆಲ್ಲರೂ ಬಹಳ ಸಂತೋಷಪಟ್ಟರು. ಅಲ್ಲದೆ, ಪುರೋಚನನು ಮಾಡಿದ ಕ್ರೂರಕೃತ್ಯ ವನ್ನು ಸ್ಮರಿಸಿ ಸ್ಮರಿಸಿ, ಪಾಂಡವರಿಗೆ ಕೆಡುಕುಂಟಾದೀತೆಂದು ಗಮನಿ ಸದೆಯೂ, ಅದಕ್ಕೆ ತಕ್ಕ ಎಚ್ಚರಿಕೆಯನ್ನಾದರೂ ತೆಗೆದುಕೊಂಡು ಕಾರ್ಯ ಮಾಡದೆಯೂ ಇದ್ದ ಭೀಷ್ಮ ಧೃತರಾಷ್ಟ್ರ ಮೊದಲಾದ ಕುರುವೃದ್ಧರ ವಿಷಯದಲ್ಲಿ ಬಹಳ ಅಸಮಾಧಾನ ಪಟ್ಟರು.

ಪಾಂಡವರು ಲಾಕ್ಷಾಗೃಹದಲ್ಲಿ ಉರಿದುಹೋಗಿ, ತನಗೆ ಶತ್ರು ಶೇಷವು ನಿವಾರಣೆಯಾಯಿತೆಂದು ಸಂತೋಷದಿಂದಿದ್ದ ದುರ್ಯೋಧನ ನಿಗೆ, ದ್ರೌಪದಿಯು ಪಾಂಡವರನ್ನು ವಿವಾಹ ಮಾಡಿಕೊಂಡ ವಿಷಯ ವನ್ನು ಕೇಳಿ ಹೊಟ್ಟೆಯಲ್ಲಿ ಬೆಂಕಿಬಿದ್ದಂತಾಯಿತು. ಅಲ್ಲದೆ ಪಾಂಡವರು

ಸಾಹಸದಿಂದ ಕುಂತಿಯೊಡನೆ ತಪ್ಪಿಸಿಕೊಂಡು ಹೋಗಿ ವೇಷಾಂತರ ದಿಂದ, ಅಸಮಾನಳೆನಿಸಿದ ದ್ರೌಪದಿಯನ್ನು ವರಿಸಿ, ಮಹಾಪ್ರತಾಪ ಶಾಲಿಯಾದ ದ್ರುಪದರಾಜನ ಆಶ್ರಯವನ್ನೂ ಸಮರವಿದ್ಯಾವಿಶಾರದ ರೆನಿಸಿದ ಆತನ ಪುತ್ರರಾದ ಧೃಷ್ಟದ್ಯುಮ್ನ ಶಿಖಂಡಿ ಮೊದಲಾದ ಮಹಾ ವೀರರ ಸಹಾಯವನ್ನೂ ಪಡೆದು, ಸರ್ವರ ಮನ್ನಣೆಗೂ ಪಾತ್ರರಾದ ವಿಚಾರವನ್ನರಿತು, ಅವನಿಗೆ ತಡೆಯಲಾರದಷ್ಟು ದುಃಖವೂ ಭಯವೂ ಉಂಟಾದವು. ಇದೆಲ್ಲವನ್ನೂ ತಿಳಿದ ವಿದುರನಿಗೆ ಮಾತ್ರ ಮಿತಿಮೀರಿದ ಸಂತೋಷವುಂಟಾಯಿತು. ಆಗ ಅವನು ಅಂಧನಾದ ಧೃತರಾಷ್ಟ್ರನ ಬಳಿಗೆ ಬಂದು, "ರಾಜೇಂದ್ರಾ, ರಾಜಕನ್ಯಾರತ್ನವಾದ ದ್ರೌಪದಿಯು ನಮ್ಮ ಕುರುವಂಶಕ್ಕೇ ಲಭಿಸಿದಂತಾಯಿತು," ಎಂದು ಸಂತೋಷದಿಂದ ನುಡಿದನು. ಇದನ್ನು ಕೇಳಿದ ಅಂಧನಾದ ಧೃತರಾಷ್ಟ್ರನು, ತನ್ನ ಮಗ ನಾದ ದುರ್ಯೋಧನನನ್ನೇ ದ್ರೌಪದಿಯು ವರಿಸಿದಳೆಂದು ತಿಳಿದು ಅತ್ಯಾನಂದಪಟ್ಟು, ದ್ರೌಪದೀದೇವಿಗೆ ಅಮೂಲ್ಯವಾದ ರತ್ನಾ ಭರಣಗಳನ್ನು ಕೂಡಲೇ ಮಾಡಿಸಿಕೊಂಡುಹೋಗಿ, ಅಲಂಕರಿಸಿ ದುರ್ಯೋಧನನನ್ನೂ ಆಕೆಯನ್ನೂ ಅತ್ಯಂತ ವೈಭವದಿಂದ ಹಸ್ತಿನಾ ಪುರಕ್ಕೆ ಕರೆತರಬೇಕೆಂದು ತನ್ನವರಿಗೆ ಆಜ್ಞೆಮಾಡಿದನು. ಇದನ್ನು ಕೇಳಿದ ವಿದುರನು, "ರಾಜೇಂದ್ರಾ, ದ್ರೌಪದಿಯು ವರಿಸಿದುದು ದುರ್ಯೋಧನನನ್ನಲ್ಲ. ಲಾಕ್ಷಾಗೃಹದಹನದಿಂದ ತಪ್ಪಿಸಿಕೊಂಡು ಹೋಗಿ, ಈಗ ಆರೋಗ ದೃಢಕಾಯರಾಗಿ ಪರಮ ಸಾಹಸಿಗಳೆನಿಸಿರುವ ಪಾಂಡವರನ್ನು. ದ್ರುಪದರಾಜನ ಆಶ್ರಯದಿಂದ ಅವರು ಅಪರಿಮಿ ತೈಶ್ವರ್ಯವನ್ನೂ ಅದ್ಭುತ ಸೈನ್ಯಗಳನ್ನೂ ಧನಕನಕ ವಸ್ತು ವಾಹನಾದಿ ಗಳನ್ನೂ ಪಡೆದು, ಸ್ವಯಂವರಕ್ಕೆ ಬಂದಿದ್ದ ಅನೇಕ ರಾಜರುಗಳ ಪ್ರೀತಿ ಯನ್ನು ಸಂಪಾದಿಸಿ, ಮಹಾ ವರ್ಧಿಷ್ಣುಗಳಾಗಿರುವರು," ಎಂದನು. ಅದನ್ನು ಕೇಳಿ ಧೃತರಾಷ್ಟ್ರನು, ಆಶ್ಚರ್ಯಪಟ್ಟು, "ಓಹೋ! ಹಾಗೆಯೋ? ನನಗೆ ಮತ್ತೂ ಸಂತೋಷವಾಯಿತು. ನನಗೆ ನನ್ನ ಮಕ್ಕಳಿಗಿಂತಲೂ ಪಾಂಡುಪುತ್ರರ ಮೇಲೆಯೇ ಹೆಚ್ಚು ಪ್ರೀತಿಯು. ಆ ಮಹಾವೀರರು ಪ್ರಾಣದಿಂದುಳಿದು ಸುಖವಾಗಿದ್ದುಕೊಂಡು ಅನೇಕ ರಾಜರುಗಳ ಸ್ನೇಹ ಪ್ರೀತಿ ವಿಶ್ವಾಸಗಳನ್ನು ಹೊಂದಿ, ದ್ರೌಪದಿಯ ಕೈಹಿಡಿದು ಅಭಿವೃದ್ಧಿ

ಯಾಗಿರುವುದನ್ನು ಕೇಳಿ ನನ್ನ ಆನಂದಕ್ಕೆ ಪಾರವಿಲ್ಲವಾಗಿರುವದು. ಮಹಾ ಪರಾಕ್ರಮಿಯೂ ಐಶ್ವರ್ಯ ಗೌರವ ಗಾಂಭೀರ್ಯಾದಿಗಳಿಂದ ಅದ್ವಿತೀಯನೂ ಎನಿಸಿರುವ ಆ ದ್ರುಪದರಾಜನ ಸಂಬಂಧ ಪ್ರೀತಿ ವಿಶ್ವಾಸ ಸಹಾಯಗಳನ್ನು ಯಾರುತಾನೇ ಬಯಸಲೊಲ್ಲರು? ಈ ನನ್ನ ಮಕ್ಕಳ ಅಭ್ಯುದಯವನ್ನು ತಿಳಿದು ನನಗೆ ಉಂಟಾಗಿರುವ ಸಂತೋಷವು ಇಷ್ಟಿಷ್ಟೆಂದು ಹೇಳಲಾರೆ," ಎಂದನು. ಇದನ್ನು ಕೇಳಿ ವಿದುರನು, "ರಾಜೇಂದ್ರಾ, ಈ ಸಂತೋಷವು ನಿನ್ನ ಮನಸ್ಸಿನಲ್ಲಿ ಎಂದೆಂದಿಗೂ ಸ್ಥಿರವಾಗಿರಲಿ," ಎಂದು ಹೇಳಿ ಹೊರಟುಹೋದನು.

ಈವರೆಗೆ ಪಾಂಚಾಲನಗರದಲ್ಲಿ ನಡೆದ ಪಾಂಡವರ ವಿವಾಹ ವಿಚಾರವನ್ನೂ, ಪಾಂಡವರಿಗೆ ದ್ರುಪದರಾಜನ ಸಹಾಯವು ಮಾತ್ರವಲ್ಲದೆ, ಇತರ ರಾಜರುಗಳ ಪ್ರೀತಿ ಸಹಾನುಭೂತಿಗಳೇ ಮೊದಲಾದವು ಲಭಿಸಿದ ವಿಚಾರಗಳೆಲ್ಲವನ್ನೂ ತಿಳಿದು, ಎದೆಯೊಡೆದ ದುರ್ಯೋಧನನು ದುಃಖಾಕ್ರಾಂತನಾಗಿ ಕರ್ಣನೊಡನೆ ತಂದೆಯ ಬಳಿಗೆ ಬಂದು, "ಅಪ್ಪಾ, ಪಾಂಡವರ ಅಭ್ಯುದಯದಿಂದ ನೀನು ಅತ್ಯಾನಂದಪಟ್ಟು ವಿದುರನೊಡನೆ ಅವರನ್ನು ಹೊಗಳಿದ ವಿಚಾರವು ನನಗೆ ತಿಳಿಯಿತು. ಶತ್ರುಗಳು ಪ್ರಬಲರಾದುದನ್ನು ಕೇಳಿ, ನೀನು ಅವರನ್ನು ಮುರಿದು ನಿರ್ಮೂಲ ಮಾಡುವ ಆಲೋಚನೆಗಳನ್ನು ಮಾಡುವುದನ್ನು ಬಿಟ್ಟು, ಅವರನ್ನು ಹೊಗಳಿ, ಅವರ ಹಿತಾಭಿವೃದ್ಧಿಕರವಾದ ಮಾತುಗಳನ್ನಾಡಬಹುದೇ? ಅಬಲರೆನಿಸಿದ್ದ ಶತ್ರುಗಳೂ ಈಗ ಪ್ರಬಲಸಹಾಯ ಸಂಪತ್ತುಗಳಿಂದ ಕೂಡಿ, ನಮ್ಮನ್ನೂ ನಮ್ಮ ರಾಜ್ಯ ಕೋಶ ಬಂಧು ಬಳಗ ಮೊದಲಾದ ನಮ್ಮ ಸರ್ವಸ್ವವನ್ನೂ ಏಕಾಪೋಶನ ತೆಗೆದುಕೊಳ್ಳುವಂತಹ ಕಾಲವೇ ಬಂದಿರುವದು—ಅದು ನಿನಗೆ ತಿಳಿಯದೇ?" ಎಂಬದಾಗಿ, ವಿಶೇಷವಾಗಿ ದುಃಖಪಟ್ಟನು. ಅದಕ್ಕೆ ಧೃತರಾಷ್ಟ್ರನು, "ಮಗೂ, ನಿನ್ನ ಹಿತವನ್ನು ಬಯಸಿ ನಿನ್ನ ಇಷ್ಟದಂತೆ ನಡೆಯಬೇಕೆಂಬುದೇ ನನ್ನ ಇಚ್ಛೆಯು. ಆದರೆ, ನನ್ನ ಮನಸ್ಸಿನ ಭಾವವು ಲೇಶವೂ ಪಾಂಡವಹಿತಚಿಂತಕನಾದ ವಿದುರನಿಗೆ ತಿಳಿಯದಿರಲೆಂದು ನಾನು ಹಾಗೆ ಅವರನ್ನು ಹೊಗಳಿದೆನು. ದುರ್ಯೋಧನಾ, ನೀನೂ ಕರ್ಣನೂ ಯಾವರೀತಿ ಹೇಳಿದರೆ ಆ ರೀತಿಯಾಗಿ ಮುಂದಿನ ಕಾರ್ಯಗಳನ್ನು ನಡೆಯಿಸೋಣ. ನಿಮ್ಮ ಅಭಿಪ್ರಾಯ

ಗಳನ್ನು ವಿವರವಾಗಿ ತಿಳಿಸಿರಿ," ಎಂದನು. ಆದಕ್ಕೆ ದುರ್ಯೋಧನನು, "ಅಪ್ಪಾ, ಮೊಟ್ಟಮೊದಲು ನಾವು ಭೇದಸಂಧಾನ ಚತುರರಾದ ನಂಬಿಕೆಯುಳ್ಳ ಕೆಲವರ ಮೂಲಕ ಕುಂತಿಯಪುತ್ರರಿಗೂ ಮಾದ್ರಿಯ ಪುತ್ರರಿಗೂ ವಿರೋಧ ಹುಟ್ಟುವಂತೆ ಏರ್ಪಡಿಸಿ ಪರಸ್ಪರ ವ್ಯಾಜ್ಯವನ್ನು ಹೆಚ್ಚಬೇಕು. ಅಥವಾ ದ್ರುಪದರಾಜನಿಗೂ ಆತನ ಪುತ್ರರಿಗೂ ಮಂತ್ರಿಗಳಿಗೂ ಹೆಚ್ಚಾಗಿ ಹಣವನ್ನೂ ಬಹುಮಾನಗಳನ್ನೂ ಕೊಟ್ಟು, ಅವರನ್ನು ಪಾಂಡವರ ಪಕ್ಷದಿಂದ ತಪ್ಪಿಸಿ ನಮ್ಮ ಕಡೆಗೆ ತಿರುಗಿಸಿಕೊಳ್ಳಬೇಕು. ಇಲ್ಲವಾದರೆ, ನಮ್ಮ ಕಡೆಯ ಕೆಲವರು ಆಪ್ತರನ್ನು ಕಳುಹಿಸಿ, ಹಸ್ತಿನಾಪುರದಲ್ಲಿ ಅವರು ವಾಸಮಾಡಲು ತಕ್ಕಂತೆ ಅನುಕೂಲಗಳಿಲ್ಲವೆಂತಲೂ, ಆದರಿಂದ ಪಾಂಡವರೂ ಪಾಂಚಾಲದಲ್ಲಿಯೇ ವಾಸಮಾಡುವುದು ಉತ್ತಮವೆಂತಲೂ ಅವರಿಗೆ ಉಪಾಯವಾಗಿ ಬೋಧನೆಮಾಡಿಸಿ, ಅವರು ಅಲ್ಲಿಯೇ ಸ್ಥಿರವಾಗಿ ನಿಂತುಬಿಡುವಂತೆ ಏರ್ಪಡಿಸಿ ಬಿಟ್ಟರೆ, ನಮ್ಮ ಸಂಬಂಧನೇ ಇಲ್ಲದೆ ಅವರು ಪ್ರತ್ಯೇಕವಾಗಿ ಅಲ್ಲಿಯೇ ಇದ್ದುಬಿಡುವರು. ಆದಕಾರಣ, ಮೊದಲು, ನಾವು ಬಹಳ ಚತುರರಾದ ಕೆಲವರನ್ನು ಕಳುಹಿಸಿ, ಕುಂತೀಪುತ್ರರಲ್ಲಿಯೇ ಪರಸ್ಪರ ವಿರಸವನ್ನು ಹುಟ್ಟಿಸಿ, ಅವರ ಏಕಮತ್ಯವನ್ನು ತಪ್ಪಿಸಬೇಕು. ಅಥವಾ ದ್ರೌಪದಿಗೆ ತಕ್ಕಂತೆ ಬೋಧನೆಮಾಡಿ, ಅವಳನ್ನು ಗಂಡಂದಿರ ಮೇಲೆ ತಿರುಗಿ ಬೀಳುವಂತೆ ಮಾಡಬೇಕು. ಅವಳಿಗೆ ಅವರೈವರೂ ಪತಿಗಳಾದುದರಿಂದ ಇದು ಬಹಳ ಕಷ್ಟವಾಗಲಾರದು. ಪಾಂಡವರಲ್ಲಿ ಒಬ್ಬಿಬ್ಬರನ್ನು ಅವಳಿಗೆ ವಿರೋಧವಾಗಿ ತಿರುಗಿಸಿದರೆ, ಅವಳಿಗೆ ಅವರಲ್ಲಿ ಅಸಮಾಧಾನ ವುಂಟಾಗುವುದು. ಅಲ್ಲದೆ, ಈಗ ಬಹಳ ಬುದ್ಧಿಶಾಲಿಗಳಾದ ನಮ್ಮ ಕಡೆಯ ಕೆಲವರು ಸಂಧಾನ ಚತುರರಾದ ಗೂಢಚಾರರು ಅಲ್ಲಿಗೆ ಹೋಗಿ ಪಾಂಡವರಲ್ಲಿ ಅತ್ಯಂತಬಲಶಾಲಿಯಾದ ಭೀಮಸೇನನನ್ನು ಹೇಗಾದರೂ ಉಪಾಯದಿಂದ ಸಂಹರಿಸುವಂತೆ ಮಾಡಿಬಿಟ್ಟರೆ, ನಮ್ಮ ಕಾರ್ಯವು ಕೈಗೂಡುವುದು. ಏತಕ್ಕೆಂದರೆ, ಅವನ ಸಹಾಯದಿಂದಲೇ ಆ ಮಿಕ್ಕ ನಾಲ್ವರೂ ನಮ್ಮನ್ನು ಅಷ್ಟು ಉದಾಸೀನದಿಂದ ನೋಡಿ ಎಲ್ಲ ವಿಪತ್ತುಗಳಿಂದಲೂ ಪಾರಾದುದು. ಅವನೊಬ್ಬನು ಸತ್ತರೆ ಮಿಕ್ಕವರೂ ಸತ್ತಂತೆಯೇ. ಅವರು ನಮ್ಮ ಗೊಡವೆಗೇ ಬರುವುದಿಲ್ಲ. ಮತ್ತು

ನಮ್ಮಿಂದ ರಾಜ್ಯವನ್ನು ಪಡೆದುಕೊಳ್ಳಲು ಪ್ರಯತ್ನಿಸುವುದೂ ಇಲ್ಲ. ಭೀಮನ ಸಹಾಯದಿಂದ ಅರ್ಜುನನು ಸಾಹಸಿಯೆನಿಸಿರುವನೇ ಹೊರತು, ಅವನಿಲ್ಲದಿರುವಾಗ ನಮ್ಮ ಕರ್ಣನೆದುರಿಗೆ ಅವನು ನಿಲ್ಲುವುದೆಂದರೇನು? ಗಾಳಿಗೆ ಹಾರಿಹೋಗುವನು. ಭೀಮನು ಸತ್ತನಂತರ ಮಿಕ್ಕಪಾಂಡವರಿಗೆ ತಮ್ಮ ದೌರ್ಬಲ್ಯವು ಗೋಚರವಾಗಿ, ನಮ್ಮನ್ನು ಮಹಾಶಕ್ತಿವಂತರೆಂದು ಅವರು ಗೌರವಿಸುವರು. ಆಗ ಅವರಿಗೆ ರಾಜ್ಯಕ್ಕಾಗಿ ಪ್ರಯತ್ನಿಸುವ ಕುತೂಹಲವೇ ದೂರವಾಗುವುದು. ನಮ್ಮ ಆಶ್ರಯಕ್ಕೆ ಬಂದು ಸಭ್ಯರೂ ವಿಧೇಯರೂ ಆಗಿದ್ದರೆ, ಆಗ ನಾವು ಉಪಾಯದಿಂದ ಅವರುಗಳನ್ನು ತುಳಿದುಬಿಡಬಹುದು. ನಾವು ಅವರಿಗೆ ಕೆಲವರು ಸುಂದರ ತರುಣಿಯರನ್ನು ತೋರಿಸಿ ಅವರಲ್ಲಿ ಆಸೆ ಹುಟ್ಟಿಸಿದರೆ, ದ್ರೌಪದಿಗೆ ಅವರಲ್ಲಿ ಅಸಹ್ಯವೂ ಅಸಮಾಧಾನವೂ ಹುಟ್ಟಲೇ ಹುಟ್ಟುವುದು. ಇದು ನನ್ನ ಅಭಿಪ್ರಾಯವು. ತಂದೆಯೇ, ಈಗ ನಾವು ವಿಳಂಬ ಮಾಡಲೇ ಕೂಡದು. ನಾನು ಹೇಳಿದ ಉಪಾಯಗಳಲ್ಲಿ ನಿನ್ನ ಮನಸ್ಸಿಗೆ ಯಾವುದು ಸರಿಯಾಗಿ ಕಾಣುವುದೋ ಅದರಂತೆ ಮಾಡು. ಅಲ್ಲದೆ, ದ್ರುಪದರಾಜನಿಗೆ ಅವರಲ್ಲಿ ಸಂಪೂರ್ಣವಾದ ನಂಬಿಕೆಯುಂಟಾಗುವುದಕ್ಕೆ ಮೊದಲೇ ನಾವು ಪ್ರಯತ್ನಮಾಡಿದರೆ, ನಮ್ಮ ಇಷ್ಟದಂತೆ ಕಾರ್ಯಗಳು ನಡೆಯುವುವು. ಇಲ್ಲದೆ, ದ್ರುಪದನು ಪಾಂಡವರಲ್ಲಿ ಸ್ಥಿರ ಪ್ರೀತಿಯನ್ನಿಟ್ಟು ಅವರಿಗೆ ಸಹಾಯಕನಾಗಿ ನಿಂತರೆ, ನಮ್ಮ ಪ್ರಯತ್ನಗಳು ಫಲಿಸಲಾರವು. ಅಹುದೋ ಅಲ್ಲವೋ? ಆಲೋಚಿಸು. ಕರ್ಣಾ, ನಿನ್ನ ಅಭಿಮತವೇನು?" ಎಂದನು. ಅದಕ್ಕೆ ಕರ್ಣನು, "ದುರ್ಯೋಧನಾ, ಪಾಂಡವರ ವಿಷಯದಲ್ಲಿ ನೀನು ಹೇಳಿದಂತೆ ಯಾವ ಕುಟಿಲ ತಂತ್ರಗಳೂ ಫಲಿಸಲಾರವು. ಹಿಂದೆ ಅವರಿಂದ ನಿವಾರಣೆ ಮಾಡಕೊಳ್ಳಲು, ನೀನು ಎಷ್ಟೋ ಯುಕ್ತಿ ತಂತ್ರಗಳನ್ನು ಮಾಡಿ ವಿಫಲನಾಗಿರುವೆ. ಆಗ ಅವರಿನ್ನೂ ಚಿಕ್ಕವರಾಗಿದ್ದರು, ನಿನ್ನ ಬಳಿಯಲ್ಲಿಯೇ ಇದ್ದರು, ಸಹಾಯ ಹೀನರಾಗಿದ್ದರು. ಅವರಿಗೆ ಯಾವ ಸ್ನೇಹಿತರೂ ಆಪ್ತರೂ ಇರಲೇ ಇಲ್ಲ. ಹೀಗಿದ್ದರೂ, ಅವರಿಗೆ ನೀನು ಕೇಡುಕೇನನ್ನೂ ಮಾಡಲಾರದೆ ಹೋದೆ. ಈಗಲಾದರೋ ಅವರು ಪ್ರಾಪ್ತವಯಸ್ಕರಾಗಿರುವರು. ಅಲ್ಲದೆ ನಿನಗೆ ದೂರವಾಗಿರುವರು. ಈಗ ಸಹಾಯಕರನ್ನು ಪಡೆದು ಬಲಿಷ್ಠರೂ ಆಗಿರುವರು.

ಆದಕಾರಣ ನೀನು ಈಗ ಅವರ ಮೇಲೆ ಯಾವ ಕುಟಿಲ ತಂತ್ರಗಳನ್ನು ನಡೆಯಿಸಿದರೂ, ಅವರಿಗೆ ಅದರಿಂದ ಯಾವ ಬಾಧಕವೂ ಆಗಲಾರದು. ಅವರ ಅದೃಷ್ಟವು ಚೆನ್ನಾಗಿದೆ. ಅವರು ತಮ್ಮ ತಂದೆ ತಾತಂದಿರ ಸ್ಥಾನಕ್ಕೆ ಬರಬೇಕೆಂದಿಚ್ಛೆಪಟ್ಟು ಪ್ರಯತ್ನಿಸುತ್ತಿರುವಾಗ ನಾವುಗಳು ಅವರಿಗೆ ಯಾವ ಕೆಡುಕನ್ನು ಮಾಡಲೂ ಸಾಧ್ಯವಲ್ಲ. ನಿನ್ನಿಚ್ಛೆಯಂತೆ ಅವರಲ್ಲಿ ಸ್ವಯೂಥ ಕಲಹವನ್ನು ಹುಟ್ಟಿಸವುದಕ್ಕಾಗುವುದೇ ಇಲ್ಲ ಐದು ಮಂದಿಯೂ ಒಬ್ಬಳೇ ಪತ್ನಿಯ ಕೈಹಿಡಿದಿರುವಾಗ, ಅವರಲ್ಲಿ ಪರಸ್ಪರ ಭೇದಭಾವವು ಹುಟ್ಟೀತೇ? ಅಥವಾ, ಅವರು ಅಂತಹ ಕಷ್ಟದಲ್ಲಿದ್ದಾಗಲೇ ಐದು ಮಂದಿಯನ್ನೂ ವರಿಸಿದ ದ್ರೌಪದಿಯು, ಈಗ ಅವರು ಸಕಲೈಶ್ವರ್ಯ ಸಹಾಯ ಸಂಪನ್ನರಾಗಿ ವೀರಾಧಿವೀರರೆಂಬ ಪ್ರಖ್ಯಾತಿಯನ್ನು ಪಡೆದಿರುವಾಗ ಎಂತಹ ಸಂಧಾನ ಚತುರರಿಂದಲಾಗಲಿ, ಅವಳ ಮನಸ್ಸನ್ನು ಅವರಿಂದ ಬೇರೆಮಾಡಲು ಸಾಧ್ಯವಾದೀತೇ? ದ್ರುಪದರಾಜನಾದರೋ ಸತ್ಯವಂತನು ಮತ್ತು ಗುಣಶಾಲಿಯು. ನೀನು ಹೇಳಿವಂತೆ ನಮ್ಮ ಧನ ಕನಕ ಬಹುಮಾನಗಳಿಂದ ಅವನು ನಮಗೆ ವಶನಾಗತಕ್ಕವನಲ್ಲ. ನಮ್ಮ ರಾಜ್ಯವೆಲ್ಲವನ್ನೂ ಆತನಿಗೆ ಕೊಟ್ಟರೂ ಆತನು ಕುಂತೀಪುತ್ರರನ್ನು ಕೈಬಿಡುವುದಿಲ್ಲ. ಆತನ ಮಗನಾದ ಧೃಷ್ಟದ್ಯುಮ್ನನಾದರೋ ಪ್ರಬಲ ಪರಾಕ್ರಮಿಯು ಮತ್ತು ವಿದ್ಯಾಬುದ್ಧಿ ವಿವೇಕ ಸಂಪನ್ನನು. ಆದಕಾರಣ ಕುಟಿಲ ತಂತ್ರಗಳಿಂದ ಪಾಂಡವರಿಗೆ ಕೆಡುಕನ್ನು ಮಾಡಲು ಸಾಧ್ಯವೇ ಅಲ್ಲವೆಂಬುದೇ ನನ್ನ ಅಭಿಪ್ರಾಯವು. ಆದಕಾರಣ ಪಾಂಡವರ ಮೇಲೆ ಈಗಲೇ ತಗಿಲಿಬಿದ್ದು ಹೊಡದಾಡಿ ಹೋರಾಡಿ ಅವರನ್ನು ನಿರ್ಮೂಲ ಮಾಡಿಬಿಡಬೇಕಾದುದೇ ಕರ್ತವ್ಯವು. ಆದರಿಂದ ರಾಜೇಂದ್ರಾ, ಇದಕ್ಕೆ ನೀನು ಸಮ್ಮತಿಸಬೇಕು. ದುರ್ಯೋಧನಾ, ಪಾಂಡವರಿಗೂ ದ್ರುಪದ ರಾಜನಿಗೂ ನಮ್ಮ ಉದ್ದೇಶವು ತಿಳಿದು ಅವರು ತಮ್ಮ ಸಕಲ ಸಹಾಯ ಸನ್ನಾಹಗಳನ್ನೂ ಪಡೆಯುವುದಕ್ಕೆ ಮೊದಲೇ, ನಾವು ಹೋಗಿ ಹಠಾತ್ತಾಗಿ ಅವರ ಮೇಲೆ ಬೀಳಬೇಕು. ಅಲ್ಲದೆ, ಪಾಂಡವರಿಗಾಗಿ ತನ್ನ ಸರ್ವಸ್ವವನ್ನೂ ಒಪ್ಪಿಸಲು ಸಿದ್ಧವಾಗಿರುವ ಪರಮಸಾಹಸಿಯಾದ ಶ್ರೀಕೃಷ್ಣನು ಅವರ ಸಹಾಯಕ್ಕೆ ಬರಲವಕಾಶವಿಲ್ಲದಂತೆ, ನಾವು ಮುಂದೆಚ್ಚರಿಕೆಯನ್ನು ಕೊಡದೆಯೇ ಹೋಗಿ ಪಾಂಡವರನ್ನು ಕೆಣಕ

ಬೇಕು. ಅವರನ್ನು ಸಾಮ ದಾನ ಭೇದೋಪಾಯಗಳಿಂದ ಗೆಲ್ಲಲು ಸಾಧ್ಯವೇ ಅಲ್ಲವಾದುದರಿಂದ ಪ್ರಕೃತ ದಂಡೋಪಾಯದಿಂದಲೇ ನಾವು ಅವರನ್ನು ಬಡಿದು ಬಲಿಯಿಕ್ಕಿಬಿಡಬೇಕು. ಕ್ಷತ್ರಿಯನಿಗೆ ಶೌರ್ಯವೇ ಪ್ರಧಾನವಾದುದರಿಂದ ನೀನು ಈಗ ಶೌರ್ಯ ಪ್ರಯೋಗದಿಂದಲ್ಲದೆ, ನಿನ್ನ ಶತ್ರುಗಳಾದ ಆ ಜ್ಞಾತಿಗಳನ್ನು ನಿವಾರಣೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ನಾನು ಹೇಳಿದಂತೆ ಮಾಡಲು ಮೊದಲೇರ್ಪಡಿಸು." ಎಂದನು. ಇದನ್ನು ಕೇಳಿ ಧೃತರಾಷ್ಟ್ರನು ಬಹಳ ಸಂತೋಷಪಟ್ಟು, ಅಸ್ತ್ರಶಸ್ತ್ರವಿದ್ಯಾವಿಶಾರದನಾದ ಅವನ ಮೇಧೆಯನ್ನೂ ಪೌರುಷ ಪ್ರದರ್ಶಕವಾದ ಆಲೋಚನೆಯನ್ನೂ ಮೆಚ್ಚಿ, ಈ ವಿಷಯವಾಗಿ ಆಲೋಚಿಸಿ ತೀರ್ಮಾನಿಸಲು, ಭೀಷ್ಮ ದ್ರೋಣ, ವಿದುರನೇ ಮೊದಲಾದ ಮಂತ್ರಾಲೋಚನಾ ಸಭಿಕರನ್ನು ಸಭೆ ಸೇರಿಸಿ, ಈ ವಿಚಾರವನ್ನು ಅವರ ಅವಗಾಹನೆಗೆ ತಂದನು. ಆಗ ಭೀಷ್ಮನು,—ಧೃತರಾಷ್ಟ್ರಾ, ಪಾಂಡವರೊಡನೆ ವಿರೋಧವನ್ನೂ, ಜಗಳವನ್ನೂ ಹೂಡಲು ನಾನೆಂದಿಗೂ ಸಂಮತಿಸಲಾರೆನು. ನೀನು ನನಗೆ ಹೇಗೆ ಪ್ರಿಯನೋ ಹಾಗೆಯೇ ಪಾಂಡುವೂ ಪ್ರಿಯನಾಗಿದ್ದನು. ನನಗೆ ಗಾಂಧಾರಿಯ ಮಕ್ಕಳು ಹೇಗೋ ಕುಂತಿಯ ಮಕ್ಕಳೂ ಹಾಗೆಯೇ ಪ್ರೀತಿಪಾತ್ರರಲ್ಲವೇ? ಅವರುಗಳು ಪರಸ್ಪರ ಜಗಳವಾಡುವುದಕ್ಕೆ ನಾನೆಂದಿಗಾದರೂ ಒಪ್ಪುವೆನೇ? ಇಲ್ಲವೇ ಇಲ್ಲ ದುರ್ಯೋಧನಾ, ಈ ರಾಜ್ಯವು ನಿಮ್ಮ ಪಿತ್ರಾರ್ಜಿತವಾದುದರಿಂದ ನಿನಗೇ ಸೇರಬೇಕೆಂದು ನೀನು ಅಪೇಕ್ಷಿಸುವೆಯಾದರೆ, ಅದು ಪಾಂಡವರಿಗೂ ಪಿತ್ರಾರ್ಜಿತವಾದುದಲ್ಲವೇ? ಅವರೂ ಅದನ್ನು ತಮಗೆ ಬೇಕೆಂದು ಅಪೇಕ್ಷಿಸುವುದು ಧರ್ಮವಲ್ಲವೇ? ಅವರಿಗೆ ರಾಜ್ಯವು ಇಲ್ಲದಿದ್ದ ಮೇಲೆ ನಿನಗಾಗಲಿ, ಭರತ ವಂಶದ ಮತ್ತೆ ಯಾವನಿಗಾಗಲಿ ಈ ರಾಜ್ಯವು ಹೇಗೆ ಸೇರುವುದು? ಅವರು ನಿನಗಿಂತಲೂ ಮೊದಲೇ ರಾಜ್ಯವನ್ನು ಅವರ ತಂದೆಯಾದ ಪಾಂಡುರಾಜನ ಮೂಲಕ ಪಡೆದು ರಾಜ್ಯಭಾರ ಮಾಡುತ್ತಿದ್ದವರು. ನ್ಯಾಯವಾಗಿ ಅವರಿಗೇ ಈ ರಾಜ್ಯದ ಮೇಲೆ ನಿನಗಿಂತಲೂ ಹೆಚ್ಚಾದ ಬಾಧ್ಯತೆಯಿರುವುದು ಆದಕಾರಣ ಈಗ ವಿರಸವಿಲ್ಲದೆ, ಅವರಿಗೆ ಅರ್ಧರಾಜ್ಯವನ್ನು ಕೊಡು. ಅದರಿಂದ ಎಲ್ಲರಿಗೂ ಸುಖವಾಗುವುದು. ಹಾಗೆ ನೀನು ಕೊಡದಿರುವ ಭಾಗದಲ್ಲಿ

ನಮಗೆಲ್ಲರಿಗೂ ಅಗೌರವವೂ ಅವಮಾನವೂ ಆಗುವುದರಲ್ಲಿ ಸಂದೇಹ ವಿಲ್ಲ. ನೀನೂ ಸಹ ಶಾಶ್ವತವಾದ ಒಳ್ಳೆಯ ಹೆಸರನ್ನು ಪಡೆ. ಕೀರ್ತಿ ವಂತನಾದ ಮನುಷ್ಯನಿಗೆ ಮರಣವೇ ಇಲ್ಲ. ಆತನು ಸತ್ತರೂ ಕೀರ್ತಿ ಶರೀರದಿಂದ ಸಜೀವವಾಗಿರುವಂತೆ ಜನರಿಂದ ಗಣಿಸಲ್ಪಡುವನು. ಮನುಷ್ಯನಿಗೆ ಅಪಕೀರ್ತಿ ಬರುವುದಾದರೆ, ಆಗಲೇ ಅವನು ಸತ್ತಂತೆಯೇ ಆಗುವುದು. ಅವನು ಜೀವಿಸಿದ್ದರೂ ಶವದಂತೆ ಎಲ್ಲರಿಂದಲೂ ದೂರ ಮಾಡಲ್ಪಡುವನು. ಆದುದರಿಂದ ನಿಮ್ಮ ಪೂರ್ವಜರಂತೆ ಕುರು ವಂಶಕ್ಕೆ ಯೋಗ್ಯವಾದ ಸನ್ಮಾರ್ಗವನ್ನು ಅನುಸರಿಸಿ ನಡೆದುಕೋ. ಪಾಂಡವರೂ ಕುಂತಿಯೂ ಸಹ ಜೀವದಿಂದಿರುವುದೂ, ದುಷ್ಟನಾದ ಪುರೋಚನನು ಅಗ್ನಿಗೆ ಸಿಕ್ಕಿ ಉರಿದುಹೋದುದೂ, ನಮ್ಮ ಪುಣ್ಯ ವಿಶೇಷವು. ಲಾಕ್ಷಾಗೃಹದಹನದ ಅಪರಾಧಕ್ಕಾಗಿ ಪುರೋಚನ ನಿಗಿಂತಲೂ ನಿನಗೆ ಹೆಚ್ಚಾದ ಅಪಕೀರ್ತಿಯುಂಟಾಗಿರುವುದು. ನೀನು ಅದನ್ನು ಕಳೆದುಕೊಂಡು ಕೀರ್ತಿವಂತನಾಗಲು ಪ್ರಯತ್ನಿಸು. ಪಾಂಡ ವರು ಸತ್ಯವಂತರಾಗಿಯೂ ಐಕಮತ್ಯದಿಂದಲೂ ಇರುವರು. ಅವರಿಗೆ ಈ ರಾಜ್ಯದಲ್ಲಿ ಅರ್ಧ ಭಾಗವನ್ನು ಕೊಡದಿರುವುದು ಅನ್ಯಾಯವು. ಪಾಂಡ ವರು ಜೀವಿತರಾಗಿರುವಲ್ಲಿ, ದೇವೇಂದ್ರನೇ ಎದುರುಬಿದ್ದರೂ, ಅವರು ತಮ್ಮ ರಾಜ್ಯವನ್ನು ಗೆದ್ದುಕೊಳ್ಳದೆ ಇರುವುದಿಲ್ಲ. ಆದುದರಿಂದ ನೀನು, ನನ್ನ ಇಷ್ಟದಂತೆ ನ್ಯಾಯಮಾರ್ಗದಲ್ಲಿ ವರ್ತಿಸಿ, ನಿಮ್ಮೆಲ್ಲರಿಗೂ ಕುಶಲ ವಾಗಬೇಕೆಂದು ಅಪೇಕ್ಷಿಸುವೆಯಾದರೆ, ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಟ್ಟುಬಿಡು," ಎಂದನು. ಅನಂತರ, ದ್ರೋಣನು, "ಧೃತರಾಷ್ಟ್ರ ಮಹಾರಾಜಾ, ಮಂತ್ರಾಲೋಚನೆಗಾಗಿ ಕರೆಯಿಸಲ್ಪಟ್ಟವರು, ನಿಜ ವಾಗಿಯೂ ನ್ಯಾಯವಾಗಿಯೂ, ಕೀರ್ತಿಪ್ರದವಾಗಿಯೂ ಇರುವ ಆಲೋಚನೆಯನ್ನೇ ಹೇಳಬೇಕಾದುದು ಧರ್ಮವು. ನಾನು ಭೀಷ್ಮರ ಅಭಿಮತವನ್ನೇ ಸಂಪೂರ್ಣವಾಗಿ ಅನುಮೋದಿಸುವೆನು. ಕುಂತೀ ಪುತ್ರರಿಗೆ ಅರ್ಧ ರಾಜ್ಯವನ್ನು ಪ್ರತಿಮಾತನಾಡದೆ ಕೊಟ್ಟುಬಿಡಿ. ಅದೇ ನಿಮಗೆ ಸ್ಥಿರ ಕೀರ್ತಿಯನ್ನು ತರುವ ಕರ್ತವ್ಯವು. ಈಗ ನೀನು ಪಾಂಡವರಿಗಾಗಿ ಹೆಚ್ಚಾದ ಧನ ಕನಕ ವಸ್ತುಗಳನ್ನು ಕೊಟ್ಟು ಚತುರ ನಾದ ಒಬ್ಬ ಪುರುಷನನ್ನು, ದ್ರುಪದರಾಜನ ಬಳಿಗೆ ಕಳುಹಿಸು. ಅಲ್ಲದೆ,

ವಧೂವರರಿಗೆಂದು ಅಮೂಲ್ಯವಾದ ವಸ್ತ್ರಾಭರಣಗಳ ಉಡುಗರೆಗಳನ್ನು ಕಳುಹಿಸಿಕೊಡು. ಆತನು ಹೋಗಿ, ದ್ರುಪದರಾಜನೊಡನೆ ಮಾತ ನಾಡುತ್ತ ಆತನ ಬಾಂಧವ್ಯವು ದೊರೆತುದು ನಿಮಗೆ ಎಲ್ಲಾಭಾಗ ದಲ್ಲಿಯೂ ಗೌರವವೂ ಬಲವೂ ಅಧಿಕವಾದಂತಾಯಿತೆಂತಲೂ, ನೀನೂ ದುರ್ಯೋಧನನೂ ಈ ಬಾಂಧವ್ಯದಿಂದ ಅತ್ಯಂತ ಸಂತೋಷಪಟ್ಟಿರು ವಿರೆಂತಲೂ ಮೊದಲಾಗಿ ಧೃಷ್ಟದ್ಯುಮ್ನನಿಗೂ ಸಹ ಹೇಳಲಿ. ಇಷ್ಟು ಮಾತ್ರವಲ್ಲದೆ ದ್ರೌಪದಿಗೆ ಅಮೂಲ್ಯವಾದ ವಸ್ತ್ರಾಭರಣಗಳನ್ನೂ, ದ್ರುಪದ ರಾಜನಿಗೂ ಆತನ ಪತ್ನೀ ಪುತ್ರರಿಗೂ, ಕುಂತೀದೇವಿಗೂ ಸಹ ಉಚಿತ ವಾದ ಉಡುಗರೆಗಳನ್ನೂ ತೆಗೆದುಕೊಂಡು ಹೋಗಿ ಕೊಟ್ಟು ಆತನು ಪಾಂಡವರನ್ನು ದ್ರುಪದರಾಜನೊಡನೆ ಹೊಗಳಿ, ಅವರಿಗೆ ಹಸ್ತಿನಾಪುರಕ್ಕೆ ಬರುವಂತೆ ಆಹ್ವಾನವನ್ನು ಕೊಡಲಿ. ದ್ರುಪದರಾಜನ ಅಪ್ಪಣೆಯಂತೆ ಅವರು ಇಲ್ಲಿಗೆ ಬಂದಾಗ ದುಶ್ಶಾಸನನೂ ಕರ್ಣನೂ ಸಹ ತಕ್ಕ ರಾಜ ಮರ್ಯಾದೆಗಳೊಡನೆ ಹೋಗಿ ಅವರನ್ನು ಎದುರುಗೊಂಡು ಕರೆತರಲಿ. ಅನಂತರ ನೀನು ಅವರನ್ನು ಅವರ ತಂದೆಯಾಳುತ್ತಿದ್ದ ರಾಜ್ಯಕ್ಕೆ, ಪ್ರಜಾಜನರ ಅಭಿಮತದಂತೆ, ಅರಸರನ್ನಾಗಿ ಮಾಡಿ ಅವರಿಗೆ ಪಟ್ಟವನ್ನು ಕಟ್ಟಿ, ನಿನ್ನ ಮಕ್ಕಳಂತೆಯೇ ಅವರನ್ನೂ ಪ್ರೀತಿಯಿಂದ ಕಂಡು ಕೊಂಡಿರು. ಇದೇ ನನ್ನ ಮತ್ತು ಭೀಷ್ಮರ ಆಲೋಚನೆಯು. ಇದರಂತೆ ನೀವುಗಳು ನಡೆಯುವುದಾದರೆ ಎಲ್ಲರಿಗೂ ಸುಖ ಸಂತೋಷಗಳೂ ಕೀರ್ತಿಯೂ ಉಂಟಾಗುವವು," ಎಂಬದಾಗಿ ಹೇಳಿದನು.

ಇದನ್ನು ಕೇಳಿದೊಡನೆಯೇ ಕರ್ಣನಿಗೆ ಬಹಳ ಕೋಪಬಂದಿತು. ಆಗ ಅವನು, ದುರ್ಯೋಧನನನ್ನು ನೋಡಿ, "ಮಿತ್ರಾ, ಈ ಮುದುಕ ರಿಬ್ಬರೂ ನಿನ್ನ ಆಶ್ರಯದಲ್ಲಿದ್ದುಕೊಂಡು, ನಿನ್ನಿಂದ ಉಪಕಾರಗಳನ್ನು ಹೊಂದಿ, ನಿನ್ನ ಹಿತಚಿಂತಕರಂತೆ ಕಾಣುತ್ತ, ತಮ್ಮ ಮನಸ್ಸಿನ ದುರು ದ್ದೇಶವನ್ನು ಹೊರಪಡಿಸದೆ, ನಿನಗೆ ನಷ್ಟಾವಮಾನಗಳನ್ನು ತರುವ ದುರಾಲೋಚನೆಯನ್ನೇ ಹೇಳುತ್ತಿರುವರು. ಮನುಷ್ಯನ ಅದೃಷ್ಟ ವಿದ್ದಂತೆ ಫಲವು ಲಭಿಸುವುದೇ ಹೊರತು, ಪುರುಷಪ್ರಯತ್ನದಿಂದ ಏನೂ ಆಗಲಾರದು. ಆದುದರಿಂದ, ಆದುದಾಗಲಿ, ನೀನು ಇವರ ಮಾತುಗಳನ್ನು ಕೇಳಬೇಡ. ನಿನ್ನ ಬಳಿಯಲ್ಲಿರುವವರ ಮನೋಭಾವ

ಗಳನ್ನರಿತುಕೊಂಡು ನಿನಗೆ ಯಾವುದು ಉಚಿತವೆಂದು ತೋರಿದರೆ ಆ ರೀತಿಯಿಂದ ನಡೆಯುಕೋ," ಎಂದು ಹೇಳಿದನು.

ಇದನ್ನು ಕೇಳಿ ದ್ರೋಣನು, "ಎಲವೋ ಕರ್ಣಾ, ದುಷ್ಟನಾದ ನೀನು ನಿನ್ನ ಯೋಗ್ಯತೆಗೆ ತಕ್ಕಂತೆ ನುಡಿದೆ. ಪಾಂಡವರ ಮೇಲೆ ವಿಷವನ್ನು ಕಾರುತ್ತಿರುವ ನೀನು ನಮ್ಮಲ್ಲಿ ದೋಷಾರೋಪಣೆ ಮಾಡು ತ್ತಿರುವೆ. ಕುರುವಂಶದ ಏಳಿಗೆಗೆ ನನ್ನ ಆಲೋಚನೆಯೇ ಸರಿಯಾದುದು. ಅದರಂತೆ ನಡೆಯುದಿದ್ದ ಪಕ್ಷದಲ್ಲಿ, ಈ ಕೌರವರೆಲ್ಲರೂ ನಿರ್ನಾಮ ವಾಗುವುದೇ ನಿಜ," ಎಂದನು.

ಆಗ ವಿದುರನು, ಧೃತರಾಷ್ಟ್ರನನ್ನು ಕುರಿತು, "ರಾಜೇಂದ್ರಾ, ಭೀಷ್ಮ ದ್ರೋಣರು ಅತ್ಯುತ್ತಮವಾದ ಆಲೋಚನೆಯನ್ನೇ ಹೇಳಿರು ವರು. ಈ ದುರ್ಯೋಧನ ಕರ್ಣರ ಅಭಿಪ್ರಾಯಗಳು ನಿನಗೆ ಯೋಗ್ಯವೂ ಸುಖಕರವೂ ಎಂದು ತಿಳಿಯಬೇಡ. ವಯಸ್ಸಿನಲ್ಲಿಯೂ, ವಿವೇಕ ದಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ ಅಧಿಕರೆನಿಸಿರುವ ಭೀಷ್ಮ ದ್ರೋಣರು ನಿನ್ನ ಮಕ್ಕಳನ್ನೂ ಪಾಂಡುಪುತ್ರರನ್ನೂ ಒಂದೇ ದೃಷ್ಟಿಯಿಂದ ನೋಡಿ, ಉಭಯಹಿತಕರವಾದ ಆಲೋಚನೆಯನ್ನೇ ನಿನಗೆ ಹೇಳಿರುವರಲ್ಲದೆ, ಅಹಿತವಾದ ಮಾತೊಂದನ್ನೂ ಅವರು ಹೇಳಿಲ್ಲ. ಹೇಳಲು ಯಾವ ಕಾರಣವೂ ಇಲ್ಲ. ಅವರ ಅಭಿಮತವನ್ನೇ ನಾನೂ ಅನುಮೋದಿಸುವೆನು. ಪಾಂಡವರಲ್ಲಿನ ದ್ವೇಷಾಸೂಯೆಗಳಿಂದ ನಿನಗೆ ಆಲೋಚನೆಗಳನ್ನು ಹೇಳತಕ್ಕವರು ನಿಜವಾಗಿಯೂ ನಿನಗೆ ಹಿತಚಿಂತಕರಲ್ಲವೇ ಅಲ್ಲ. ಆದ ಕಾರಣ ನೀನು ಭೀಷ್ಮ ದ್ರೋಣರ ಅಮೂಲ್ಯವಾದ ಅಭಿಪ್ರಾಯವನ್ನೇ ಅಂಗೀಕರಿಸು. ಅವರು ಸತ್ಯವಂತರು ಮತ್ತು ಕುರುವಂಶಕ್ಕೆ ನಿಜವಾದ ಹಿತಚಿಂತಕರು. ಅಲ್ಲದೆ, ಅಸ್ತ್ರಶಸ್ತ್ರವಿದ್ಯಾವಿಶಾರದರೂ ಅದ್ಭುತ ಬಾಹು ಬಲಸಮನ್ವಿತರೂ ಆಗಿ ಅನೇಕ ಮಹಾವೀರರನ್ನು ಗೆದ್ದಿರುವ ಪಾಂಡವರನ್ನು ಗೆಲ್ಲಲು ಸಾಧ್ಯವಾದೀತೇ? ಅದರಲ್ಲಿಯೂ ಅಪ್ರತಿಮ ಪರಾಕ್ರಮಿಗಳಾದ ಬಲರಾಮ ಕೃಷ್ಣರ ಪ್ರೀತಿಗೆ ಪಾತ್ರರಾಗಿ, ಸಾತ್ಯಕಿಯ ಸಹಾನುಭೂತಿಯನ್ನು ಪಡೆದು, ದ್ರುಪದರಾಜನ ಅಳಿಯಂದಿರಾಗಿ, ಆತನ ಅಯೋನಿಜಪುತ್ರನಾದ ಧೃಷ್ಟದ್ಯುಮ್ನನೇ ಮೊದಲಾದವರ ಭಾವಮೈದುನರಾಗಿ, ಈ ಕುರುರಾಜ್ಯಕ್ಕೆ ದುರ್ಯೋಧನನಿಗಿಂತಲೂ

ಹೆಚ್ಚು ಬಾಧ್ಯತೆಯನ್ನು ಪಡೆದಿರುವ ಪಾಂಡವರ ವಿಷಯದಲ್ಲಿ ನೀನು ಸತ್ಯ ಧರ್ಮಗಳನ್ನನುಸರಿಸಿ, ಸಹಜವಾದ ಪ್ರೀತಿಯಿಂದ ನ್ಯಾಯ ಮಾರ್ಗದಲ್ಲಿ ಭೀಷ್ಮ ದ್ರೋಣರು ಹೇಳಿದಂತೆ ನಡೆದುಕೊಳ್ಳುವುವೇ ಅತ್ಯುತ್ತಮ ಧರ್ಮವು. ಅಲ್ಲದೆ, ಪುರೋಚನನ ಮೂಲಕ ನಡೆದ ಲಾಕ್ಷಾಗೃಹದಹನದಿಂದ ನಿನಗೆ ಅಪವಾದವೂ ಕಳಂಕವೂ ಬಂದಿವೆ. ಈಗ ಪಾಂಡವರಿಗೆ ಹಿತವನ್ನು ಮಾಡುವುದರ ಮೂಲಕ ಅವುಗಳನ್ನು ಕಳೆದುಕೊಂಡು ನೀನು ಕೀರ್ತಿಶ್ರೇಯಸ್ಸುಗಳನ್ನು ಪಡೆಯಬೇಕು. ಹಾಗೆಮಾಡಿದರೆ, ನಮ್ಮೆಲ್ಲರಿಗೂ ಸುಖವಾಗುವುದು. ಕುರುವಂಶದವರು ಸುಖಪಡುವರಲ್ಲದೆ, ಕ್ಷತ್ರಿಯವಂಶವೇ ಸುರಕ್ಷಿತವಾಗುವುದು. ಹಿಂದೆ ನಮ್ಮವರು ದ್ರುಪದರಾಜನೊಡನೆ ಯುದ್ಧಮಾಡಿ, ಆತನನ್ನು ಗೆಲ್ಲಲಾರದೆ ವಿಫಲರಾಗಿ ಬಂದಾಗ ಪಾರ್ಥನೇ ಆತನನ್ನು ಹಿಡಿದು ತಂದವನೆಂಬುದನ್ನು ನೀನೂ ಬಲ್ಲೆ. ಅಂತಹ ಪರಾಕ್ರಮಿಯು ಈಗ ಪಾಂಡವರಿಗೆ ಸಹಾಯಕನಾಗಿರುವನು. ಆದುದರಿಂದ ಪಾಂಡವರ ಹಿತವನ್ನು ಬಯಸಿ, ನಾವೂ ಸಹ ದ್ರುಪದರಾಜನನ್ನು ನಮಗೆ ಸಹಾಯಕನಾಗುವಂತೆ ಮಾಡಿಕೊಳ್ಳುವುದೇ ಉತ್ತಮವಲ್ಲವೇ? ಅಲ್ಲದೆ, ಶ್ರೀಕೃಷ್ಣನ ಕಡೆಯ ಮಹಾವೀರರು ಅಸಂಖ್ಯಾತವಾಗಿರುವರು. ಪಾಂಡವರ ಸಹಾಯಕ್ಕಾಗಿ ಆ ಕೃಷ್ಣನು ತನ್ನ ಸಕಲಬಲಸಹಿತನಾಗಿ ಬರಲೇ ಬರುವನು. ಕೃಷ್ಣನಿದ್ದ ಪಕ್ಷದಲ್ಲಿ ಜಯವು ಸಿದ್ಧವಾಗಿರುವುದೆಂಬುದು ನಿರ್ವಿವಾದವಿಷಯವು. ಆದಕಾರಣ, ಪ್ರೀತಿಯಿಂದ ಸುಖಪರ್ಯವಸಾನವಾಗಿ ನಡೆಯುವ ಕಾರ್ಯವನ್ನು, ವಿರಸವಿರೋಧಗಳಿಂದ ಸಾಧಿಸಲು ಪ್ರಯತ್ನಿಸುವುದು ಬಹಳ ಅವಿವೇಕವು ಮತ್ತು ಅನ್ಯಾಯವು. ಇಷ್ಟೇ ಅಲ್ಲದೆ, ಪಾಂಡವರು ಬದುಕಿರುವರೆಂದು ತಿಳಿದು ನಮ್ಮ ಪ್ರಜೆಗಳೆಲ್ಲರೂ ಅತ್ಯಂತ ಸಂತೋಷಪಟ್ಟು, ಅವರನ್ನು ನೋಡಬೇಕೆಂಬ ಕುತೂಹಲದಿಂದಿರುವರು. ಅವರ ಇಷ್ಟವನ್ನು ನೆರವೇರಿಸುವುದು ಸಹ ನಿನ್ನ ಕರ್ತವ್ಯವು. ನೀನು ಎಲ್ಲ ವಿಚಾರಗಳನ್ನೂ ತಿಳಿದ ವಿವೇಕಶಾಲಿಯಾಗಿರುವೆ. ಅದರಿಂದ ಪಾಪಕ್ಕೆ ಹಿಂಜರಿಯದಿರುವ ಅವಿವೇಕಿಗಳಾದ ದುರ್ಯೋಧನ, ಕರ್ಣ, ಶಕುನಿ, ಇವರುಗಳ ಮಾತುಗಳಿಗೆ ಕಿವಿಯನ್ನು ಜೋಲುಹಾಕಬೇಡ. ಅವರಿಷ್ಟದಂತೆ ನೀನು ನಡೆಯುವುದಾದರೆ,

ಕುರುವಂಶವೂ ರಾಜ್ಯದ ಪ್ರಜೆಗಳೂ ಸಹ ಅದರ ವಿಷಮ ಫಲವನ್ನನುಭವಿಸಬೇಕಾಗುವುದು," ಎಂಬದಾಗಿ ನಾನು ನಿನಗೆ ಹಿಂದೆಯೇ ಹೇಳಿದ್ದೇನೆ. ಈಗಲೂ ಹೇಳುತ್ತಿದ್ದೇನೆ. ಭೀಷ್ಮ ದ್ರೋಣರ ಬುದ್ಧಿವಾದಗಳಿಗೆ ಬೆಲೆಕೊಟ್ಟು ಅವರಿಷ್ಟದಂತೆ ನಡೆದು ಕುರುವಂಶವನ್ನೂ ನಿನ್ನ ಶ್ರೇಯಃ ಕೀರ್ತಿಗಳನ್ನು ಕಾಪಾಡಿಕೋ," ಎಂಬದಾಗಿ ಒತ್ತಿ ಹೇಳಿದನು.

ವಿದುರನ ಮಾತನ್ನು ಕೇಳಿ ಧೃತರಾಷ್ಟ್ರನು, ಸಂತೋಷದಿಂದ, "ವಿದುರಾ, ಭೀಷ್ಮ ದ್ರೋಣರೂ ನೀನೂ ಸಹ ನನ್ನ ಹಿತವನ್ನು ಬಯಸಿ ಆಲೋಚನೆಯನ್ನು ಹೇಳಿರುವಿರೆಂಬುದು ನನ್ನ ಮನಸ್ಸಿಗೆ ಬಂತು. ನಮ್ಮ ಪುಣ್ಯವಿಶೇಷದಿಂದ ಪಾಂಡವರು ಕುಂತೀ ಸಹಿತರಾಗಿ ಬದುಕಿರುವುದಲ್ಲದೆ, ದ್ರುಪದಪುತ್ರಿಯನ್ನೂ ಪತ್ನಿಯಾಗಿ ಪಡೆದುಕೊಂಡರು. ಆದರಿಂದ ನಮ್ಮ ಸಂತೋಷವೂ ಬಲವೂ ಇನ್ನೂ ಹೆಚ್ಚಾದವು. ನನ್ನ ಪುತ್ರರಂತೆಯೇ ಪಾಂಡುಪುತ್ರರೂ ನನಗೆ ಪ್ರಿಯವಾದವರು. ಆದಕಾರಣ, ವಿದುರಾ, ನೀನೇ ದ್ರೋಣಾಚಾರ್ಯರು ಹೇಳಿದಂತೆ, ಧನಕನಕ ವಸ್ತ್ರಭೂಷಣಾದಿಗಳನ್ನು ಬೇಕಾದಷ್ಟು ತೆಗೆಯಿಸಿಕೊಂಡು ಹೋಗಿ, ಕುಂತೀದೇವಿಗೂ, ದ್ರೌಪದಿಗೂ, ಪಾಂಡವರಿಗೂ, ದ್ರುಪದ ಧೃಷ್ಟದ್ಯುಮ್ನಾದಿಗಳಿಗೂ ಕೊಟ್ಟು, ಅವರೆಲ್ಲರಿಗೂ ನನ್ನ ಪ್ರೀತಿ ಸಂತೋಷಗಳನ್ನು ತಿಳಿಯಪಡಿಸಿ, ದ್ರೌಪದಿಯೊಡನೆ ಪಾಂಡವರನ್ನೂ ಕುಂತಿಯನ್ನೂ ಇಲ್ಲಿಗೆ ಕರೆದುಕೊಂಡು ಬಾ," ಎಂಬದಾಗಿ ಹೇಳಿದನು.

ಅದರಂತೆ ವಿದುರನು ಸಕಲಸನ್ನಾಹಸಹಿತನಾಗಿ ಹೊರಟು ಪಾಂಚಾಲ ನಗರವನ್ನು ಸೇರಿ, ಉಚಿತ ಮರ್ಯಾದೆಗಳಿಂದ ದ್ರುಪದರಾಜನನ್ನು ಕಂಡು ತಾನು ಬಂದ ವಿಚಾರವೆಲ್ಲವನ್ನೂ ತಿಳಿಸಿದನು. ದ್ರುಪದರಾಜನೂ ಸಹ ವಿದುರನನ್ನು ಗೌರವಿಸಿ ಕುಶಲ ಪ್ರಶ್ನೆಮಾಡಿ ಸತ್ಕರಿಸಿದನು. ಅಲ್ಲಿ ಪಾಂಡವರ ಜೊತೆಯಲ್ಲಿ ಬಲರಾಮನೂ ಶ್ರೀಕೃಷ್ಣನೂ ಇದ್ದುದನ್ನು ಕಂಡು ವಿದುರನಿಗೆ ಅತ್ಯಾನಂದವಾಯಿತು. ಪರಸ್ಪರಾಲಿಂಗನದಿಂದ ಕುಶಲ ಪ್ರಶ್ನೆಗಳಾದ ಮೇಲೆ ವಿದುರನು, ತಾನು ತಂದಿದ್ದ ವಸ್ತ್ರಭೂಷಣಾದಿಗಳೆಲ್ಲವನ್ನೂ ಅವರವರಿಗೆ ಒಪ್ಪಿಸಿದನು. ಅನಂತರ ದ್ರುಪದರಾಜನನ್ನು ಕುರಿತು, "ರಾಜೇಂದ್ರಾ, ಧೃತರಾಷ್ಟ್ರನೂ, ಆತನ

ಪುತ್ರರೂ, ಮಂತ್ರಿಗಳೂ ಮಾತ್ರವಲ್ಲದೆ, ಭೀಷ್ಮ ದ್ರೋಣಾದಿಗಳೆಲ್ಲರೂ, ನಿನ್ನ ಬಾಂಧವ್ಯವು ಲಭಿಸಿದುದರಿಂದ, ತಮಗೆ ಪ್ರತ್ಯೇಕವಾದ ರಾಜ್ಯವೊಂದು ಹೊಸದಾಗಿ ದೊರೆತುದಕ್ಕಿಂತಲೂ ಅತಿಶಯ ಸಂತೋಷವುಳ್ಳವರಾಗಿದ್ದಾರೆ. ಅವರೆಲ್ಲರೂ ಪಾಂಡವರನ್ನು ನೋಡಿ ಬಹಳ ದಿನಗಳಾದುದರಿಂದ, ಅವರನ್ನು ನೋಡಲು ಅತ್ಯಾತುರ ಕುತೂಹಲಗಳಿಂದಿದ್ದಾರೆ. ರಾಜಸ್ತ್ರೀಯರೂ ರಾಜ್ಯಪ್ರಜೆಗಳೂ ಸಹ ದ್ರೌಪದೀದೇವಿಯನ್ನು ನೋಡಲು ಪರಮೋತ್ಸಾಹದಿಂದ ಕಾದಿದ್ದಾರೆ. ಆದಕಾರಣ, ಅವರೆಲ್ಲರಿಗೂ ಹಸ್ತಿನಾಪುರಕ್ಕೆ ಹೊರಡಲು ನೀನು ದಯೆಯಿಟ್ಟು ಅಪ್ಪಣೆ ಕೊಡಬೇಕು," ಎಂದು ಕೇಳಿಕೊಂಡನು. ಅಲ್ಲಿದ್ದ ಶ್ರೀಕೃಷ್ಣನೂ ಈ ಮಾತಿಗೆ ಸಂಮತಿಸಲು, ದ್ರುಪದರಾಜನು ಸಂತೋಷದಿಂದ ಒಪ್ಪಿ ಎಲ್ಲರನ್ನೂ ಕಳುಹಿಸಿಕೊಟ್ಟನು. ಶ್ರೀಕೃಷ್ಣ ಬಲರಾಮರೂ ಇವರ ಜೊತೆಯಲ್ಲಿಯೇ ಹಸ್ತಿನಾವತಿಗೆ ಹೊರಟರು.

ಧೃತರಾಷ್ಟ್ರನ ಅಪ್ಪಣೆಯಂತೆ ಪಾಂಡವರನ್ನು ಎದುರುಗೊಂಡು ಕರೆತರಲು ವಿಕರ್ಣ, ದ್ರೋಣಾಚಾರ್ಯ, ಕೃಪಾಚಾರ್ಯರೇ ಮೊದಲಾದವರು ಹಸ್ತಿನಾಪುರದ ಹೊರವಳಯದಲ್ಲಿ ಕಾದಿದ್ದು, ಉಚಿತ ಮರ್ಯಾದೆಗಳಿಂದ ಅವರನ್ನೆದುರುಗೊಂಡು ಪುರಕ್ಕೆ ಕರೆತಂದರು.

ಮೊದಲೇ ಪ್ರಜಾನುರಾಗಿಗಳಾಗಿದ್ದ ಪಾಂಡವರು ನಗರದಲ್ಲಿ ಬರುತ್ತಿದ್ದಾಗ ಜನರು ಕಿಕ್ಕಿರಿದು ಬಂದು ನೋಡಿ ಅತ್ಯಾನಂದಪಟ್ಟರು. ಮತ್ತು ಧರ್ಮಶೀಲನೂ ಪ್ರಜೋಪಕಾರಿಯೂ ಆದ ಯುಧಿಷ್ಠಿರನು ಮತ್ತೆ ತಮಗೆ ರಾಜನಾಗಿ ಬಂದಿರುವುದು ತಮ್ಮ ಪೂರ್ವಪುಣ್ಯವಿಶೇಷವೆಂದು, ಪುರಪ್ರಮುಖರು ಅಲ್ಲಲ್ಲಿ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತ ಜಯಘೋಷಗಳನ್ನು ಮಾಡಿದರು. ಹೀಗೆ ಪಾಂಡವರು ಸಕಲ ಜನರಿಂದಲೂ ಸ್ತುತ್ಯರಾಗಿ ಅಲ್ಲಲ್ಲಿ ಜನರ ಕುಶಲವನ್ನು ವಿಚಾರಿಸುತ್ತ ಅರಮನೆಗೆ ಬಂದು ವಿಶ್ರಮಿಸಿಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಧೃತರಾಷ್ಟ್ರನೂ ಭೀಷ್ಮನೂ ಅವರನ್ನು ತಮ್ಮ ಬಳಿಗೆ ಕರೆಯಿಸಿಕೊಂಡರು. ಆಗ ಧೃತರಾಷ್ಟ್ರನು ಯುಧಿಷ್ಠಿರನನ್ನು ಕುರಿತು, "ಓ ಯುಧಿಷ್ಠಿರಾ, ಈ ಕುರುರಾಜ್ಯವನ್ನು ಸಮವಾಗಿ ಎರಡು ಭಾಗಮಾಡಿ, ಒಂದು ಭಾಗವನ್ನು ದುರ್ಯೋಧನಾದಿಗಳಿಗೂ ಮತ್ತೊಂದು ಭಾಗವನ್ನು

ನಿಮ್ಮಿಬ್ಬರು ಸೋದರರಿಗೂ ಹಂಚಿರುವೆವು. ನೀವುಗಳು ಇನ್ನು ಮುಂದೆ ಖಾಂಡವ ಪ್ರಸ್ಥಕ್ಕೆಹೋಗಿ ಅಲ್ಲಿ ರಾಜ್ಯಭಾರ ಮಾಡಿಕೊಂಡು ಸುಖ ವಾಗಿರಿ. ಇದರಿಂದ ನನ್ನ ಪುತ್ರರಿಗೂ ನಿಮಗೂ ಯಾವ ವಿಧವಾದ ಮನಃಕಷಾಯಗಳೂ ಉಂಟಾಗಲಾರವು," ಎಂದು ಹೇಳಿದನು. ಅದಕ್ಕೆ ಯುಧಿಷ್ಠಿರನು ತಮ್ಮಂದಿರ ಸಂಮತಿಯನ್ನೂ ಸಹ ಪಡೆದು, ಇಂದ್ರ ಪ್ರಸ್ಥಕ್ಕೆ ಹೋಗುವುದಾಗಿ ಧೃತರಾಷ್ಟ್ರನಿಗೆ ತಿಳಿಸಿದನು.

ಆಗ ಖಾಂಡವ ಪ್ರಸ್ಥವೆಂಬುದು ಅರಣ್ಯ ಪ್ರದೇಶವಾಗಿತ್ತು. ಅರ್ಧ ರಾಜ್ಯವನ್ನು ಪಡೆದುಕೊಂಡು ಪಾಂಡವರು ಶ್ರೀಕೃಷ್ಣನನ್ನು ತಮ್ಮ ಮುಂದಾಳಾಗಿ ಮಾಡಿಕೊಂಡು ಅಲ್ಲಿಗೆ ಹೋಗಿ, ವ್ಯಾಸ ಮಹರ್ಷಿಗಳ ಸಹಾಯದಿಂದ ಸರಿಯಾದ ಸ್ಥಳವೊಂದನ್ನು ಗೊತ್ತುಮಾಡಿಕೊಂಡು ಅಲ್ಲಿ ಸುಂದರವಾದ ನಗರವನ್ನು ಕಟ್ಟಿಸಿದರು. ಅದರಲ್ಲಿ ಗಗನ ಚುಂಬಿಗಳಾದ ಗೋಪುರಗಳಿಂದಲೂ, ಕನಕ ಕಲಶಗಳಿಂದಲೂ ಕೂಡಿದ ದಿವ್ಯವಾದ ಅರಮನೆಯನ್ನೂ ಸುಂದರವಾದ ಹರ್ಮ್ಯಗಳನ್ನೂ ಕಟ್ಟಿಸಿ, ಫಲಪುಷ್ಪಭರಿತವಾದ ಉದ್ಯಾನಗಳನ್ನೂ, ತಿಳಿನೀರಿನ ಕೊಳಗಳನ್ನೂ ಏರ್ಪಡಿಸಿ ಇಂದ್ರನ ಅಮರಾವತಿಯಂತೆ ಸುಂದರವಾಗಿ ಮಾಡಿದರು. ಅದರ ಸುತ್ತಲೂ, ಅಂತರಿಕ್ಷವನ್ನು ಮುಟ್ಟುವ ಗೋಡೆಗಳುಳ್ಳ ಕೋಟೆಯೂ, ಅದರ ಸುತ್ತಲೂ ಅಗಾಧವಾದ ಅಗಳ್ತೆಯೂ ಸಹ ರಚಿಸಲ್ಪಟ್ಟಿದ್ದವು. ಆ ನಗರವು ಸಕಲವಿಧವಾದ ವೈಭವಗಳಿಂದ ಕೂಡಿ ಭಾಗ್ಯಲಕ್ಷ್ಮಿಯ ನಿಲಯವೆಂಬಂತೆ ಕಾಣುತ್ತಿದ್ದಿತು. ಈ ನಗರದಲ್ಲಿ ವಾಸಮಾಡಲು ಅನೇಕ ಕಡೆಗಳಿಂದ ಯೋಗ್ಯರಾದ ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರು ಮೊದಲಾಗಿ ಸಕಲವರ್ಣದವರೂ ತಂಡ ತಂಡಗಳಾಗಿ ಬಂದು ನೆಲಸಿದರು. ಈ ನಗರದ ಸೌಂದರ್ಯ ವೈಭವಗಳಿಂದ, ಕ್ರಮ ಕ್ರಮವಾಗಿ ಇದಕ್ಕೆ ಖಾಂಡವ ಪ್ರಸ್ಥವೆಂಬ ಹೆಸರು ಮಾಯವಾಗಿ ಇಂದ್ರಪ್ರಸ್ಥಪುರ ವೆಂಬ ನಾಮಧೇಯವು ಪ್ರಚಾರಕ್ಕೆ ಬಂದುಬಿಟ್ಟಿತು. ಸತ್ಯವಂತರಾದ ಪ್ರಜೆಗಳಿಂದ ತುಂಬಿದ್ದ ಆ ರಾಜಧಾನಿಯಲ್ಲಿ ಪಾಂಡವರು ನಿರಾತಂಕ ವಾಗಿ ಸಂತೋಷದಿಂದ ರಾಜ್ಯಭಾರಮಾಡಿಕೊಂಡಿರುವಂತೆ, ಭೀಷ್ಮ ಧೃತ ರಾಷ್ಟ್ರರ ಏರ್ಪಾಟಿನಿಂದ ಎಲ್ಲವೂ ಅನುಕೂಲವಾಗಿ ನಡೆಯಿತು. ಶ್ರೀ. ಕೃಷ್ಣನು ಪಾಂಡವರನ್ನು ಅವರ ನೂತನ ರಾಜಧಾನಿಯಲ್ಲಿ ಪ್ರತಿಷ್ಠಿಸಿ,

ಅವರಿಂದ ಬೀಳ್ಕೊಂಡು ಬಲರಾಮನೊಡನೆ ದ್ವಾರಕೆಗೆ ಹೊರಟು ಹೋದನು.

## ನಾರದಾಗಮನ

ಹೀಗೆ ಪಾಂಡವರು ಇಂದ್ರಪ್ರಸ್ಥಪುರದಲ್ಲಿ ಸತ್ಯ ಧರ್ಮಗಳಿಂದ ರಾಜ್ಯ ಪರಿಪಾಲನೆ ಮಾಡುತ್ತಿರುವಾಗ ಒಂದಾನೊಂದು ದಿನ ದೇವರ್ಷಿಯಾದ ನಾರದಮುನಿಯು ಲೋಕಸಂಚಾರ ಮಾಡಿಕೊಂಡು ಅಲ್ಲಿಗೆ ಬಂದನು. ಆಗ ಪಾಂಡವರು, ಅಪೂರ್ವವಾಗಿ ಬಂದ ದೇವಮುನಿಯನ್ನು ದ್ರೌಪದೀಸಹಿತರಾಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಆತನಾಶೀರ್ವಾದಗಳನ್ನು ಪಡೆದರು. ಅನಂತರ ದ್ರೌಪದಿಯು ಅಲ್ಲಿಂದ ಹೊರಟು ಹೋದ ಮೇಲೆ, ನಾರದ ಮಹರ್ಷಿಯು ಪಾಂಡವರೆಲ್ಲರನ್ನೂ ಉದ್ದೇಶಿಸಿ, ಹಿರಿಯನಾದ ಯುಧಿಷ್ಠಿರನನ್ನು ಕುರಿತು, "ಯುಧಿಷ್ಠಿರಾ, ಪಾಂಚಾಲಿಯು ನಿಮ್ಮ ಐದು ಮಂದಿಗೂ ಅಗ್ನಿಸಾಕ್ಷಿಕವಾಗಿಮದುವೆಯಾದ ಪತ್ನಿಯಷ್ಟೆ ! ಮುಂದೆ ನಿಮ್ಮ ನಿಮ್ಮಲ್ಲಿ ವಿರಸವು ಹುಟ್ಟದಂತೆ ನೀವುಗಳು ಯಾವುದಾದರೊಂದು ನಿಬಂಧನೆಯನ್ನು ಏರ್ಪಡಿಸಿಕೊಳ್ಳುವುದು ಉತ್ತಮವಲ್ಲವೇ? ಎಷ್ಟು ಆಪ್ತರೂ, ಪರಸ್ಪರ ಪ್ರೀತಿಪಾತ್ರರೂ ಆಗಿದ್ದರೂ, ಸ್ತ್ರೀಯ ವಿಷಯದಲ್ಲಿ ವಿರೋಧಗಳುಂಟಾಗಿ ಅನರ್ಥವು ಸಂಭವಿಸಬಹುದೆಂಬುದಕ್ಕೆ **ಸುಂದೋಪಸುಂದರ** ಚರಿತ್ರೆಯೇ ಸಾಕ್ಷಿಯಾಗಿರುವುದು. ಆದರಿಂದ ನೀವುಗಳು ಆದಿಯಲ್ಲಿಯೇ ನಿಮ್ಮ ನಿಮ್ಮಲ್ಲಿ ಸರಿಯಾದ ನಿಬಂಧನೆಯನ್ನೇರ್ಪಡಿಸಿಕೊಳ್ಳುವುದು ಒಳ್ಳೆಯದು," ಎಂದನು. ಅದನ್ನು ಕೇಳಿ ಯುಧಿಷ್ಠಿರನು, ಕುತೂಹಲಭರಿತನಾಗಿ, "ಮಹರ್ಷಿಗಳೇ, ಆ ಸುಂದೋಪಸುಂದರು ಯಾರು? ಯಾವ ಸ್ತ್ರೀಯಿಂದ ಅವರಿಗೆ ಯಾವ ಅನರ್ಥವು ಸಂಭವಿಸಿತು? ದಯೆಯಿಟ್ಟು ಆ ಕಥೆಯನ್ನು ವಿಸ್ತಾರವಾಗಿ ಹೇಳಬೇಕು," ಎಂಬದಾಗಿ ಪ್ರಾರ್ಥಿಸಿಕೊಂಡನು. ಆಗ ನಾರದನು ಸುಂದೋಪಸುಂದರೆಂಬ ವೀರರ ಕಥೆಯನ್ನು ಹೇಳಿದನು :—

## ಸುಂದೋಪಸುಂದರ ಚರಿತ್ರೆ

"ಪೂರ್ವಕಾಲದಲ್ಲಿ ಹಿರಣ್ಯಕಶಿಪು ವಂಶೀಯನಾದ ನಿಕುಂಭಾಸುರನೆಂಬ ದೈತ್ಯನಿಗೆ ಸುಂದ, ಉಪಸುಂದ, ಎಂಬ ಇಬ್ಬರು ಪುತ್ರರುದಿಸಿದರು.

ಅವರಿಬ್ಬರೂ ಪರಸ್ಪರ ಅತ್ಯಂತ ಪ್ರೀತಿಯಿಂದ ಒಂದೇ ಮನೆಯಲ್ಲಿ ವಾಸಿಸುತ್ತ, ಒಂದೇ ಹಾಸಿಗೆಯಲ್ಲಿ ಮಲಗುತ್ತ, ಒಂದೇ ರೀತಿಯ ಕಾರ್ಯಗಳನ್ನು ಮಾಡುತ್ತ ಒಬ್ಬರನ್ನೊಬ್ಬರು ಎಡೆಬಿಡದೆ, ಇಬ್ಬರೂ ಒಂದೇ ವ್ಯಕ್ತಿಯಂತೆ ಇದ್ದರು. ಅಲ್ಲದೆ, ಇವರು ಪ್ರಬಲ ಪ್ರತಾಪಶಾಲಿಗಳೂ, ದುರ್ಮಾರ್ಗಿಗಳೂ ಮಹಾ ಭಯಂಕರ ಸ್ವರೂಪರೂ ಆಗಿ, ಲೋಕತ್ರಯವನ್ನೂ ಜಯಿಸಿ ಸ್ವಾಧೀನಪಡಿಸಿಕೊಳ್ಳಬೇಕೆಂಬ ಕುತೂಹಲದಿಂದ ಪ್ರಯತ್ನಮಾಡುತ್ತಿದ್ದರು. ಇದಕ್ಕಾಗಿ ಅವರಿಬ್ಬರೂ ವಿಂಧ್ಯಪರ್ವತ ಪ್ರಾಂತಕ್ಕೆ ಹೋಗಿ, ಅಲ್ಲಿ ಜಡೆಗಳನ್ನು ಧರಿಸಿ ವಾತಾಶನ ಮಾಡಿಕೊಂಡು, ಪಾದಾಂಗುಷ್ಠಗಳ ಮೇಲೆ ನಿಂತು ಬಹು ವರ್ಷಗಳ ಕಾಲ ಬ್ರಹ್ಮದೇವನನ್ನು ಕುರಿತು ಮಹಾತಪಸ್ಸನ್ನಾಚರಿಸಿದರು. ಇವರ ತಪೋಜ್ವಾಲೆಯಿಂದ ವಿಂಧ್ಯಪರ್ವತದ ಬಂಡೆಗಳು ಕಾದು, ಎಲ್ಲೆಲ್ಲಿಯೂ ವಾತಾವರಣವು ಅತ್ಯಂತ ಉಷ್ಣವಾಗಿ, ಅಲ್ಲಿ ಸುರನರಾದಿಗಳಿಗೂ ಮೃಗ ಪಕ್ಷಿಗಳಿಗೂ ಸಹ ಸಂಚಾರಕ್ಕೆ ಅವಕಾಶವಿಲ್ಲವಾಯಿತು. ಇವರ ಇಂತಹ ಮಹೋಗ್ರತಪಸ್ಸಿನಿಂದ ಭೀತರಾದ ದೇವತೆಗಳು, ಇವರನ್ನು ತಪೋವಿಮುಖರನ್ನಾಗಿ ಮಾಡಲು, ನಾನಾ ವಿಧವಾದ ತಮ್ಮ ಮಾಯಾ ತಂತ್ರಗಳನ್ನು ಪ್ರಯೋಗಿಸಿದರೂ ಅವರ ಪ್ರಯತ್ನಗಳು ಸಫಲವಾಗಲಿಲ್ಲ. ಕಡೆಗೆ ಪಿತಾಮಹನು ಅವರಿಗೆ ಪ್ರತ್ಯಕ್ಷನಾಗಿ, 'ನಿಮ್ಮ ಇಷ್ಟಾರ್ಥವೇನು' ಎಂದು ಕೇಳಲು, ಅವರು, ಎದ್ದು ಕೈಮುಗಿದು, 'ಪಿತಾಮಹಾ, ನೀನು ನಮಗೆ ಪ್ರಸನ್ನನಾಗಿರುವುದಾದರೆ, ನಮಗೆ ಸಕಲಶಸ್ತ್ರಾಸ್ತ್ರ ಕಲಾ ಕೌಶಲವನ್ನೂ, ಮಾಯಾವಿದ್ಯಾಪ್ರವೀಣತೆಯನ್ನೂ ಕಾಮರೂಪ ಶಕ್ತಿಯನ್ನೂ ಕರುಣಿಸಿ ಮರಣವಿಲ್ಲದಂತೆ ವರವನ್ನು ಅನುಗ್ರಹಿಸಬೇಕು,' ಎಂದು ಪ್ರಾರ್ಥಿಸಿಕೊಂಡರು. ಅದನ್ನು ಕೇಳಿ ಬ್ರಹ್ಮದೇವನು, 'ಎಲೈ ಮಹಾವೀರರೇ, ನೀವುಗಳು ತ್ರಿಲೋಕಾಧಿಪತ್ಯವನ್ನು ಬಯಸಿ ತಪಸ್ಸನ್ನಾಚರಿಸಿರುವುದರಿಂದ ನಿಮಗೆ, ಅಮರತ್ವವನ್ನು ಮಾತ್ರ ಬಿಟ್ಟು, ಮಿಕ್ಕ ಎಲ್ಲಾ ವರಗಳನ್ನೂ ಕೊಟ್ಟಿರುವೆನು. ಆದಕಾರಣ, ನೀವುಗಳು ಅಮರ್ತ್ಯರಿಗೆ ಸಮಾನವಾಗಿರುವಂತೆ ಯಾವುದಾದರೂ ಮರಣವರವನ್ನಪೇಕ್ಷಿಸಿರಿ,' ಎಂದನು. ಅದಕ್ಕವರು ತಮ್ಮ ತಮ್ಮಲ್ಲಿ ಆಲೋಚಿಸಿಕೊಂಡು ತಾವಿಬ್ಬರೂ ಏಕದೇಹನ್ಯಾಯದಿಂದ ಪರಸ್ಪರ ಪರಮಪ್ರೀತಿ

ಯಿಂದಿರುವ ಕಾರಣ, ತವು ತವುಗೆ ವೈರವೆಂದೆಂದಿಗೂ ಉಂಟಾಗಲಾರ ದೆಂದು ಭಾವಿಸಿ, ಬ್ರಹ್ಮದೇವನನ್ನು ನೋಡಿ, 'ಪಿತಾಮಹಾ, ಹಾಗಾದರೆ, ನಿನ್ನಿಂದ ಸೃಷ್ಟಿಸಲ್ಪಟ್ಟ ಯಾವ ಚರಾಚರವಸ್ತುಗಳಿಂದಲೂ ನವುಗೆ ಮರಣವಾಗ ಕೂಡದು. ಇಬ್ಬರಿಗೂ ಪರಸ್ಪರ ನಮ್ಮಿಂದಲೇ ಮರಣ ವುಂಟಾಗುವಂತೆ ವರವನ್ನನುಗ್ರಹಿಸಬೇಕು,' ಎಂಬದಾಗಿ ಕೇಳಿ ಕೊಂಡರು. ಆಗ ಬ್ರಹ್ಮದೇವನು, 'ಆಗಬಹುದು, ನಿಮ್ಮ ಅಪೇಕ್ಷೆ ಯಂತೆಯೇ ಇಬ್ಬರಿಗೂ ಒಬ್ಬರಿಂದೊಬ್ಬರಿಗೆ ಮರಣವುಂಟಾಗಲಿ, ಇನ್ನು ನೀವಿಬ್ಬರೂ ತಪಸ್ಸನ್ನು ನಿಲ್ಲಿಸಿ ನಿಮ್ಮ ನಗರಕ್ಕೆ ಹೊರಡಿ,' ಎಂಬದಾಗಿ ಹೇಳಿ ಅಂತರ್ಧಾನವಾದನು.

"ತರುವಾಯ, ಸುಂದೋಪಸುಂದರಿಬ್ಬರೂ ಸಂತೋಷದಿಂದ ತಮ್ಮ ರಾಜಧಾನಿಗೆ ಬಂದು ಜಟಾವಿಸರ್ಜನೆ ಮಾಡಿಕೊಂಡು ರಾಜಾರ್ಹವಾದ ಅಮೂಲ್ಯ ವಸ್ತ್ರ ರತ್ನಾಭರಣ ಭೂಷಿತರಾಗಿ, ದಿವ್ಯಭೋಜನ, ನೃತ್ಯ ಗೀತಾದಿ ನಿತ್ಯ ವಿಭವಾನಂದದಿಂದ ಮಹೋತ್ಸವವನ್ನು ನಡೆಯಿಸಿದರು. ಅನಂತರ ತಾವು ಲೋಕತ್ರಯವನ್ನೂ ಸ್ವಾಧೀನಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಪ್ರಬಲಸೈನ್ಯಸಹಿತರಾಗಿ ಹೊರಟರು. ಬ್ರಾಹ್ಮಣರೂ ಮಹರ್ಷಿಗಳೂ ಮಾಡುತ್ತಿದ್ದ ಯಜ್ಞಯಾಗಾದಿಗಳಿಂದ ದೇವತೆಗಳ ಶಕ್ತಿಯು ಅಧಿಕವಾಗುವುದೆಂಬದಾಗಿ ತಿಳಿದು, ಎಲ್ಲೆಲ್ಲಿಯೂ ಯಜ್ಞ ಯಾಗಾದಿಗಳನ್ನು ಧ್ವಂಸಮಾಡಿ, ತಮ್ಮ ರಾಕ್ಷಸ ವಂಶಕ್ಕೆ ಕೇಡನ್ನು ಬಯಸುತ್ತಿರುವ ಬ್ರಾಹ್ಮಣರನ್ನೂ ಮುನಿಗಳನ್ನೂ ನಿರ್ನಾಮ ಮಾಡ ಬೇಕೆಂದು ದಿಕ್ಕು ದಿಕ್ಕುಗಳಿಗೂ ಭಟರನ್ನು ಕಳುಹಿಸಿ, ತಾವೂ ಸಹ ಋಷ್ಯಾಶ್ರಮಾದಿ ಪವಿತ್ರಪ್ರದೇಶಗಳನ್ನು ಹೊಕ್ಕು ಅನರ್ಥಗಳನ್ನೇ ನಡೆಯಿಸುತ್ತ ಬಂದರು. ಹೀಗೆ ಇವರಿಬ್ಬರೂ ಇಂದ್ರಲೋಕಕ್ಕೆ ಹೋಗಿ, ಅಲ್ಲಿಂದ ಇಂದ್ರಾದಿಗಳನ್ನೋಡಿಸಿ ಸ್ವರ್ಗಲೋಕವನ್ನು ವಶ ಪಡಿಸಿಕೊಂಡುದಲ್ಲದೆ, ನಾಗಲೋಕವನ್ನು ಹೊಕ್ಕು ಅಲ್ಲಿಯೂ ತಮ್ಮ ಪ್ರತಾಪದಿಂದ ಸಕಲರನ್ನೂ ನದೆಬಡಿದು ಆ ಲೋಕವನ್ನೂ ಆಕ್ರಮಿಸಿ ಕೊಂಡರು. ಹೀಗೆ ಲೋಕತ್ರಯವನ್ನೂ ವಶಮಾಡಿಕೊಂಡು ಅನರ್ಥ ಗಳನ್ನೇ ನಡೆಯಿಸುತ್ತಿದ್ದ ಇವರ ಆಧಿಪತ್ಯದಲ್ಲಿ ದೇವಕರ್ಮಗಳೂ ಪಿತೃಕರ್ಮಗಳೂ ಯಾವುವೂ ನಡೆಯದೆ, ಭೂಲೋಕವೆಲ್ಲವೂ

ಅಮಂಗಳಕರವಾಗಿಯೂ, ಭಯಂಕರವಾಗಿಯೂ ಇತ್ತು. ಹೀಗೆ ತಮ್ಮ ಶಕ್ತಿ ಸಾಹಸಗಳಿಂದ ಎಲ್ಲ ಶತ್ರುಗಳನ್ನೂ ಸದೆಬಡಿದು, ಆ ದೈತ್ಯ ಸಹೋದರರಿಬ್ಬರೂ ತಮಗೆ ಎದುರಿಲ್ಲವೆಂಬ ಅಹಂಕಾರದಿಂದ ಮೆರೆಯುತ್ತ ಕುರುಕ್ಷೇತ್ರದಲ್ಲಿ ವಾಸಮಾಡಿಕೊಂಡಿದ್ದರು.

## ತಿಲೋತ್ತಮೆ

"ಹೀಗೆ ಸುಂದೋಪಸುಂದಸೋದರರಿಬ್ಬರೂ ಲೋಕತ್ರಯದಲ್ಲಿಯೂ ನಡೆಯಿಸಿದ ಅನರ್ಥಗಳಿಂದಲೂ, ಸುರನರಾದಿಗಳಿಗೆ ಅವರು ಉಂಟುಮಾಡುತ್ತಿದ್ದ ಬಾಧೆಯಿಂದಲೂ ನೊಂದ ಸುರಮುನಿಗಳೂ, ಗಂಧರ್ವ ಸಿದ್ಧಸಾಧ್ಯನಾಗನಭಶ್ಚರಾದಿಗಳೂ, ಸಹ ಒಟ್ಟುಗೂಡಿ ಬ್ರಹ್ಮದೇವನ ಬಳಿಗೆ ಹೋಗಿ, ಈ ಸುಂದೋಪಸುಂದರು ಜೀವಿಸಿರುವವರೆಗೂ ಮೂರು ಲೋಕಗಳಿಗೂ ಸುಖವಿಲ್ಲವಾದುದರಿಂದ, ಯಾವರೀತಿಯಿಂದಲಾದರೂ ಇವರನ್ನು ಸಂಹರಿಸಬೇಕೆಂಬದಾಗಿ ಬಹಳವಾಗಿ ಪ್ರಾರ್ಥಿಸಿಕೊಂಡರು. ಆಗ ಪಿತಾಮಹನು, ಅವರ ಬೇಡಿಕೆಯು ನ್ಯಾಯವಾದುದೆಂದು ತಿಳಿದು, ದೇವಶಿಲ್ಪಿಯಾದ ವಿಶ್ವಕರ್ಮನನ್ನು ಬರಮಾಡಿದನು. ಅವನು ಬಂದೊಡನೆಯೇ 'ಕಲಾಚತುರನಾದ ವಿಶ್ವಕರ್ಮ, ಈಗ ನೀನು ಮೂರು ಲೋಕಗಳನ್ನೂ ಮೋಹಗೊಳಿಸುವಂತಹ ಒಬ್ಬ ಸುಂದರೀಮಣಿಯನ್ನು ಸೃಷ್ಟಿಸಬೇಕು,' ಎಂದನು. ಆಗ ವಿಶ್ವಕರ್ಮನು ವಿಧೇಯನಾಗಿ ಒಪ್ಪಿ ಸ್ವಲ್ಪ ಆಲೋಚನೆ ಮಾಡಿ, ಮೂರು ಲೋಕಗಳಲ್ಲಿಯೂ ಇರುವ ಚರಾಚರ ವಸ್ತುಗಳ ಪ್ರತಿಯೊಂದರ ಸೌಂದರ್ಯದಲ್ಲಿಯೂ ತಿಲಮಾತ್ರವನ್ನು ತೆಗೆದುಕೊಂಡು ಒಬ್ಬ ಅಪ್ರತಿಮ ಸೌಂದರ್ಯವತಿಯಾದ ತರುಣಿಯನ್ನು ಸೃಷ್ಟಿಸಿ, ಅವಳ ಮೈಮೇಲೆ ಲಕ್ಷೋಪಲಕ್ಷ ಜೀವರತ್ನಗಳನ್ನು ಹುದುಗಿ, ಅವಳನ್ನು ಸಕಲಲೋಕಗಳಲ್ಲಿಯೂ ಸಮಾನರಹಿತಳನ್ನಾಗಿ ಮಾಡಿದನು. ಅವಳ ಸೌಂದರ್ಯವೂ, ಅವಳ ಮೈಮೇಲಣ ರತ್ನಗಳ ಕಾಂತಿಯೂ ಸಹ, ಅವಳೇ ಪ್ರತ್ಯಕ್ಷಲಕ್ಷ್ಮಿಯೋ ಎನ್ನುವಂತೆ ಮಾಡಿದ್ದವು. ಅವಳನ್ನು ವಿಶ್ವಕರ್ಮನು, ಅತ್ಯುತ್ತಮ ರತ್ನಗಳ ಉತ್ತಮಾಂಶಗಳ ತಿಲಮಾತ್ರವನ್ನು ತೆಗೆದು ಒಟ್ಟುಗೂಡಿಸಿ ಮಾಡಿದ್ದುದರಿಂದ ಬ್ರಹ್ಮದೇವನು ಅವಳಿಗೆ

**ತಿಲೋತ್ತಮೆ** ಯೆಂಬದಾಗಿ ಹೆಸರಿಟ್ಟನು. ಅನಂತರ ಅವಳನ್ನು ಕುರಿತು, 'ತಿಲೋತ್ತಮೇ, ನೀನು ಕುರುಕ್ಷೇತ್ರದಲ್ಲಿ ಅದ್ವಿತೀಯ ಚಕ್ರಾಧಿಪತಿಗಳೆಂದು ಮೆರೆಯುತ್ತಿರುವ **ಸುಂದೋಪಸುಂದರೆಂಬ** ದಾನವ ಸೋದರರ ಬಳಿಗೆ ಹೋಗಿ, ನಿನ್ನ ಸೌಂದರ್ಯಸೌಭಾಗ್ಯದಿಂದಲೂ, ಹಾವ ಭಾವ ವಿಲಾಸ ವೈಖರಿಗಳಿಂದಲೂ ಅವರನ್ನು ಮೋಹಗೊಳಿಸಿ, ನಿನ್ನನ್ನು ನೋಡಿದೊಡನೆಯೇ, ನಿನ್ನನ್ನು ಪಡೆಯಲು ಅವರಿಬ್ಬರೂ ಪರಸ್ಪರ ಜಗಳವಾಡುವಂತೆ ಮಾಡು,' ಎಂದು ಹೇಳಿದನು. ಹಾಗೆಯೇ ಮಾಡುವೆನೆಂದು ಒಪ್ಪಿ ತಿಲೋತ್ತಮೆಯು ಬ್ರಹ್ಮನ ಸಭಾಸ್ಥಳದಿಂದ ಹೊರಟಳು. ಆಗ ಅಲ್ಲಿದ್ದ ಸುರರೂ ಮುನಿಗಳೂ ಎಲ್ಲರೂ ಮನಸ್ಸು ಚಲಿಸಿ ಅವಳನ್ನೇ ನೋಡುತ್ತಿದ್ದರು. ಇಂದ್ರನಿಗೆ ಸಹಸ್ರ ನೇತ್ರಗಳಿದ್ದುದರಿಂದ, ಅವಳು ಯಾವ ದಿಕ್ಕಿಗೆ ಹೋದರೂ ಆ ದಿಕ್ಕಿನ ಕಣ್ಣು ಅವಳನ್ನು ನೋಡುತ್ತಿದ್ದಿತು. ಶಿವನು ದೃಷ್ಟಿಸಿ ಅವಳ ಕಡೆಗೆ ನೋಡದಿದ್ದರೂ ಮನಸ್ಸು ಮಾತ್ರ ಅವಳನ್ನು ನೋಡಲು ಬಯಸಿದ ಕಾರಣ, ಅವಳು, ಅವನ ಯಾವ ಪಕ್ಕದಲ್ಲಿದ್ದರೆ ಆ ದಿಕ್ಕಿನಲ್ಲಿ ಶಿವನಿಗೆ ಒಂದು ತಲೆಯೇ ಉದಿಸುತ್ತ ಬಂತು. ಹೀಗೆ ಶಿವನಿಗಿದ್ದ ಒಂದು ತಲೆಯ ಜೊತೆಗೆ ಇನ್ನು ನಾಲ್ಕು ತಲೆಗಳು ಹುಟ್ಟಿ ಶಿವನು ಪಂಚಮುಖನಾದನು. ತಿಲೋತ್ತಮೆಯು ಹೊರಟು ಹೋದ ಕೂಡಲೇ, ಸುರಮುನಿಗಳೆಲ್ಲರೂ ತಮ್ಮ ಇಷ್ಟವು ನೆರವೇರಿದಂತೆಯೇ ಎಂದು ಭಾವಿಸಿ, ಬ್ರಹ್ಮದೇವನ ಅಪ್ಪಣೆಯನ್ನು ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

"ಸುಂದೋಪಸುಂದರು, ಮೂರು ಲೋಕಗಳನ್ನೂ ತಮ್ಮ ವಶಪಡಿಸಿಕೊಂಡು, ಶತ್ರುಗಳ ಹೆಸರೇ ಇಲ್ಲದಂತೆಮಾಡಿ, ಅಪರಿಮಿತವಾದ ಐಶ್ವರ್ಯವನ್ನು ಶೇಖರಿಸಿ, ನಿಶ್ಚಿಂತರಾಗಿ, ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದರು. ಇವರ ಕಾಲವೆಲ್ಲವೂ ಸ್ರಕ್ಚಂದನ ಪಾನ ಸಂತೋಷಗಳಲ್ಲಿಯೂ ಸ್ತ್ರೀವಿಲಾಸದಲ್ಲಿಯೂ ಕಳೆಯುತ್ತಿದ್ದಿತು. ದೇವತೆಗಳಂತೆಯೇ ಇವರೂ, ವನಗಳಲ್ಲಿಯೂ, ಪರ್ವತಪ್ರಾಂತಗಳಲ್ಲಿಯೂ ವಿಹಾರ ಮಾಡುತ್ತ ಆನಂದದಿಂದಿದ್ದರು. ಹೀಗೆ ಇವರು ಒಂದಾನೊಂದು ದಿನ ವಿಹಾರಾರ್ಥವಾಗಿ ವಿಂಧ್ಯಪರ್ವತ ಪ್ರಾಂತಕ್ಕೆ ಹೋಗಿ, ಅಲ್ಲಿ ನೂರಾರು

ಮಂದಿ ಸುಂದರಿಯರ ಮಧ್ಯದಲ್ಲಿ ಗಾನ ನಾಟ್ಯಗಳಿಂದ ವಿನೋದ ಪಡುತ್ತ ಇದ್ದ ಸಮಯದಲ್ಲಿ ತಿಲೋತ್ತಮೆಯು ಒಂದು ಕೆಂಪಾದ ಕೌಶೇಯಾಂಬರವನ್ನುಟ್ಟು, ನದೀತೀರದಲ್ಲಿ ಬೆಳೆದಿದ್ದ ಕರ್ಣಿಕಾರ ಪುಷ್ಪಗಳನ್ನು ಕೊಯ್ದು ಮಾಲೆಗಳನ್ನು ಕಟ್ಟಿ ಹಿಡಿದುಕೊಂಡು, ಮೆಲ್ಲನೆ, ಆ ದಾನವ ವೀರರಿದ್ದ ಕಡೆಗೆ ಬಂದಳು.

"ಆಗ ಅವರಿಬ್ಬರೂ, ವಿಶೇಷವಾಗಿ ಮಧುಪಾನಮಾಡಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಕುಳಿತಿದ್ದರು. ತಿಲೋತ್ತಮೆಯು ಕಂಡೊಡನೆಯೇ ಅವರ ಕಣ್ಣುಗಳಿಗೆ ಮಿಂಚು ಹೊಳೆದಂತಾಗಿ, ಅವಳನ್ನು ಹೊಂದಬೇಕೆಂಬ ಕುತೂಹಲವು ಇಬ್ಬರಿಗೂ ಉಂಟಾಯಿತು. ಆಗ ಅವರಿಬ್ಬರೂ ಕೂಡಲೇ ಎದ್ದು ಅವಳ ಬಳಿಗೆ ಬಂದರು. ಸುಂದನು ಅವಳ ಬಲಗೈಯನ್ನೂ, ಉಪಸುಂದನು ಎಡಗೈಯನ್ನೂ ಹಿಡಿದುಕೊಂಡರು. ಬ್ರಹ್ಮನ ವರಗಳಿಂದಲೂ ಸ್ವಂತ ಭುಜಬಲದಿಂದಲೂ, ತಾವು ಸಂಪಾದಿಸಿದ್ದ ಐಶ್ವರ್ಯದ ಮದದಿಂದಲೂ, ಆಗತಾನೇ ಮಾಡಿದ್ದ ಮಧುಪಾನದಿಂದಲೂ, ತಿಲೋತ್ತಮೆಯ ಮೇಲಣ ಮೋಹದಿಂದಲೂ ಇಬ್ಬರೂ ಹುಚ್ಚರೇ ಆಗಿ, ಮಿತಿಮೀರಿದ ಕೋಪವು ತಲೆಗೇರಿತು. ಆಗ ಸುಂದನು, ಹುಬ್ಬನ್ನು ಗುಂಟಿಟ್ಟು ಉಪಸುಂದನನ್ನು ನೋಡಿ, 'ಎಲವೋ! ಇವಳು ನನ್ನ ಹೆಂಡತಿಯು, ನಿನಗೆ ಅತ್ತಿಗೆಯು, ಅದರಿಂದ ಬಿಡು ಇವಳನ್ನು,' ಎಂದನು. ಅದಕ್ಕೆ ಉಪಸುಂದನು, 'ಸುಂದಾ, ಇವಳು ನನ್ನ ಹೆಂಡತಿ, ನಿನಗೆ ನಾದಿನಿ, ಅದರಿಂದ ನೀನಿವಳನ್ನು ಮುಟ್ಟಬೇಡ ದೂರ ಹೋಗು,' ಎಂದನು. ಹೀಗೆ ಅವರಿಬ್ಬರೂ ಅವಳನ್ನು 'ನನ್ನ ಹೆಂಡತಿ' 'ನನ್ನ ಹೆಂಡತಿ' ಎನ್ನುತ್ತ ಜಗಳ ವಾಡಲಾರಂಭಿಸಿದರು. ಅವಳ ಸೌಂದರ್ಯದಿಂದ ಮೋಹಿತರಾದ ಅವರಿಗೆ ಪರಸ್ಪರವಾಗಿ ಇದ್ದ ಪ್ರೀತಿ ವಿಶ್ವಾಸಗಳು ಮಾಯವಾಗಿ, ಅಸೂಯಾಕ್ರೋಧಗಳು ಮಿತಿಮೀರಿದವು. ಅವಳ ಕೈಯನ್ನು 'ಮೊದಲು ಹಿಡಿದವನು ನಾನು,' 'ಮೊದಲು ಹಿಡಿದವನು ನಾನು' ಎಂಬದಾಗಿ ಇಬ್ಬರೂ ಕೆರಳಿ ತಮ್ಮ ತಮ್ಮ ಗದೆಗಳನ್ನು ತೆಗೆದುಕೊಂಡು ಪರಸ್ಪರ ಹೊಡೆದಾಡಲಾರಂಭಿಸಿದರು. ಇಬ್ಬರಿಗೂ ಘೋರ ಗದಾಯುದ್ಧವೇ ನಡೆದು, ಅವರಿಬ್ಬರೂ ತಲೆಗಳೊಡೆದು ರಕ್ತವು ಸೋರುತ್ತ ನೆಲಕ್ಕೆ ಬಿದ್ದು ಮೃತ

ರಾದರು. ಇದನ್ನು ನೋಡಿ, ಅವರ ಸಂಗಡ ಬಂದಿದ್ದ ಸ್ತ್ರೀಯರೂ ಪರಿವಾರದವರೂ ಸಹ ಹೆದರಿ ನಡುಗುತ್ತ ಓಡಿಹೋದರು.

"ತರುವಾಯ ಬ್ರಹ್ಮದೇವನು, ಸುರಮುನಿಗಳ ಸಹಿತನಾಗಿ ಅಲ್ಲಿಗೆ ಬಂದು ನೋಡಿ, ತಿಲೋತ್ತಮೆಯನ್ನು ಮೆಚ್ಚಿ, 'ಎಲೌ, ತಿಲೋತ್ತಮೇ! ಮಹಾತೇಜಸ್ವಿನಿಯಾದ ನೀನು ದ್ವಾದಶಾದಿತ್ಯರ ಲೋಕಗಳಲ್ಲಿ ಸಂಚಾರಮಾಡಿಕೊಂಡಿರು. ಅಲ್ಲಿ ನಿನಗೆ ಯಾರಿಂದಲೂ ಯಾವ ಅಪಾಯವೂ ಆಗದಿರಲಿ,' ಎಂಬದಾಗಿ ವರವನ್ನಿತ್ತು, ಇಂದ್ರನಿಗೆ ಸ್ವರ್ಗಲೋಕಾಧಿಪತ್ಯವನ್ನು ಕೊಟ್ಟು ಸತ್ಯಲೋಕಕ್ಕೆ ಹೊರಟುಹೋದನು.

"ಹೀಗೆ ಪರಸ್ಪರ ಅತ್ಯಂತ ಪ್ರೀತಿಯಿಂದ, ತಮ್ಮ ತಮ್ಮಲ್ಲಿ ಎಂದೆಂದಿಗೂ ವಿರೋಧವುಂಟಾಗುವುದಿಲ್ಲವೆಂದು ನಂಬಿ ಏಕ ದೇಹನ್ಯಾಯದಿಂದಿದ್ದ ಸುಂದೋಪಸುಂದರಿಗೆ ಒಬ್ಬ ಸ್ತ್ರೀಯ ಮೂಲಕವಾಗಿ ವಿರೋಧವು ಹುಟ್ಟಿ ಅವರಿಬ್ಬರೂ ಮಡಿದು ಹೋದರು. ಆದಕಾರಣ ನಿಮ್ಮ ಶ್ರೇಯಸ್ಸನ್ನು ಬಯಸಿ ನಾನು ನಿಮಗೆ ಹೇಳುವುದೇನೆಂದರೆ:— ದ್ರೌಪದಿಗಾಗಿ ನಿಮ್ಮ ಐವರಲ್ಲಿ ವಿರೋಧ ಹುಟ್ಟದಂತೆ ಈಗಲೇ ಯಾವುದಾದರೂ ಒಂದು ಸರಿಯಾದ ನಿಬಂಧನೆಯನ್ನು ಮಾಡಿಕೊಳ್ಳಿ. ಹಾಗೆ ನೀವು ಮಾಡಿಕೊಂಡರೆ ನನ್ನ ಮನಸ್ಸಿಗೆ ಬಹಳ ಸಂತೋಷವಾಗುವುದು," ಎಂದನು. ಇದನ್ನು ಕೇಳಿ ಸೋದರರೈವರೂ ಇದು ಸರಿಯಾದ ಆಲೋಚನೆಯೆಂಬದಾಗಿ ತಮ್ಮ ತಮ್ಮಲ್ಲಿ ನಿರ್ಧರಿಸಿಕೊಂಡು ಒಂದು ನಿಬಂಧನೆಯನ್ನು ಮಾಡಿಕೊಂಡರು. ಏನೆಂದರೆ:— ಅವರೈವರು ಸೋದರರಲ್ಲಿ ದ್ರೌಪದಿಯು ಒಂದೊಂದು ವರ್ಷಕಾಲ ಒಬ್ಬೊಬ್ಬರಲ್ಲಿ ಪತ್ನೀಧರ್ಮದಿಂದಿರಬೇಕೆಂತಲೂ, ಹೀಗೆ ಅವಳು ಒಬ್ಬನ ಜೊತೆಯಲ್ಲಿರುವಾಗ ಮಿಕ್ಕವರಲ್ಲಿ ಯಾವನು ನೋಡಿದರೂ, ಅವನು ಹನ್ನೆರಡು ತಿಂಗಳ ಕಾಲ ಕ್ಷೇತ್ರ ತೀರ್ಥಯಾತ್ರೆಯನ್ನು ಮಾಡಿ ಬರಬೇಕೆಂತಲೂ, ನಾರದಮುನಿಯ ಎದುರಲ್ಲಿಯೇ ನಿಬಂಧನೆಯನ್ನು ಮಾಡಿಕೊಂಡು, ಆತನಿಗೆ ವಂದಿಸಿ ಬೀಳ್ಕೊಟ್ಟು ಅದರಂತೆಯೇ ತಪ್ಪದೆ ನಡೆಯುತ್ತಿದ್ದರು. ಹೀಗೆ ಪಾಂಡವರು ಇಂದ್ರಪ್ರಸ್ಥಪುರದಲ್ಲಿ ರಾಜ್ಯಭಾರ ಮಾಡುತ್ತ, ಅನೇಕ ಮಂದಿ ರಾಜರುಗಳನ್ನು ಸಾಮಂತರನ್ನಾಗಿ ಮಾಡಿ

ಕೊಂಡು ಸಂತೋಷದಿಂದಿದ್ದರು. ದ್ರೌಪದಿಯೂ ಸಹ ಐವರು ಪತಿಗಳಿಗೂ ವಿಧೇಯಳಾಗಿ ನಿಬಂಧನೆಯನ್ನನುಸರಿಸಿ ನಡೆದುಕೊಂಡು ಸುಖವಾಗಿದ್ದಳು.

## ಅರ್ಜುನನ ತೀರ್ಥಯಾತ್ರೆ

ಹೀಗೆಯೇ ಕೆಲವು ಕಾಲ ನಡೆದನಂತರ, ಒಂದಾನೊಂದು ದಿನ, ಆ ರಾಜಧಾನಿಯ ಒಬ್ಬ ಬ್ರಾಹ್ಮಣನ ಮನೆಯಲ್ಲಿದ್ದ ಹಸುವನ್ನು ಯಾರೋ ಕಳ್ಳರು ಅರ್ಧರಾತ್ರಿಯಲ್ಲಿ ಕದ್ದು ಹೊಡೆದುಕೊಂಡು ಹೋಗುತ್ತಿದ್ದರು. ಇದನ್ನು ಕಂಡ ಆ ಬ್ರಾಹ್ಮಣನು ದುಃಖ ಕೋಪಗಳಿಂದ ದಿಕ್ಕುತೋರದೆ ಕೂಗಿಕೊಳ್ಳುತ್ತ ಅರಮನೆಯ ಬಳಿಗೆ ಬಂದು, "ಅಯ್ಯೋ, ಧರ್ಮರಾಜನ ರಾಜ್ಯವು ಧರ್ಮರಾಜ್ಯವೆಂಬದಾಗಿ ತಿಳಿದಿದ್ದೆನಲ್ಲಾ! ನನ್ನ ಹೋಮಧೇನುವನ್ನು ಯಾರೋ ಕಳ್ಳರು ಅಪಹರಿಸಿಕೊಂಡು ಹೋದರಲ್ಲಾ! ಪಾಂಡವರೇ, ನೀವವರನ್ನು ಹಿಡಿದು ಶಿಕ್ಷಿಸಿ ನನ್ನ ಧೇನುವನ್ನು ನನಗೆ ತಂದುಕೊಟ್ಟು ನನ್ನನ್ನು ಕಾಪಾಡಬಾರದೇ ?" ಎಂಬದಾಗಿ ಗಟ್ಟಿಯಾಗಿ ಮೊರೆಯಿಟ್ಟನು. ಅರ್ಜುನನು ಅದನ್ನು ಕೇಳಿ ಕನಿಕರದಿಂದ ಆ ಬ್ರಾಹ್ಮಣನನ್ನು ಸಂತೈಸಿ, "ಸ್ವಾಮೀ, ಹೆದರಬೇಡಿ. ನಾನು ನಿಮ್ಮ ಗೋಧನವನ್ನು ಹುಡುಕಿ ತಂದುಕೊಡುವೆನು," ಎಂಬದಾಗಿ ಹೇಳಿ ಕಳುಹಿಸಿದನು. ತರುವಾಯ ಕಳ್ಳರನ್ನಟ್ಟಿ ಹೋಗಲು ಧನುರ್ಬಾಣಗಳನ್ನು ತೆಗೆದುಕೊಳ್ಳಬೇಕೆಂದು ಪಾರ್ಥನು ಆಯುಧಗಳ ಮನೆಗೆ ಬರುವಷ್ಟರಲ್ಲಿ, ಆ ಸ್ಥಳದಲ್ಲಿ ಧರ್ಮರಾಜನೂ ದ್ರೌಪದಿಯೂ ಅಂತರಂಗವಾಗಿ ಮಾತನಾಡುತ್ತ ಕುಳಿತಿರುವರೆಂದು ತಿಳಿದುಬಂತು. ಇದನ್ನು ಕೇಳಿದ ಅರ್ಜುನನಿಗೆ ಉಭಯ ಸಂಕಟವುಂಟಾಯಿತು. "ಆಯುಧಗಳಿಗಾಗಿ ಮನೆಯೊಳಕ್ಕೆ ಹೋದರೆ, ಅಂತರಂಗದಲ್ಲಿ ದಂಪತಿಗಳಿರುವ ಸ್ಥಳಕ್ಕೆ ಪ್ರವೇಶಿಸಿ ನಮ್ಮ ನಿಬಂಧನೆಗೆ ನಾನೇ ವಿರೋಧವಾಗಿ ನಡೆದಂತಾಗುವುದು. ಹೋಗದೆ ಸುಮ್ಮನಿರೋಣವೆಂದರೆ, ಪಾಪ! ಬ್ರಾಹ್ಮಣನಿಗೆ ವಾಗ್ದಾನಮಾಡಿರುವ ನಾನು ಆತನ ಆರ್ತಿಯನ್ನು ಪರಿಹರಿಸದೆ, ಅರಸನಾದ ಧರ್ಮರಾಜನಿಗೂ, ವಾಗ್ದಾನ ಮಾಡಿದ ನನಗೂ ಅಪಕೀರ್ತಿ ತಂದುಕೊಳ್ಳಬೇಕಾಗುವುದು! ಇದಕ್ಕೇನು ಮಾಡಲಿ?"

ಎಂಬದಾಗಿ ಸ್ವಲ್ಪಹೊತ್ತು ಆಲೋಚಿಸಿ, "ಹೇಗಾದರೂ ಈಗ ಆ ವಿಪ್ರೋತ್ತಮನ ಆರ್ತಿಯನ್ನು ಪರಿಹರಿಸಬೇಕಾದುದೇ ಕರ್ತವ್ಯವು. ನಾನೀಗ ರಾಜನ ಕೀರ್ತಿಯನ್ನೂ ಪ್ರಜೆಯ ಹಿತವನ್ನೂ ಬಯಸಿ ನಿಸ್ವಾರ್ಥತೆಯಿಂದ ನಮ್ಮ ನಿಬಂಧನೆಗೆ ವಿರೋಧವಾಗಿ ನಡೆದರೆ, ಒಂದು ವರ್ಷಕಾಲ ತೀರ್ಥಯಾತ್ರೆ ಮಾಡಬೇಕಾಗುವುದು. ಆದರೂ ಚಿಂತೆಯಿಲ್ಲ. ನನ್ನ ಕರ್ತವ್ಯವನ್ನು ನಡೆಯಿಸುವೆನು," ಎಂಬದಾಗಿ ನಿಶ್ಚಯಿಸಿ ಆಯುಧಗಳಿದ್ದ ಮನೆಯೊಳಕ್ಕೆ ಹೋಗಿ ತನ್ನ ಧನುರ್ಬಾಣಗಳನ್ನು ತಂದು, ವೇಗವಾದ ಕುದುರೆಗಳನ್ನು ಕಟ್ಟಿದ ರಥವನ್ನು ಹತ್ತಿ, ಕಳ್ಳರು ಹೋದ ಮಾರ್ಗದಲ್ಲಿ ವಾಯುವೇಗದಿಂದ ಹೊಗುತ್ತ ಬಾಣಗಳನ್ನು ಪ್ರಯೋಗಿಸಲು ಕಳ್ಳರು ಸ್ವಲ್ಪಹೊತ್ತಿನಲ್ಲಿಯೇ ಕೈಗೆ ಸಿಕ್ಕಿದರು. ಆಗ ಅವರನ್ನು ಶಿಕ್ಷಿಸಿ, ಅವರು ತೆಗೆದುಕೊಂಡು ಹೋಗುತ್ತಿದ್ದ ಬ್ರಾಹ್ಮಣನ ಹಸುವನ್ನು ಹಿಂದಕ್ಕೆ ತಂದು ಆತನಿಗೆ ಕೊಟ್ಟು ನಮಸ್ಕರಿಸಿ, ಸಂತುಷ್ಟನಾದ ಆತನ ಆಶೀರ್ವಾದಗಳನ್ನು ಪಡೆದು ಸರ್ವರಿಂದಲೂ ಅಭಿನಂದಿತನಾದನು. ತರುವಾಯ ಅರ್ಜುನನು ಧರ್ಮರಾಜನ ಬಳಿಗೆ ಬಂದು, "ಅಣ್ಣಾ, ನಮ್ಮ ನಿಬಂಧನೆಯನ್ನು ಉಲ್ಲಂಘಿಸಿದ ನಾನು ಕಟ್ಟಲೆಯಂತೆ ಒಂದು ವರ್ಷಕಾಲ ತೀರ್ಥಯಾತ್ರೆಗೆ ಹೊರಡಲು ಅಪ್ಪಣೆಕೊಡಬೇಕು," ಎಂದನು. ಈ ಮಾತನ್ನು ಕೇಳಿ ಧರ್ಮರಾಜನ ಮನಸ್ಸಿಗೆ ಬಹಳ ವ್ಯಸನವಾಯಿತು. ಆಗ ಆತನು ಪಾರ್ಥನನ್ನು ನೋಡಿ, "ಪ್ರಿಯ ಫಲ್ಗುಣಾ, ನೀನು ಕರ್ತವ್ಯನಿಷ್ಠೆಯಿಂದ ಮಾತ್ರವೇ ಆಯುಧಶಾಲೆಯೊಳಗೆ ಪ್ರವೇಶಿಸಿದೆ ಯಲ್ಲದೆ, ಮತ್ತೆ ಯಾವ ಕಾರಣದಿಂದಲೂ ಅಲ್ಲವೆಂಬುದನ್ನು ನಾನು ಬಲ್ಲೆನು. ಆ ವಿಷಯದಲ್ಲಿ ನನಗೆ ಲೇಶವಾದರೂ ಅಸಮಾಧಾನವಿಲ್ಲ. ಒಂದು ವೇಳೆ ಹಿರಿಯುವನು, ತನ್ನ ತಮ್ಮನು ಪತ್ನಿಯೊಡನೆ ಇರುವಾಗ ಅಲ್ಲಿಗೆ ಪ್ರವೇಶಮಾಡಿದ್ದಲ್ಲಿ ಅದು ದೋಷವಾಗುತ್ತಿದ್ದಿತೇ ಹೊರತು, ಚಿಕ್ಕವನಾದ ನೀನು, ನಾನೂ ಪಾಂಚಾಲಿಯೂ ಇದ್ದಕಡೆಗೆ ಪ್ರವೇಶಿಸಿದುದರಿಂದ ಯಾವ ದೋಷವೂ ಇಲ್ಲ. ಈಗ ನೀನು ಅಪರಾಧಿಯಲ್ಲ. ಈ ಕಾರ್ಯದಿಂದ ನಿನ್ನ ಗುಣಕೀರ್ತಿಗಳಿಗೆ ಯಾವ ಕಳಂಕವೂ ಇಲ್ಲ. ನೀನು ಇದರಿಂದ ನನಗೆ ಯಾವ ಅಗೌರವವನ್ನೂ ತೋರಿಸಿದಂತಾಗಲಿಲ್ಲ. ಆದುದರಿಂದ ಈಗ ನೀನು ತೀರ್ಥಯಾತ್ರೆಗಾಗಿ ಹೊರಡ

ಬೇಕಾಗಿಲ್ಲ," ಎಂದನು. ಅದಕ್ಕೆ ಅರ್ಜುನನು, "ಅಣ್ಣಾ, ಧರ್ಮಾ ಧರ್ಮಗಳ ಮರ್ಮಗಳನ್ನರಿತ ನಿನಗೆ ಪ್ರತಿಯಾಗಿ ಹೇಳುವ ಶಕ್ತಿಯು ನನಗಿಲ್ಲ. ಆದರೂ, ನಿನ್ನಂತೆ ಧರ್ಮತತ್ವಗಳನ್ನರಿತು ಮಾತನಾಡ ತಕ್ಕವರು ಲೋಕದಲ್ಲಿ ವಿರಳ. ಅರಸರಾಗಿ ಸರ್ವರಿಗೂ ಮಾರ್ಗ ದರ್ಶಿಗಳಾದ ನಾವುಗಳು, ನಿಬಂಧನೆಗೆ ಮೀರಿ ನಡೆದರೆಂಬ ಅಪವಾದ ವನ್ನು ಸಾಮಾನ್ಯ ಜನರಿಂದ ಪಡೆದು, ಪ್ರಜೆಗಳೂ ಮಾರ್ಗತಪ್ಪಿ ನಡೆ ಯಲು ಅವಕಾಶ ಕೊಡಬಾರದಲ್ಲವೇ? ಆದರಿಂದ, ನಮಗೆ ಲೋಕಾಪ ವಾದವು ಬಾರದಂತೆಯೂ, ನಮ್ಮ ದೇಶದ ಪ್ರಜೆಗಳು ಮಾರ್ಗತಪ್ಪಿ ನಡೆಯದಂತೆಯೂ, ಈಗ ನಾನು ತೀರ್ಥಯಾತ್ರೆಯನ್ನು ಮಾಡಿ ಬರಬೇಕೆಂದು ಸಂಕಲ್ಪಿಸಿರುವೆನು. ಅದರಿಂದ ದೋಷವೇನು? ದಯೆಯಿಟ್ಟು ನನಗಪ್ಪಣೆಯನ್ನು ಕೊಡು," ಎಂಬದಾಗಿ ವಿನಯದಿಂದ ಕೇಳಿಕೊಂಡನು. ಆಗ ಧರ್ಮರಾಜನು ಒಪ್ಪಿ, ಸಮ್ಮತಿಸಲು, ಅರ್ಜು ನನು ವೇದ ವೇದಾಂಗ ಕೋವಿದರಾದ ಪುರೋಹಿತ ಬ್ರಾಹ್ಮಣಾದಿ ಗಳೊಡಗೂಡಿ ತೀರ್ಥಯಾತ್ರೆಗೆ ಹೊರಟನು.

ಅನಂತರ, ಪಾರ್ಥನು ತನ್ನ ಹಿಂದೆಬಂದಿದ್ದ ಅನೇಕ ಮಂದಿ ಯೋಗಿ ಪೌರಾಣಿಕ ಕಥಕ ಗಾಯಕಾದಿಗಳೊಡಗೂಡಿ, ಅವರಿಂದ ಅನೇಕ ಇತಿಹಾಸ ತತ್ವಾದಿಗಳನ್ನು ಕೇಳುತ್ತ, ಅನೇಕ ನಗ ನದೀ ಸರೋವರ ಕಾಂತಾರ ಪುಣ್ಯಕ್ಷೇತ್ರಾದಿಗಳನ್ನು ಸಂಚರಿಸಿ ಗಂಗಾ ತೀರಕ್ಕೆ ಬಂದನು. ಅಲ್ಲಿ ನಿತ್ಯವೂ ಗಂಗಾಸ್ನಾನಮಾಡಿ, ಅನೇಕ ಹೋಮಕರ್ಮಗಳನ್ನು ಮಾಡಿಕೊಂಡು ಕೆಲವು ದಿನಗಳು ಭೂಸುರೋ ತ್ತಮರೊಡನೆ ವಾಸವಾಗಿದ್ದನು. ಅನಂತರ ಒಂದಾನೊಂದು ದಿನ ಪ್ರಾತಃಕಾಲದಲ್ಲಿ ವಿಧಿಪ್ರಕಾರದಿಂದ ಸ್ನಾನಾಹ್ನಿಕಗಳನ್ನು ಮಾಡಿ, ದೇವರ್ಷಿ ಪಿತೃತರ್ಪಣಗಳನ್ನು ನೆರವೇರಿಸಿ, ಎಂದಿನಂತೆ ಹೋಮಕರ್ಮ ವನ್ನು ಮಾಡಲು ನದಿಯಿಂದ ಹೊರಕ್ಕೆ ಬರುವಷ್ಟರಲ್ಲಿ, ನಾಗರಾಜನ ಪುತ್ರಿಯಾದ ಉಲೂಪಿಯೆಂಬ ಸುಂದರ ತರುಣಿಯು ಪಾರ್ಥನನ್ನು ನೋಡಿ ಮೋಹಪರವಶಳಾಗಿ, ಬಂದು ಅವನನ್ನು ನೀರಿನೊಳಕ್ಕೆ ಎಳೆದು ಕೊಂಡು ನಾಗಲೋಕಕ್ಕೆ ಹೊರಟುಹೋಗಿ ದಿವ್ಯವಾದ ಅರಮನೆಯಲ್ಲಿ ನಿಲ್ಲಿಸಿದಳು. ಅಲ್ಲಿ ಹೋಮಾಗ್ನಿಯು ಪ್ರಜ್ವಲಿಸುತ್ತಿದ್ದುದನ್ನು ಅರ್ಜುನನು

ನೋಡಿ ಬಹಳ ಸಂತೋಷಪಟ್ಟು, ಆದರಲ್ಲಿ ಎಂದಿನಂತೆ ತನ್ನ ಹೋಮಕರ್ಮವನ್ನಾಚರಿಸಿ, ಆ ಕನ್ಯೆಯನ್ನು ನೋಡಿ, ಮುಗುಳ್ನಗೆಯಿಂದ, "ಎಲೌ ಸುಂದರೀ, ನೀನು ಎಂತಹ ಅದ್ಭುತ ಕಾರ್ಯವನ್ನು ಮಾಡಿದೆ! ನಿನ್ನ ಹೆಸರೇನು? ನೀನು ಯಾರ ಮಗಳು? ಈ ಹರ್ಮ್ಯವು ಯಾವುದು?" ಎಂಬದಾಗಿ ಪ್ರಶ್ನೆಮಾಡಲು, ಆ ಕೋಮಲಾಂಗಿ ಅವನನ್ನು ನೋಡಿ, "ನಾನು ಐರಾವತ ಕುಲಸಂಭವನಾದ ಕೌರವ್ಯನೆಂಬ ನಾಗರಾಜನ ಪುತ್ರಿಯು. ನನ್ನ ಹೆಸರು ಉಲೂಪಿ. ನಿನ್ನ ಗುಣಪರಾಕ್ರಮಗಳನ್ನು ಕೇಳಿ ನಿನ್ನ ದರ್ಶನ ಮಾಡಬೇಕೆಂಬ ಕುತೂಹಲದಿಂದಿದ್ದ ನನಗೆ ಗಂಗಾನದಿಯಲ್ಲಿ ನಿನ್ನನ್ನು ನೋಡಿ ಅತ್ಯಾನಂದವಾಯಿತು. ನಿನ್ನಲ್ಲಿ ಮೋಹಿತಳಾಗಿ ಮದನ ಬಾಣಹತಳಾಗಿರುವ ನನ್ನನ್ನು ನೀನು ವರಿಸಿ ಪಾಲಿಸಬೇಕು," ಎಂಬದಾಗಿ ಪ್ರಾರ್ಥಿಸಿಕೊಂಡಳು. ಆದಕ್ಕೆ ಅರ್ಜುನನು, "ಎಲೌ ತರುಣೀ, ನಾನು ಅಣ್ಣನಾಜ್ಞೆಯಂತೆ ಹನ್ನೆರಡು ತಿಂಗಳು ಬ್ರಹ್ಮಚರ್ಯದಿಂದ ತೀರ್ಥಯಾತ್ರೆ ಮಾಡಲು ಭೂಸುರೋತ್ತಮರೊಡನೆ ಹೊರಟು ಬಂದಿರುವೆನು. ಹೀಗಿರುವಲ್ಲಿ ನಿನ್ನ ಇಷ್ಟವನ್ನು ನೆರವೇರಿಸಲು ಹೇಗೆ ಸಾಧ್ಯವಾದೀತು?" ಎಂದನು. ಅದಕ್ಕವಳು, "ಪಾಂಡುಕುಮಾರಾ, ನೀನು ಏತಕ್ಕಾಗಿ ಬ್ರಹ್ಮಚರ್ಯದಿಂದ ತೀರ್ಥಾಟನೆಮಾಡಲು ಬಂದಿರುವೆಯೆಂಬುದನ್ನು ನಾನು ಬಲ್ಲೆನು. ದ್ರೌಪದಿಯ ವಿಷಯದಲ್ಲಿ ಸೋದರರಾದ ನೀವುಗಳೈವರೂ ಮಾಡಿಕೊಂಡಿದ್ದ ನಿಬಂಧನೆಯಂತೆ ನೀನು ಅಣ್ಣನಪ್ಪಣೆಯನ್ನು ಪಡೆದು ಬಂದಿರುವೆಯೆಂಬುದು ನನಗೆ ಗೋಚರವಾಗಿದೆ. ನೀನು ಮಾಡುವ ಸರ್ವತೀರ್ಥಗಳ ಸೇವನೆಯೂ, ಸರ್ವವ್ರತಗಳ ಆಚರಣೆಯೂ, ಸರ್ವದಾನಧರ್ಮ ಕ್ರಿಯೆಗಳೂ, ಪ್ರಾಣದಾನಕ್ಕೆ ಸಮಾನವಾಗಲಾರವು. ನನ್ನ ಮನೋರಥವು ವಿಫಲವಾಗುವ ಪಕ್ಷದಲ್ಲಿ ನಾನು ಮನೋಜಾಗ್ನಿಯಿಂದ ಪ್ರಾಣವನ್ನು ನೀಗುವೆನಾದಕಾರಣ, ನೀನು ನನ್ನನ್ನೀಗ ರಕ್ಷಿಸಲೇಬೇಕು. ಇದರಿಂದ ನಿನಗೆ ವ್ರತಭಂಗವಾಗಲಾರದು. ನೀನಾಗಿ ಯಾವ ಅಕಾರ್ಯವನ್ನೂ ಮಾಡುತ್ತಿಲ್ಲವಾಗಿ ನಿನಗೆ ಯಾವ ದೋಷವೂ ಇಲ್ಲ. ಆದಕಾರಣ ನೀನು ನನ್ನನ್ನು ಕಾಪಾಡಬೇಕು," ಎಂಬದಾಗಿ, ಬಹಳವಾಗಿ ಪ್ರಾರ್ಥಿಸಿಕೊಂಡಳು. ಆಗ ಅರ್ಜುನನು ಒಪ್ಪಿ, ಆ ರಾತ್ರಿ

ಆ ನಾಗಭವನದಲ್ಲಿದ್ದು ಉಲೂಪಿಯನ್ನು ಸಂತೋಷಪಡಿಸಿ ಅವಳಲ್ಲಿ ಇರಾವತನೆಂಬ ಪುತ್ರನನ್ನು ಪಡೆದು, ಸೂರ್ಯೋದಯದ ಸಮಯಕ್ಕೆ ಉಲೂಪಿಯೊಡಗೂಡಿ ಗಂಗಾದ್ವಾರಕ್ಕೆ ಬಂದನು. ಆಗ ಉಲೂಪಿಯು, 'ಪಾರ್ಥನಿಗೆ ಯಾವ ಜಲ ಜಂತುವಿನಿಂದಲೂ ಅಪಾಯವಾಗದಿರಲಿ' ಎಂದು ವರವನ್ನು ಕೊಟ್ಟು ನಾಗಲೋಕಕ್ಕೆ ಹಿಂದಿರುಗಿದಳು. ಪಾರ್ಥನು, ನಡೆದ ವೃತ್ತಾಂತವನ್ನು, ತನ್ನ ಅನುಯಾಯಿಗಳಾದ ಬ್ರಾಹ್ಮಣೋತ್ತಮರಿಗೆ ತಿಳಿಸಿ ಅವರನ್ನು ಸಂತೋಷಪಡಿಸಿದನು.

ಅನಂತರ ಅಲ್ಲಿಂದ ಹೊರಟು ಹಿಮವತ್ಪರ್ವತ ಪ್ರಾಂತದಲ್ಲಿದ್ದ ಅಗಸ್ತ್ಯವಟ, ಭೃಗುತುಂಗ ಕ್ಷೇತ್ರಗಳನ್ನು ನೋಡಿಕೊಂಡು ಹಿರಣ್ಯಬಿಂದು ತೀರ್ಥಕ್ಕೆ ಬಂದು ಅದರಲ್ಲಿ ಸ್ನಾನಮಾಡಿ, ಬ್ರಾಹ್ಮಣರಿಗೆ ಗೋದಾನ ಭೂದಾನ ಹಿರಣ್ಯದಾನಾದಿಗಳನ್ನು ಯಥೇಷ್ಟವಾಗಿ ಮಾಡಿ, ಅಲ್ಲಿಂದ ಪೂರ್ವಾಭಿಮುಖವಾಗಿ ಹೊರಟು ನೈಮಿಷಾರಣ್ಯಕ್ಕೆ ಬಂದನು. ಅಲ್ಲಿ ಜಗನ್ನಾಥ ನಾರಾಯಣನನ್ನಾರಾಧಿಸಿ, ಉತ್ಪಲಿನಿ, ನಂದ, ಉಪನಂದ, ಗಯಾ, ಗಂಗಾ ಮೊದಲಾದ ಅನೇಕ ತೀರ್ಥಗಳನ್ನು ಸಂಚರಿಸಿ, ಅಲ್ಲಲ್ಲಿ ಅನೇಕ ಕರ್ಮಗಳನ್ನು ನೆರವೇರಿಸಿ ದಾನಧರ್ಮಗಳನ್ನು ಮಾಡಿ ಕಳಿಂಗರಾಜ್ಯಕ್ಕೆ ಬಂದನು. ಅಲ್ಲಿ ಪಾರ್ಥನ ಹಿಂದೆ ಬಂದಿದ್ದ ಬ್ರಾಹ್ಮಣರು, ಮುಂದಕ್ಕೆ ಹೋಗಲಿಷ್ಟಪಡದೆ ಉತ್ತರಾಭಿಮುಖವಾಗಿ ತಮ್ಮ ದೇಶಕ್ಕೆ ಹಿಂದಿರುಗಲು, ಅರ್ಜುನನು ಕೆಲವರು ಬ್ರಾಹ್ಮಣರ ಸಹಿತವಾಗಿ ಮಾತ್ರವೇ ಪೂರ್ವ ಸಮುದ್ರತೀರಕ್ಕೆ ಬಂದು, ಪುರುಷೋತ್ತಮ ದೇವನನ್ನಾರಾಧಿಸಿ, ಮಹೇಂದ್ರಪರ್ವತದ ಮಾರ್ಗವಾಗಿ ಮಣಿಪುರಕ್ಕೆ ಬಂದನು.

ಆ ಮಣಿಪುರಕ್ಕೆ ಅರಸನಾದ ಚಿತ್ರವಾಹನನಿಗೆ **ಚಿತ್ರಾಂಗದೆ** ಯೆಂಬ ಪರಮಸೌಂದರ್ಯವತಿಯಾದ ಪುತ್ರಿಯಿದ್ದಳು. ಪಾರ್ಥನು ರಾಜನಬಳಿಗೆ ಬಂದು ಆತನಿಂದ ಸತ್ಕೃತನಾಗಿ, ಆತನ ಪುತ್ರಿಯನ್ನು ಮದುವೆಯಾಗಲು ಮನಸ್ಸಿನಲ್ಲಿ ಬಯಸಿದನು. ಈ ಅಭಿಪ್ರಾಯವು ಚಿತ್ರವಾಹನನಿಗೆ ತಿಳಿಯಲು, ಆತನು ಬಹಳ ಸಂತೋಷಪಟ್ಟು, ಅರ್ಜುನನ ಬಳಿಗೆಬಂದು ವಿನಯದಿಂದ, "ಪ್ರಾರ್ಥಮಹಾರಾಜಾ, ನಿನ್ನ ಅಪೇಕ್ಷೆಯು ತಿಳಿದು ನನಗತ್ಯಾನಂದವಾಯಿತು. ನಮ್ಮ

ವಂಶದಲ್ಲಿ ಹಿಂದೆ **ಪ್ರಭಂಜನನೆಂಬ** ರಾಜನೊಬ್ಬನಿದ್ದನು. ಆತನಿಗೆ ಸಂತಾನವಿರಲಿಲ್ಲ. ಆದಕಾರಣ ಆತನು ಪರಮೇಶ್ವರನನ್ನು ಕುರಿತು ಮಹಾತಪಸ್ಸನ್ನಾಚರಿಸಿದನು. ಅದರಿಂದ ಸಂತುಷ್ಟನಾದ ಶಂಕರನು ಪ್ರಸನ್ನನಾಗಿ ಆತನನ್ನು ಕುರಿತು, 'ರಾಜೇಂದ್ರಾ! ನಿನ್ನ ವಂಶಾನುಕ್ರಮವಾಗಿ ಒಬ್ಬೊಬ್ಬರಿಗೂ ಒಂದೊಂದು ಮಗುವಾಗುವುದು,' ಎಂಬದಾಗಿ ವರವನ್ನನುಗ್ರಹಿಸಿ ಆಶೀರ್ವದಿಸಿ ಅಂತರ್ಧಾನವಾದನು. ಅದರಂತೆ ಆ ಪ್ರಭಂಜನ ರಾಜನು ಮೊದಲಾಗಿ ಈ ವಂಶದಲ್ಲಿ ಪ್ರತಿಯೊಬ್ಬ ರಾಜನಿಗೂ ಒಂದೊಂದೇ ಮಗುವು ಹುಟ್ಟುತ್ತಬಂದು ಈಗ ನನಗೆ ಈ ಪುತ್ರಿಯೊಬ್ಬಳು ಮಾತ್ರವೇ ಉದಿಸಿದ್ದಾಳೆ. ಇವಳನ್ನು ನಾನು ಪುತ್ರನಂತೆಯೇ ಭಾವಿಸಿ ಕಾಪಾಡಿಕೊಂಡಿದ್ದೇನೆ. ಅವಳ ಗರ್ಭದಲ್ಲಿ ಜನಿಸುವ ಕುಮಾರನೇ ಮುಂದೆ ಈ ರಾಜ್ಯಕ್ಕೆ ಅರಸನಾಗಬೇಕು. ಈ ನಿಬಂಧನೆಗೆ ಒಪ್ಪುವುದಾದರೆ, ನನ್ನ ಪುತ್ರಿಯಾದ ಚಿತ್ರಾಂಗದೆಯನ್ನು ನೀನು ವಿವಾಹವಾಗಬಹುದು," ಎಂಬದಾಗಿ ಹೇಳಿದನು. ಇದನ್ನು ಕೇಳಿದ ಪಾರ್ಥನಿಗೆ ಬಹಳ ಸಂತೋಷವಾಯಿತು. ಅದರಂತೆ ಅವನು ಒಪ್ಪಲು, ಪ್ರಭಂಜನ ರಾಜನು ಚಿತ್ರಾಂಗದೆಯನ್ನು ಅರ್ಜುನನಿಗೆ ಕೊಟ್ಟು ಸಂತೋಷದಿಂದ ವಿವಾಹಮಾಡಿದನು. ತರುವಾಯ, ಪಾರ್ಥನು ಅಲ್ಲಿ ಕೆಲವು ಕಾಲ ಚಿತ್ರಾಂಗದೆಯ ಲೀಲಾ ವಿಲಾಸ ವಿನೋದಗಳಲ್ಲಿದ್ದು ಅವಳಲ್ಲಿ **ಬಭ್ರುವಾಹನನೆಂಬ** ಪುತ್ರನನ್ನು ಪಡೆದನು.

ತರುವಾಯ ಅಲ್ಲಿಂದ ಹೊರಟು ಬ್ರಾಹ್ಮಣರೊಡನೆ ದಕ್ಷಿಣ ಸಮುದ್ರತೀರದಲ್ಲಿದ್ದ, ಮುನಿಸೇವಿತಗಳಾದ ಅನೇಕ ತೀರ್ಥಗಳನ್ನು ನೋಡಿಕೊಂಡು, ಮುಂದೆ ಬರುತ್ತ ಸೌಭದ್ರವೆಂಬ ತೀರ್ಥವನ್ನು ಕಂಡು ಅದರಲ್ಲಿ ತಾನು ಸ್ನಾನಮಾಡಬೇಕೆಂದು ಪ್ರಯತ್ನಿಸುತ್ತಿರುವಲ್ಲಿ, ಆ ಸಮೀಪದಲ್ಲಿದ್ದ ಮುನಿಗಳು ಅವನನ್ನು ನೋಡಿ, "ಎಲೈ ಚಂದ್ರವಂಶ ತಿಲಕನೇ, ಈ ದಕ್ಷಿಣ ಸಮುದ್ರತೀರದಲ್ಲಿ **ಸೌಭದ್ರ, ಪೌಲೋಮ, ಕಾರಂಧಮ** ಮತ್ತು **ಪ್ರಸನ್ನಭಾರದ್ವಾಜ** ಎಂಬ ಐದು ಪವಿತ್ರ ತೀರ್ಥಗಳಿರುವುವು. ಇವುಗಳಲ್ಲಿ ಸ್ನಾನಮಾಡಿದರೆ ಅಶ್ವಮೇಧ ಯಾಗ ಮಾಡಿದಷ್ಟು ಪುಣ್ಯವು ಬರುವುದೆಂದು ಹೇಳುವರು. ಆದರೆ, ಈಗ ನೂರು ಸಂವತ್ಸರಗಳಿಂದಲೂ, ಇವುಗಳಲ್ಲಿ ಪ್ರಬಲವಾದ ಮೊಸಳೆಗಳು ಸೇರಿಕೊಂಡು, ಇದರಲ್ಲಿ ಇಳಿದವ

ಕನ್ನು ಹಿಡಿದು ಕೊಲ್ಲುವುವಾದುದರಿಂದ ಯಾರೊಬ್ಬರೂ ಈ ತೀರ್ಥಗಳನ್ನು ಮುಟ್ಟುವುದಿಲ್ಲ. ಆದುದರಿಂದ ನೀನು ಈ ಸೌಭದ್ರ ತೀರ್ಥದಲ್ಲಿ ಸ್ನಾನಮಾಡಲು ಪ್ರಯತ್ನಿಸಬೇಡ," ಎಂದು ಹೇಳಿದರು. ಇದನ್ನು ಕೇಳಿದ ಪಾರ್ಥನು, ತನ್ನಲ್ಲಿ ತಾನು, "ಪವಿತ್ರ ತೀರ್ಥಗಳ ಸ್ನಾನಮಾಡಬೇಕೆಂಬ ಉದ್ದೇಶದಿಂದಲೇ ಬಂದ ನಾನು, ಮೊಸಳೆಗಳಿಗೆ ಹೆದರಿ ಈ ಪುಣ್ಯತೀರ್ಥಗಳಲ್ಲಿ ಸ್ನಾನಮಾಡದೆ ಹೋಗಬಹುದೇ? ಛೆ! ಅದು ನನ್ನ ಪೌರುಷಕ್ಕೆ ತಕ್ಕುದಲ್ಲ. ಆದುದರಿಂದ ಇದರಲ್ಲಿ ನಾನು ಸ್ನಾನಮಾಡಲೇ ಬೇಕು," ಎಂದು ನಿಶ್ಚಯಿಸಿ, ಸ್ನಾನಮಾಡಲು ನೀರಿನೊಳಕ್ಕೆ ಇಳಿದನು. ಆ ಕೂಡಲೇ ಒಂದು ಭಯಂಕರವಾದ ಮೊಸಳೆಯು ಬಂದು ಅರ್ಜುನನ ಕಾಲನ್ನು ಬಲವಾಗಿ ಹಿಡಿದುಕೊಂಡಿತು. ಆಗ ಪ್ರಬಲ ಬಲಶಾಲಿಯಾದ ಪಾರ್ಥನು ಅದನ್ನು ಹಿಡಿದು ದರ ದರನೆ ದಡಕ್ಕೆ ಎಳೆದುಕೊಂಡುಬಂದನು. ದಡಕ್ಕೆ ಬಂದೊಡನೆಯೇ ಆ ಮೊಸಳೆಯು ದಿವ್ಯ ರತ್ನಾಭರಣ ಭೂಷಿತೆಯಾದ ಓಬ್ಬ ಅಪೂರ್ವ ಸುಂದರ ತರುಣಿಯಾಗಿ ನಿಂತಿತು. ಇದನ್ನು ನೋಡಿ, ಪಾರ್ಥನು ಪರಮಾಶ್ಚರ್ಯಪಟ್ಟು, ಆ ಸುಂದರಿಯನ್ನು ಕುರಿತು, "ಎಲೌ ಸುಂದರಾಗೀ, ನೀನು ಯಾರು? ಹೀಗೆ ಮೊಸಳೆಯಾಗಿ ಪಾಪಕೃತ್ಯವನ್ನು ಮಾಡಲು ಕಾರಣವೇನು? ಈಗ ನೀನು ಏತಕ್ಕಾಗಿ ಹೀಗೆ ಸುಂದರ ತರುಣಿಯಾಗಿ ಮಾರ್ಪಟ್ಟೆ? ಎಲ್ಲವನ್ನೂ ವಿವರವಾಗಿ ಹೇಳು," ಎಂಬದಾಗಿ ಪ್ರಶ್ನೆಮಾಡಿದನು. ಅದಕ್ಕೆ ಆ ಸುಂದರಿಯು, "ಎಲೈ, ಪ್ರಚಂಡ ಬಾಹುಬಲ ಮಂಡಿತನೇ, ಕೇಳು:— ನಾನು ಕುಬೇರನಿಗೆ ಅತ್ಯಂತ ಪ್ರಿಯಳಾದ ಅಪ್ಸರಸೆಯು, ನನ್ನ ಹೆಸರು, 'ವರ್ಗಾ' ಎಂದು. ಸೌರಭೇಯಿ, ಸಮೀಚಿ, ಬುದ್ಬುದಾ, ಲತಾ, ಎಂಬ ನಾಲ್ವರು ನನ್ನ ಸಖಿಯರು. ನಾವೆಲ್ಲರೂ ಒಂದು ದಿನ ಲೋಕಪಾಲಕರ ರಾಜಧಾನಿಗಳನ್ನು ನೋಡಿಕೊಂಡು ಭೂಲೋಕಕ್ಕೆ ಬಂದು, ಒಂದು ವನದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ಉಗ್ರತಪಸ್ಸನ್ನು ಮಾಡುತ್ತಿದ್ದ ಬಹು ಸುಂದರನಾದ ಒಬ್ಬ ಬ್ರಾಹ್ಮಣನನ್ನು ಕಂಡು ಆತನ ಬಳಿಗೆ ಹೋಗಿ, ಗಾನ ನರ್ತನಗಳನ್ನು ಮಾಡಿ ನಕ್ಕು ನಲಿದು, ಆತನ ಮನಸ್ಸನ್ನು ಚಪಲಗೊಳಿಸಬೇಕೆಂದು ಪ್ರಯತ್ನಿಸಿದೆವು. ಆದರೂ ಸ್ಥಿರಚಿತ್ತನಾಗಿದ್ದ ಆತನ ಮನಸ್ಸು ಸ್ವಲ್ಪವೂ

ವಿಕಾರವನ್ನು ಹೊಂದಲಿಲ್ಲ. ಕಡೆಗೆ ಆತನು ಕೋಪಗೊಂಡು, ನಮ್ಮನ್ನು ನೋಡಿ, 'ಛೀ! ನೀವುಗಳೆಲ್ಲರೂ ಮೊಸಳೆಗಳಾಗಿ, ಒಂದು ನೂರು ವರ್ಷಗಳ ಕಾಲ ನೀರಿನಲ್ಲಿ ವಾಸಮಾಡಿಕೊಂಡಿರಿ' ಎಂಬದಾಗಿ ನಮ್ಮನ್ನು ಶಪಿಸಿದನು. ಆಗ ನಾವುಗಳು ನಮ್ಮ ಅಪರಾಧಕ್ಕೆ ಪಶ್ಚಾತ್ತಾಪಪಟ್ಟು ಕ್ಷಮೆಯನ್ನು ಬೇಡಲು, ಆ ಬ್ರಾಹ್ಮಣನು, 'ಎಲೌ! ಉಚ್ಚರಿಸಿದ ಶಾಪವು ವ್ಯರ್ಥವಾಗಲಾರದು. ಆದರೆ ನಾನು ಹೇಳಿದಂತೆ ಒಂದು ನೂರು ವರ್ಷಗಳಾದ ಒಡನೆಯೇ ಒಬ್ಬ ಮಹಾವೀರನಾದ ಪುರುಷನು ನಿಮ್ಮೆಲ್ಲರನ್ನೂ ನೀರಿನಿಂದ ಹೊರಕ್ಕೆ ಎಳೆಯುವನು. ಆಗ ನೀವುಗಳು ನಿಮ್ಮ ಮೊದಲಿನ ಅಪ್ಸರಸೆಯರ ರೂಪವನ್ನು ಪಡೆಯುವಿರಿ. ಅಂದು ಮೊದಲಾಗಿ, ನೀವಿದ್ದ ತೀರ್ಥಗಳೆಲ್ಲವೂ ನಾರೀತೀರ್ಥಗಳೆಂಬದಾಗಿ ಲೋಕದಲ್ಲಿ ಪ್ರಖ್ಯಾತವಾಗಿ ಪುಣ್ಯ ತೀರ್ಥಗಳೆನಿಸುವುವು,' ಎಂಬದಾಗಿ ಹೇಳಿದನು. ಆಗ ಆ ಬ್ರಾಹ್ಮಣನಿಗೆ ನಮಸ್ಕರಿಸಿ, ನಾವುಗಳು ಹೊರಟು, ಎಲ್ಲಿರಬೇಕು? ಯಾವಾಗ ನಮಗೆ ಶಾಪವಿಮೋಚಕನಾದ ಆ ಪುಣ್ಯಪುರುಷನ ದರ್ಶನವಾಗುವುದು?—ಎಂಬದಾಗಿ ಆಲೋಚಿಸುತ್ತ ಬರುತ್ತಿರುವಲ್ಲಿ ದೇವರ್ಷಿಯಾದ ನಾರದರು ಸಂಧಿಸಿ, ನಮ್ಮ ವೃತ್ತಾಂತವನ್ನು ತಿಳಿದು, 'ಈ ದಕ್ಷಿಣಸಮುದ್ರತೀರದಲ್ಲಿ ಐದು ಪವಿತ್ರತೀರ್ಥಗಳಿವೆ. ನೀವು ಐದು ಮಂದಿಯೂ ಒಬ್ಬೊಬ್ಬರು ಒಂದೊಂದರಲ್ಲಿ ವಾಸವಾಗಿರಿ. ಮುಂದೆ ನಿರ್ಮಲಾತ್ಮನಾದ ಅರ್ಜುನನೆಂಬ ಪಾಂಡವನು ಬಂದು ನಿಮ್ಮ ದುಃಖವನ್ನು ಪರಿಹರಿಸುವನು. ನೀವುಗಳು ಕೂಡಲೆ ಆ ತೀರ್ಥಗಳಿಗೆ ಹೋಗಿ ವಾಸಿಸಿರಿ,' ಎಂಬದಾಗಿ ಹೇಳಿದರು. ಅದರಂತೆ ಆಗಿನಿಂದಲೂ ನಾವುಗಳು ಮೊಸಳೆಗಳ ರೂಪದಿಂದ ಆ ತೀರ್ಥಗಳಲ್ಲಿ ವಾಸಿಸಿದೆವು. ಈಗಲೂ ನನ್ನ ನಾಲ್ಕು ಮಂದಿ ಸಖಿಯರೂ ಆ ನಾಲ್ಕು ತೀರ್ಥಗಳಲ್ಲಿ ಮೊಸಳೆಗಳಾಗಿದ್ದಾರೆ. ನೀನು ಅವರೆಲ್ಲರಿಗೂ ಶಾಪವಿಮೋಚನೆ ಮಾಡಬೇಕು," ಎಂಬದಾಗಿ ಪ್ರಾರ್ಥಿಸಿಕೊಂಡಳು. ಅದರಂತೆ ಅರ್ಜುನನು ಆ ನಾಲ್ಕು ತೀರ್ಥಗಳಿಗೂ ಹೋಗಿ ಸ್ನಾನಮಾಡಿ, ಅಲ್ಲಿ ತನ್ನನ್ನು ಹಿಡಿದ ನಾಲ್ಕು ಮೊಸಳೆಗಳನ್ನೂ ಹಿಡಿದು ದಡಕ್ಕೆಳೆದು ತಂದನು. ಆ ಕೂಡಲೇ ಆ ಮೊಸಳೆಗಳೂ ಪರಮಸೌಂದರ್ಯವತಿಯರಾದ ಅಪ್ಸರಸೆಯರಾಗಿ

ಮೂರ್ಪಟ್ಟವು. ಆಗ ತರುಣಿಯರೈವರೂ ಬಲು ಸಂತೋಷ ಪಟ್ಟು, ತಮಗೆ ಶಾಪ ವಿಮೋಚನ ಮಾಡಿ ಕಾಪಾಡಿದ ಪಾರ್ಥನಿಗೆ ಕೃತಜ್ಞತೆ ಯಿಂದ ನಮಸ್ಕರಿಸಿ, ಆತನಪ್ಪಣೆಯನ್ನು ಪಡೆದು ಅಲಕಾವತಿಗೆ ಪ್ರಯಾಣ ಮಾಡಿದರು. ತರುವಾಯ ಅರ್ಜುನನು ಪುನಃ ಮಣಿಪುರಕ್ಕೆ ಹೋಗಿ ಪುತ್ರನಾದ ಬಭ್ರುವಾಹನನನ್ನೂ ಪತ್ನಿಯಾದ ಚಿತ್ರಾಂಗದೆಯನ್ನೂ ನೋಡಿಕೊಂಡು ಅಲ್ಲಿಂದ ಗೋಕರ್ಣಕ್ಕೆ ಹೋದನು. ಅಲ್ಲಿಂದ ಹೊರಟು ಪಶ್ಚಿಮಸಮುದ್ರತೀರದ ಅನೇಕಕ್ಷೇತ್ರ ತೀರ್ಥಗಳನ್ನು ಸಂಚರಿಸಿ ಪ್ರಭಾಸವೆಂಬ ತೀರ್ಥಕ್ಕೆ ಬಂದನು. ತನ್ನ ಸೋದರ ಮಾವನ ಮಗಳಾದ ಸುಭದ್ರೆಯನ್ನು ಅವಳ ಅಣ್ಣನಾದ ಬಲರಾಮನು, ತನ್ನ ಶಿಷ್ಯನಾದ ದುರ್ಯೋಧನನಿಗೆ ಕೊಟ್ಟು ವಿವಾಹಮಾಡಲು ನಿಶ್ಚಯಿ ಸಿರುವನೆಂಬ ವಾರ್ತೆಯು ಅಲ್ಲಿ ಅರ್ಜುನನಿಗೆ ತಿಳಿದುಬಂತು. ಸುಭದ್ರೆ ಯನ್ನು ತಾನೇ ಮದುವೆಯಾಗಬೇಕೆಂದಿದ್ದ ಅರ್ಜುನನು, ತನ್ನ ಕಾರ್ಯ ಸಾಧನೆಗಾಗಿ ತ್ರಿದಂಡಿ ಸಂನ್ಯಾಸಿಯ ವೇಷವನ್ನು ಹಾಕಿಕೊಂಡು, ದ್ವಾರ ಕಾನಗರಕ್ಕೆ ಬಂದನು. ಅನಂತರ ಶ್ರೀಕೃಷ್ಣನನ್ನು ಗೋಪ್ಯವಾಗಿ ಕಂಡು ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿ, ಆತನ ಇಷ್ಟದಂತೆ, ರೈವತಾದ್ರಿಯಲ್ಲಿ ವಾಸವಾಗಿದ್ದನು. ಹೀಗಿರುವಲ್ಲಿ, ಆ ಪರ್ವತದಲ್ಲಿ ಬಲರಾಮನೇ ಮೊದಲಾದ ಯಾದವರು ಒಂದು ವಿಶೇಷವಾದ ಹಬ್ಬವನ್ನೇರ್ಪಡಿಸಿ, ಆ ವನವೆಲ್ಲವನ್ನೂ ಅಲಂಕಾರ ಮಾಡಿಸಿ, ಅಲ್ಲಿ ಗಾನ ನಾಟ್ಯ ನಾಟ ಕಾದಿಗಳನ್ನೇರ್ಪಡಿಸಿ, ಒಂದು ಮಹೋತ್ಸವವನ್ನು ನಡೆಯಿಸಿದರು. ಆ ಸಂದರ್ಭದಲ್ಲಿ ಬಲರಾಮನ ತಂಗಿಯಾದ ಸುಭದ್ರೆಯು ದಿವ್ಯ ವಸ್ತ್ರಾ- ಲಂಕಾರಭೂಷಿತೆಯಾಗಿ ಸಖಿಯರ ನಡುವೆ ಸಂತೋಷದಿಂದ ಓಡಿ ಯಾಡುತ್ತಿದ್ದುದು ಪಾರ್ಥನ ಕಣ್ಣಿಗೆ ಬಿತ್ತು. ಆ ಕೂಡಲೇ ಅರ್ಜುನನು ಅವಳ ಸೌಂದರ್ಯದಿಂದ ಮೋಹಿತನಾಗಿ ಅವಳನ್ನೇ ಯುವೆಯಿಕ್ಕದೆ ನೋಡುತ್ತಿದ್ದುದನ್ನು, ಬಳಿಯಲ್ಲಿದ್ದ ಶ್ರೀಕೃಷ್ಣನು ಕಂಡು ಅವನ ಭಾವ ವನ್ನರಿತು, ಬಳಿಗೆ ಬಂದು ಮುಗುಳ್ನಗೆಯಿಂದ, "ಪಾರ್ಥಾ! ನಿನ್ನ ಭಾವವು ನನಗರ್ಥವಾಯಿತು. ಅವಳೇ ನನ್ನ ತಂಗಿಯಾದ ಸುಭದ್ರೆಯು, ಅವಳಲ್ಲಿ ನಿನ್ನ ಮನಸ್ಸು - ಲೀನವಾಗಿರುವುದನ್ನು ಬಲ್ಲೆನು, ಇನ್ನು ನಮ್ಮ ತಂದೆಯಾದ ವಸುದೇವನೊಡನೆ ಈ ವಿಷಯ

ವಾಗಿ ಮಾತನಾಡಿ ನಿನ್ನ ಇಷ್ಟಾರ್ಥವನ್ನು ಸಲ್ಲಿಸುವೆನು," ಎಂದನು. ಅದಕ್ಕೆ ಅರ್ಜುನನು, "ಶ್ರೀಕೃಷ್ಣಾ, ಇಂತಹ ಸೌಂದರ್ಯವತಿಯನ್ನು ನೋಡಿದ ಮೇಲೆ ಯಾರ ಮನಸ್ಸುತಾನೇ ಮೋಹಗೊಳ್ಳದಿರುವುದು? ಈ ಕನ್ಯೆಯು ನನ್ನ ಪತ್ನಿಯಾಗುವುದಾದರೆ ನನಗೆ ಸಕಲ ಸೌಭಾಗ್ಯವೂ ಲಭಿಸಿದಂತೆಯೇ ಸರಿ! ಅದಕ್ಕಾಗಿ ನಾನು ಯಾವ ರೀತಿ ನಡೆದುಕೊಳ್ಳ ಬೇಕು? ದಯೆಯಿಟ್ಟು ನೀನೇ ಹೇಳು," ಎಂಬದಾಗಿ ಪ್ರಾರ್ಥಿಸಿ ಕೊಂಡನು. ಅದಕ್ಕೆ ಕೃಷ್ಣನು ಒಪ್ಪಿ, ಪಾರ್ಥನಿಗೆ ಅಭಯವನ್ನು ಕೊಟ್ಟು ಗೋಪ್ಯವಾಗಿ, ಈ ಎಲ್ಲ ವಿಚಾರಗಳನ್ನೂ ಇಂದ್ರಪ್ರಸ್ಥಪುರ ದಲ್ಲಿದ್ದ ಧರ್ಮರಾಜನಿಗೆ ತಿಳಿಸುವಂತೆ ಗೂಢಚಾರರನ್ನು ಕಳುಹಿಸಿದನು. ಈ ವಾರ್ತೆಯು ತಿಳಿದ ಕೂಡಲೇ ಯುಧಿಷ್ಠಿರನು ಬಹಳ ಸಂತೋಷ ಪಟ್ಟು ತನ್ನ ಒಪ್ಪಿಗೆಯನ್ನು ಹೇಳಿಕಳುಹಿಸಿದನು. ಅನಂತರ, ಶ್ರೀ ಕೃಷ್ಣನು, ರೈವತಾದ್ರಿಗೆ ಯಾರೋ ಮಹಾ ಮಹಿಮರಾದ ಪರಮ ಹಂಸರು ಬಂದಿರುವರೆಂತಲೂ, ಅವರ ಸಂದರ್ಶನ ಸೇವಾದಿಗಳು ಪರಮ ಪುಣ್ಯ ಪ್ರದಗಳೆಂತಲೂ ದ್ವಾರಕಾನಗರದಲ್ಲಿ ವರ್ತಮಾನವನ್ನು ಹರಡಿ ಸಿದನು. ಇದನ್ನು ಕೇಳಿದ ಕೂಡಲೇ ದೇವ ಬ್ರಾಹ್ಮಣ ಭಕ್ತನಾದ ಬಲರಾಮದೇವನು ಬಹಳ ಸಂತೋಷ ಪಟ್ಟು, ಪರಿವಾರ ಸಹಿತನಾಗಿ ಮಹಾವೈಭವದಿಂದ ರೈವತಾದ್ರಿಗೆ ಹೋಗಿ ಯತಿಗೆ ಪಾದಪೂಜಾ ಸೇವಾಸತ್ಕಾರಗಳನ್ನು ಮಾಡಿ, ಆತನಿಂದ ಸಕಲ ಕ್ಷೇತ್ರ ತೀರ್ಥಗಳ ವಿಚಾರವೆಲ್ಲವನ್ನೂ ತಿಳಿದು, ಸನ್ನಿಹಿತವಾಗಿದ್ದ ಚಾತುರ್ಮಾಸ್ಯ ವ್ರತ ವನ್ನು ದಯೆಯಿಟ್ಟು ತಮ್ಮ ಅರಮನೆಯಲ್ಲಿಯೇ ನಡೆಯಿಸಬೇಕೆಂದು ಯತಿಯನ್ನು ಪ್ರಾರ್ಥಿಸಿದನು. ಅದಕ್ಕೆ ಆ ಕಪಟ ಸಂನ್ಯಾಸಿಯು ಒಪ್ಪಿ ಆತನಿಷ್ಟದಂತೆ ಅರಮನೆಗೆ ಬಂದು ನಿಂತನು. ಯತಿಸೇವೆಯು ಬಲರಾಮದೇವನಾಜ್ಞೆಯಂತೆ ನಿತ್ಯವೂ ಬಹು ವಿಭವದಿಂದ ನಡೆಯು ತ್ತಿದ್ದಿತು. ಸುಭದ್ರೆಯೂ ಬಹಳ ಉತ್ಸಾಹ ಭರಿತಳಾಗಿ ಯತಿಸೇವಾ ಸಕ್ತಳಾಗಿದ್ದಳು. ಕಪಟಯತಿಗೆ ಮಾತ್ರ ಜಪತಪೋಧ್ಯಾನಗಳೆಲ್ಲವೂ ಸುಭದ್ರೆಯ ಚಿಂತೆಯೊಂದೇ ಆಗಿದ್ದವು. ಶ್ರೀಕೃಷ್ಣನು ವಸುದೇವ ದೇವಕಿಯರೊಡನೆ ಗೋಪ್ಯವಾಗಿ ಮಾತನಾಡಿ, ಸುಭದ್ರೆಯನ್ನು ಅರ್ಜುನನಿಗೆ ಕೊಟ್ಟು ವಿವಾಹಮಾಡುವ ವಿಚಾರದಲ್ಲಿ ಅವರ ಸಂಪೂರ್ಣ

ಸಂಮತಿಯನ್ನು ಪಡೆದಿದ್ದನು. ಅಲ್ಲದೆ ತಮ್ಮ ಅರಮನೆಯಲ್ಲಿರುವ ಸಂನ್ಯಾಸಿಯು ಅರ್ಜುನನೆಂಬದಾಗಿ, ತನ್ನ ಪ್ರಿಯಪತ್ನಿಯರಾದ ರುಕ್ಮಿಣೀಸತ್ಯಭಾಮೆಯರಿಗೆ ಮಾತ್ರ ರಹಸ್ಯದಲ್ಲಿ ತಿಳಿಸಿದ್ದನು.

ಅರಮನೆಯಲ್ಲಿ ಯತಿಸೇವೆಯ ನಿತ್ಯೋತ್ಸವವು ವಿಜೃಂಭಣೆಯಿಂದ ನಡೆಯುತ್ತಿದ್ದಿತು. ಆತನ ಸೇವೆಯಲ್ಲಿ ನಿರತಳಾಗಿದ್ದ ಸುಭದ್ರೆಯು ಆತನನ್ನು ನಿತ್ಯವೂ ನೋಡುತ್ತಿದ್ದುದರಿಂದ, ತಾನು ಕೇಳಿದ್ದ ಮತ್ತು ತನಗನುರೂಪನೆಂದು ಭಾವಿಸಿದ್ದ ಪಾರ್ಥನ ಲಕ್ಷಣಗಳೇ ಅವಳಿಗೆ ಆತನಲ್ಲಿ ಕಾಣುತ್ತ ಬಂದವು. ಇದರಿಂದ ಕುತೂಹಲ ಭರಿತಳಾದ ಸುಭದ್ರೆಯು ಒಂದು ದಿನ ಭೋಜನವಾದನಂತರ ಯತಿಯನ್ನು ನೋಡಿ, "ಪೂಜ್ಯ ಯತಿವರ್ಯರೇ, ತಾವು ನೋಡದಿರುವ ಕ್ಷೇತ್ರಗಳೂ ಮೀಯದಿರುವ ತೀರ್ಥಗಳೂ, ಅರಿಯದಿರುವ ರಾಜವಂಶೀಯರೂ ಇಲ್ಲವೆಂದು ಕೇಳಿರುವೆನು. ಅಮರಾವತಿಯಂತೆ ಸುಂದರವಾಗಿರುವ ಇಂದ್ರಪ್ರಸ್ಥ ಪುರದಲ್ಲಿ ನಮ್ಮ ಸೋದರತ್ತೆಯಾದ ಕುಂತೀದೇವಿಯಿರುವಳು ಆಕೆಯನ್ನು ತಾವು ಕಂಡಿದ್ದಿರಾ? ಆಕೆಯು ಕುಶಲದಿಂದಿರುವಳೇ? ಆಕೆಯ ಮಗನಾದ ಅರ್ಜುನನು, ತೀರ್ಥಯಾತ್ರೆಗಾಗಿ ಹೋಗಿದ್ದವನು, ಸುರಕ್ಷಿತವಾಗಿ ಹಿಂದಿರುಗಿ ಬಂದನೇ? ದಯವಿಟ್ಟು ತಿಳಿಸಬೇಕು," ಎಂದು ಪ್ರಾರ್ಥಿಸಿದಳು. ಆಗ ಯತಿಯು, ಸುಭದ್ರೆಗೆ ತನ್ನಲ್ಲಿ ಪ್ರೇಮವಿದೆಯೆಂದರಿತು ಸಂತೋಷದಿಂದ ಕಿರುನಗೆನಗುತ್ತ, "ಎಲೌ ಬಾಲೇ, ಅರ್ಜುನನು ನಿಮ್ಮ ದ್ವಾರಕೆಗೇ ಬಂದಿರುವನಲ್ಲಾ! ಅದು ನಿನಗೆ ತಿಳಿಯಲಿಲ್ಲವೇ?" ಎಂದನು. ಅದಕ್ಕೆ ಸುಭದ್ರೆಯು ಆಶ್ಚರ್ಯ ಸಂತೋಷಗಳಿಂದ, "ಸ್ವಾಮೀ,. ನಾನು ಆ ವಿಚಾರವನ್ನು ಅರಿಯೆನು! ಈಗ ಆತನು ಎಲ್ಲಿರುವನು?" ಎಂದು ಕೇಳಿದಳು. ಅದಕ್ಕೆ ಯತಿಯು "ಪಾರ್ಥನು ನಿಮ್ಮ ಮನೆಯಲ್ಲಿಯೇ ಇರುವನು," ಎಂದು ಹೇಳಿ ಸುಭದ್ರೆಯ ಮುಖವನ್ನು ಪ್ರೇಮಮೋಹಗಳಿಂದ ಎವೆಯಿಕ್ಕದೆ ನೋಡಿ ನಕ್ಕನು. ಇದನ್ನು ನೋಡಿ ಸುಭದ್ರೆಗೆ ಈತನೇ ಅರ್ಜುನನಿರಬಹುದೇ ಎಂಬ ಸಂದೇಹವುಂಟಾದರೂ, ಆ ವಿಚಾರವನ್ನು ವಿವರವಾಗಿ ತಿಳಿಯಲು ಯಾವ ಉಪಾಯವೂ ತೋರಲಿಲ್ಲ. ಆದರಿಂದ ತನ್ನ ಸಂದೇಹ ಪರಿಹಾರವಾಗುವ ಉತ್ತರವೇನಾದರೂ

ಆತನಿಂದ ಬಂದೀತೋ ಎಂಬ ನಿರೀಕ್ಷಣೆಯಿಂದ ಮೇಲೆ ಮೇಲೆ ಪ್ರಶ್ನೆಗಳನ್ನು ಹಾಕುತ್ತಲೇ ಬಂದಳು. ಯತಿಯು ಅವುಗಳೆಲ್ಲಕ್ಕೂ ವಕ್ರೋಕ್ತಿಗಳಿಂದ ಸದುತ್ತರಗಳನ್ನು ಹೇಳುತ್ತ ತನ್ನಲ್ಲಿ ಸುಭದ್ರೆಯು ಸಂಪೂರ್ಣಾನುರಾಗವುಳ್ಳವಳಾಗಿರುವಳೆಂದು ಕಂಡಕೂಡಲೇ, ಅವಳ ಕೈಯನ್ನು ಹಿಡಿದು, "ಎಲೌ ಸುಂದರೀ, ನಿನಗಾಗಿ ಯತಿರೂಪಧರನಾಗಿ ಬಂದಿರುವ ನಾನೇ ಅರ್ಜುನನು. ವಿಧಿಯು ನಮ್ಮಿಬ್ಬರಿಗೂ ಈ ರೀತಿಯಾಗಿ ಸಂಬಂಧವನ್ನು ಕಲ್ಪಿಸಿರುವನು. ಶಾಸ್ತ್ರೋಕ್ತವಾದ ಅಷ್ಟವಿಧ ವಿವಾಹಗಳಲ್ಲಿ ಕ್ಷತ್ರಿಯರಿಗೆ ಗಾಂಧರ್ವ ರಾಕ್ಷಸ ವಿವಾಹಗಳೇ ಉತ್ತಮ ರೀತಿಯುವುಗಳೆಂದು ನಾನು ಕೇಳಿರುವುದರಿಂದ ಈಗ ನಮ್ಮಿಬ್ಬರಿಗೂ ಗಾಂಧರ್ವ ವಿವಾಹವು ನಡೆಯಬೇಕಾಗಿರುವುದು," ಎಂಬದಾಗಿ ಹೇಳಲು, ಸುಭದ್ರೆಯು ಲಜ್ಜೆಯಿಂದ ತಲೆವಾಗಿ "ನಮ್ಮ ಅಣ್ಣನೇ ನಮ್ಮಿಬ್ಬರ ಇಷ್ಟಾರ್ಥವನ್ನು ಸಲ್ಲಿಸಬೇಕು," ಎಂಬದಾಗಿ ಹೇಳಿ ಅಂತಃಪುರಕ್ಕೆ ಹೊರಟು ಹೋದಳು. ಅನಂತರ, ಸುಭದ್ರಾರ್ಜುನರ ಪರಸ್ಪರ ಪ್ರೇಮ ಮೋಹ ಕುತೂಹಲಗಳನ್ನು ತನ್ನ ದಿವ್ಯ ದೃಷ್ಟಿಯಿಂದರಿತ ಶ್ರೀಕೃಷ್ಣನು ಯತಿಯ ಉಪಚಾರ ಕಾರ್ಯಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ರುಕ್ಮಿಣಿಯನ್ನು ನಿಯಮಿಸಿದನು. ಅನಂತರ ಒಂದು ದಿನ, ದೇವಕಿ, ವಸುದೇವ, ಪ್ರದ್ಯುಮ್ನ, ಸಾಂಬ, ಸಾರಣ, ಸಾತ್ಯಕಿ ಮೊದಲಾದವರಿಗೆ ಗುಟ್ಟಾಗಿ ಪಾರ್ಥನ ವಿಚಾರವೆಲ್ಲವನ್ನೂ ಮತ್ತು ಸುಭದ್ರೆಯು ಆತನಲ್ಲಿ ಅನುರಕ್ತಳಾಗಿರುವ ವಿಷಯವನ್ನೂ ತಿಳಿಸಿ, ಅವರಿಬ್ಬರಿಗೂ ಗೋಪ್ಯವಾಗಿ ವಿವಾಹವನ್ನು ನೆರವೇರಿಸಲು ಅವರನ್ನು ಅನುಕೂಲರನ್ನಾಗಿ ಮಾಡಿಕೊಂಡು, ತನ್ನ ಸಂಕಲ್ಪವನ್ನು ಸುಭದ್ರಾರ್ಜುನರಿಗೂ ಸಹ ಹೇಳಿಬಿಟ್ಟನು.

ತರುವಾಯ ಅಂತರ್ದ್ವೀಪವೆಂಬ ದ್ವಾರಕೆಯ ಬಳಿಯ ಒಂದು ಸಣ್ಣ ದ್ವೀಪದಲ್ಲಿ ವಿಜೃಂಭಣೆಯಿಂದ ಪಶುಪತಿಪೂಜೆಯನ್ನೇರ್ಪಡಿಸಿ ಶ್ರೀಕೃಷ್ಣನು ಬಲಭದ್ರನೇ ಮೊದಲಾಗಿ ಸಕಲ ಯಾದವ ಭೋಜಾಂಧಕ ವೃಷ್ಣಿವರರ ಸಹಿತವಾಗಿ ಆ ದ್ವೀಪಕ್ಕೆ ಹೋದನು. ಅಲ್ಲಿ ಮಹಾ ವಿಜೃಂಭಣೆಯಿಂದ ಪಶುಪತಿಪೂಜಾಮಹೋತ್ಸವವು ನಡೆದನಂತರ ಎಲ್ಲರೂ ಅಲ್ಲಿ ಸಂತೋಷದಿಂದ ವಿಹರಿಸುತ್ತಿದ್ದರು.

## ಸುಭದ್ರಾರ್ಜುನರ ವಿವಾಹ

ಈ ಸಮಯದಲ್ಲಿ ತಮ ತಮಗೆ ವಿವಾಹವು ಯಾವಾಗ ನಡೆಯುವುದೋ ಎಂದು ಅತ್ಯಂತ ಕುತೂಹಲಭರಿತಸ್ವಾಂತರಾಗಿ ತಲ್ಲಣಿಸುತ್ತಿದ್ದ ಸುಭದ್ರೆಯು ಶ್ರೀಕೃಷ್ಣನನ್ನೂ, ಅರ್ಜುನನು ತನ್ನ ತಂದೆಯಾದ ದೇವೇಂದ್ರನನ್ನೂ ನೆನೆದು ತಮ್ಮ ಇಷ್ಟಾರ್ಥವನ್ನು ಸಫಲಗೊಳಿಸುವಂತೆ ಮನಸ್ಸಿನಲ್ಲಿ ಪ್ರಾರ್ಥಿಸಿದರು. ಹೀಗಿರುವಲ್ಲಿ ಶ್ರೀಕೃಷ್ಣನು ಬಲರಾಮಾದಿಗಳನ್ನು ಅಂತರ್ದ್ವೀಪದಲ್ಲಿಯೇ ಬಿಟ್ಟು, ವಸುದೇವ ಅಕ್ರೂರ, ಸಾತ್ಯಕಿ ಸಾಂಬ ಸಾರಣ ಮೊದಲಾದವರೊಡಗೂಡಿ ಪತ್ನಿಯರೊಡನೆ ದ್ವಾರಕೆಗೆ ಬಂದು ಅರಮನೆಯನ್ನು ಸೇರಿದನು. ಈವರೆಗೆ ಅಮರಾವತಿಯಿಂದ ಅಮರ ಸಿದ್ಧ ಮುನಿಗಣ ಪರಿವೃತನಾಗಿ ದೇವೇಂದ್ರನೂ ಬೃಹಸ್ಪತಿಯೊಡನೆ ಬಂದು ಇಳಿದನು. ಇಂದ್ರನಪೇಕ್ಷೆಯಂತೆ ದಿಕ್ಪಾಲ ದೇವಗಂಧರ್ವರೂ ಅಪ್ಸರೋಭಾಮಿನಿಯರೂ ಸಹ ಅಲ್ಲಿಗೆ ಬಂದರು. ಬೃಹಸ್ಪತಿಯು ನಿಶ್ಚಯಿಸಿದ ಲಗ್ನದಲ್ಲಿ ಸುಭದ್ರಾರ್ಜುನರ ವಿವಾಹವು ಗುಟ್ಟಾಗಿ ಬಹುವಿಜೃಂಭಣೆಯಿಂದ ನೆರವೇರಿ, ಶಚೀದೇವೇಂದ್ರರು ಸುಭದ್ರೆಯನ್ನು ತಮ್ಮ ಸೊಸೆಯಾಗಿ ಸಂತೋಷದಿಂದ ಪರಿಗ್ರಹಿಸಿದರು ರುಕ್ಮಿಣೀ ಸತ್ಯಭಾಮೆಯರು ಅಪ್ಸರೋಭಾಮಿನಿಯರೊಡಗೂಡಿ ಸಮಸ್ತ ಮಂಗಳ ಕಾರ್ಯಗಳನ್ನೂ ನೆರವೇರಿಸಿದರು. ಶಚೀದೇವೇಂದ್ರರು ತಾವು ತಂದಿದ್ದ ದಿವ್ಯರತ್ನ ಮುಕುಟ ಭೂಷಣ। ವಸ್ತ್ರಾದಿಗಳನ್ನು ಅರ್ಜುನನಿಗೂ ಸುಭದ್ರೆಗೂ ಅಲಂಕರಿಸಿ ಆನಂದಿಸಿ ಅವರನ್ನು ಅಭಿನಂದಿಸಿ, ಪರಿವಾರದೊಡನೆ ವಿಮಾನವನ್ನೇರಿ ದೇವಲೋಕಕ್ಕೆ ಪ್ರಯಾಣಮಾಡಿದರು. ಹೀಗೆ ಸುಭದ್ರಾರ್ಜುನರ ವಿವಾಹವು ನೆರವೇರಿದನಂತರ ಶ್ರೀಕೃಷ್ಣನು ಲಬ್ಧಮನೋರಥನಾದ ಪಾರ್ಥನನ್ನಾಲಿಂಗಿಸಿ ಆತನಿಗೆ ಅಕ್ಷಯಬಾಣ ತೂಣೀರಬಾಣಾಸನಾದಿಗಳನ್ನು ಕೊಟ್ಟು, ವಾಯು ವೇಗದ ದಿವ್ಯಾಶ್ವಗಳನ್ನು ಕಟ್ಟಿದ ರಥದಲ್ಲಿ ಕುಳ್ಳಿರಿಸಿ, ಬೇಗನೆ ಹಸ್ತಿನಾವತಿಗೆ ಪ್ರಯಾಣ ಮಾಡೆಂಬದಾಗಿ ಹೇಳಿಕಳುಹಿಸಿಕೊಟ್ಟು, ತಾನು ಮತ್ತೆ ಅಂತರ್ದ್ವೀಪಕ್ಕೆ ಹೋಗಿ, ಅಲ್ಲಿ ಏನೂ ಅರಿಯದವನಂತೆ ಇದ್ದನು.

ಇತ್ತಲಾ ಪಾರ್ಥನು ಸುಭದ್ರೆಯೊಡನೆ ರಥದಲ್ಲಿ ವೇಗವಾಗಿ ಹೋಗುತ್ತಿದ್ದುದನ್ನು ಪೃಥುಶ್ರವನೇ ಮೊದಲಾದ ವೀರರು ಕಂಡು, ಅರ್ಜುನನು ಸುಭದ್ರೆಯನ್ನು ಕಳ್ಳತನದಿಂದ ಅಪಹರಿಸಿಕೊಂಡು ಹೋಗು

ತ್ತಿರುವನೆಂದರಿತು, ಆತನನ್ನು ತಡೆಯಲು, ಪಾರ್ಥನಿಗೂ ಆ ವೀರರಿಗೂ ಪ್ರಬಲ ಯುದ್ಧವೇ ನಡೆಯಿತು. ಅವರೆಲ್ಲರನ್ನೂ ತನ್ನ ಶರಾಹತಿಗಳಿಂದ ಪರಾಭವಿಸಿ ಪಾರ್ಥನು ರಥವನ್ನತಿವೇಗವಾಗಿ ಓಡಿಸಿಕೊಂಡು ಮುಂದೆ ಹೊರಟೇ ಹೋದನು.

ಈ ಸಮಾಚಾರವು ಅಂತರ್ದ್ವೀಪದಲ್ಲಿದ್ದ ಬಲಭದ್ರಾದಿಗಳ ಕಿವಿಗೆ ಮುಟ್ಟಿತು. ಆ ಕೂಡಲೇ ಹಲಧರನು ಸಕಲರೊಡಗೂಡಿ ದ್ವಾರಕೆಗೆ ಬಂದು, ಸಭಾಸೀನನಾಗಿ, ಪಾರ್ಥನ ಅಕಾರ್ಯಕ್ಕಾಗಿ ಆತನನ್ನು ನಾನಾ ವಿಧವಾಗಿ ದೂರಿದನು. ಆದರಿಂದ ಪಾರ್ಥನೊಡನೆ ಸಂಗರಕ್ಕೆ ಸಿದ್ಧರಾದ ತನ್ನ ಸೇನಾನಿಗಳನ್ನು ತಡೆದು ಬಲರಾಮನು ಕೃಷ್ಣನನ್ನು ನೋಡಿ, "ಕೃಷ್ಣಾ, ನಿನಗೆ ತಿಳಿಯದೆ ಅರ್ಜುನನಿಂದ ಈ ಕನ್ಯಾಪಹಾರ ಕಾರ್ಯವು ನಡೆದಿರಲಾರದು. ಆದರಿಂದ ಈ ಅನರ್ಥಕ್ಕೆ ನೀನೇ ಮೂಲಕಾರಣನು. ಅಹುದೋ ಅಲ್ಲವೋ ಹೇಳು," ಎಂದು ರೇಗಿ ಕೇಳಲು, ಶ್ರೀಕೃಷ್ಣನು, "ಅಣ್ಣಾ, ಅದು ನನಗೆ ತಿಳಿದಿರಲಿ, ಅಥವಾ ತಿಳಿಯದೆ ಇರಲಿ, ಈಗ ನಡೆದ ಅನರ್ಥವೇನು? ಪಾಂಡುವಂಶದಲ್ಲಿ ಸಿಂಹಪರಾಕ್ರಮಿಯಾಗಿ ಸರ್ವಧರ್ಮಗಳನ್ನೂ ತಿಳಿದು, ಅಸ್ತ್ರಶಸ್ತ್ರಶಾಸ್ತ್ರಾದಿ ವಿದ್ಯೆಗಳಲ್ಲಿ ಪಾರಂಗತನೆನಿಸಿ, ಧೀರನಾಗಿರುವ ಅರ್ಜುನನು ತನ್ನ ಸೋದರತ್ತೆಯ ಮಗಳಾದ ಸುಭದ್ರೆಯನ್ನು ಕರೆದುಕೊಂಡು ಹೋದುದು ಅಕಾರ್ಯವೇ? ನಮ್ಮ ಸುಭದ್ರೆಗೆ ಅವನು ಎಲ್ಲ ಭಾಗದಲ್ಲಿಯೂ ತಕ್ಕ ವರನಲ್ಲವೇ? ಒಂದುವೇಳೆ ನಾವೀಗ ಅವನಲ್ಲಿ ವಿರೋಧಗೊಂಡು, ನಿನ್ನ ಸೇನಾನಿಗಳು ಹೇಳಿದಂತೆ ಯುದ್ಧಕ್ಕೆ ಹೋದರೆ, ದ್ರೋಣಾಚಾರ್ಯರ ಶಿಷ್ಯನಾದ ಪಾರ್ಥನನ್ನು ಗೆಲ್ಲುವುದೇನು ಸುಲಭಸಾಧ್ಯವೇ? ಕೀರ್ತಿಕರವೇ? ಬೇಡ, ಪಾರ್ಥನ ಮೇಲಣ ಕೋಪವನ್ನು ತ್ಯಜಿಸು. ವಿವಾಹವು ವಿಧಿ ಸಂಕಲ್ಪದಂತೆ ನಡೆಯುವುದಲ್ಲದೆ, ಮನುಷ್ಯ ಸಂಕಲ್ಪವೇ ಮುಖ್ಯವಲ್ಲ. ಈ ವಿವಾಹದಿಂದ ನಮ್ಮ ಸೋದರಿಗೆ ಪರಮಸಂತೋಷ ಸುಖ ಪರಂಪರೆಗಳೇ ಉಂಟಾಗುವವಲ್ಲದೆ ಯಾವ ವಿಧವಲ್ಲೂ ಕೊರತೆಯುಂಟಾಗದು. ಆದರಿಂದ ನೀನು ಶಾಂತನಾಗಬೇಕೆಂದು ನಾನು ಪ್ರಾರ್ಥಿಸಿಕೊಳ್ಳುವೆನು," ಎಂದನು. ಇದನ್ನು ಕೇಳಿ ವಿವೇಕಶಾಲಿಯಾದ ಬಲರಾಮನು ಕೃಷ್ಣನ ಮಾತು ಒಪ್ಪತಕ್ಕುದೆಂದು ಶಾಂತನಾದನು.

ಇತ್ತಲಾ ಪಾರ್ಥನು, ಸುಭದ್ರೆಯೇ ವಾಯುವೇಗದಿಂದ ನಡೆಯಿಸು ತ್ತಿದ್ದ ರಥದಲ್ಲಿ ಕುಳಿತು ಅನೇಕ ವನ ಶೈಲ ವಾಹಿನಿಗಳನ್ನು ದಾಟಿ ಇಂದ್ರ ಪ್ರಸ್ಥಪುರವನ್ನು ಕುರಿತು ಬರುತ್ತಿರುವಷ್ಟರಲ್ಲಿಯೇ, ಶ್ರೀಕೃಷ್ಣನ ಅಭಿಮತದಂತೆ ಬಲರಾಮನು ಕಳುಹಿಸಿದ ಯಾದವ ಪ್ರಮುಖರು ಕೆಲವರು ಬಂದು ಸುಭದ್ರಾರ್ಜುನರಿಗೆ ಸಮಾಧಾನವನ್ನು ಹೇಳಿ ಮತ್ತೆ ದ್ವಾರಕೆಗೆ ಕರೆದುಕೊಂಡು ಹೋದರು. ಅಲ್ಲಿ ಬಲರಾಮನು ಅವರಿಬ್ಬ ರಿಗೂ ಅತಿವಿಜೃಂಭಣೆಯಿಂದ ಕ್ರಮವಾಗಿ ವಿವಾಹಮಂಗಳವನ್ನು ನೆರ ವೇರಿಸಿ ಸರ್ವರಿಗೂ ಸಂತೋಷವನ್ನುಂಟುಮಾಡಿದನು. ಇದಾ ದನಂತರ ಕೆಲವು ದಿನಗಳು ಪಾರ್ಥನು ದ್ವಾರಕೆಯಲ್ಲಿಯೇ ಇದ್ದು, ಶುಭದಿವಸದಲ್ಲಿ ದೇವಕೀ ವಸುದೇವ ಬಲರಾಮ ಶ್ರೀಕೃಷ್ಣಾದಿಗಳ ಅಪ್ಪಣೆಯನ್ನು ಪಡೆದು ಸುಭದ್ರೆಯೊಡನೆ ಸಂತೋಷವಾಗಿ ಇಂದ್ರ ಪ್ರಸ್ಥಕ್ಕೆ ಪ್ರಯಾಣಮಾಡಿದನು.

ಪಾರ್ಥನು ಪತ್ನೀಸಮೇತನಾಗಿ ಬಂದು ಕುಂತೀ ಯುಧಿಷ್ಠಿರ ಭೀಮಸೇನಾದಿಗಳಿಗೆ ನಮಸ್ಕರಿಸಿ, ಅವರಾಶೀರ್ವಾದವನ್ನು ಪಡೆದನು. ಸುಭದ್ರೆಯೂ ಸಹ ಕುಂತೀದೇವಿಗೆರಗಿ ಆಕೆಯ ಆಶಿಷವನ್ನು ಪಡೆದು ದಲ್ಲದೆ, ದ್ರೌಪದಿಗೆ ನಮಸ್ಕರಿಸಿ, "ಅಕ್ಕಾ, ನಾನು ನಿನ್ನ ಸೇವೆಗಾಗಿ ಬಂದಿರುವೆನು. ನನ್ನನ್ನು ಪ್ರೀತಿಯಿಂದ ಪಾಲಿಸಬೇಕು," ಎಂದಳು. ಅದಕ್ಕೆ ಗುಣವತಿಯಾದ ದ್ರೌಪದಿಯು ಬಹಳ ಸಂತೋಷ ಪಟ್ಟು, ಆಕೆಯನ್ನಾಲಿಂಗಿಸಿ, "ಪಾರ್ಥನಿಗೆ ಸಮಾನನಾದ ಪುತ್ರನನ್ನು ಪಡೆ ಯೆಂದು ಆಶೀರ್ವದಿಸಿದಳು. ಶ್ರೀಕೃಷ್ಣ ಬಲರಾಮರು, ಅಕ್ರೂರ, ಉದ್ಧವ ಮೊದಲಾಗಿ ವೃಷ್ಣಿ ಭೋಜ ಅಂಧಕಾದಿ ಪರಿವಾರದೊಡಗೂಡಿ ಬಂದು, ಅನೇಕ ಹಸ್ತಿ ಅಶ್ವ ರಥಗಳನ್ನೂ ಸೇವಕರನ್ನೂ ಅಲಂಕೃತರಾದ ಚೇಟಿಯರನ್ನೂ ಬಳುವಳಿಯಾಗಿ ಕೊಟ್ಟುದಲ್ಲದೆ, ಅಪರಿಮಿತ ಸುವರ್ಣ ರತ್ನಾಭರಣ ವಸ್ತು ವಸ್ತ್ರಾದಿಗಳನ್ನು ಸುಭದ್ರಾರ್ಜುನರಿಗೆ ಕೊಟ್ಟು, ಧರ್ಮರಾಜಾದಿಗಳಿಂದ ಸತ್ಕೃತರಾಗಿ ಬಹಳ ಸಂತೋಷದಿಂದ ಕೆಲವು ದಿನಗಳು ಅಲ್ಲಿದ್ದರು.

## ಪುತ್ರಲಾಭ

ಬಲರಾಮಾದಿ ಯಾದವರು ಪಾಂಡವರಿಂದ ಪ್ರತಿಪೂಜಿತರಾಗಿ ದ್ವಾರಕಾನಗರಕ್ಕೆ ಹೊರಟು ಹೋದರು. ಶ್ರೀಕೃಷ್ಣನು ಮಾತ್ರ ತನ್ನ ಪ್ರಿಯ ಮಿತ್ರನೂ ಭಾವಮೈದುನನೂ ಆದ ಅರ್ಜುನನೊಡನೆ ವಿನೋದವಾಗಿ ಕಾಲಕಳೆಯುತ್ತ ಇಂದ್ರಪ್ರಸ್ಥದಲ್ಲಿಯೇ ನಿಂತನು.

ಕೆಲವು ದಿನಗಳ ಮೇಲೆ ಸುಭದ್ರಾರ್ಜುನರಿಗೆ ಅನನ್ಯಸಾಮಾನ್ಯ ಪರಾಕ್ರಮಶಾಲಿಯೂ, ಅರಿಭಯಂಕರನೂ ಆದ ಪುತ್ರನೊಬ್ಬನು ಉದಯಿಸಿದನು. ಇವನು ಭಯವನ್ನೇ ಅರಿಯದವನಾಗಿದ್ದು, ಶತ್ರುನಿಗ್ರಹದಲ್ಲಿ ಪ್ರಚಂಡ ಕೋಪಿಯಾಗುವನೆಂದರಿತು, ಕುಲ ಪುರೋಹಿತರಾದ ಧೌಮ್ಯಮುನಿಗಳು ಇವನಿಗೆ **ಅಭಿಮನ್ಯು** ( ಪ್ರಬಲ ಕೋಪಿ ) ಎಂಬದಾಗಿ ಹೆಸರನ್ನಿಟ್ಟರು. ಈ ಬಾಲಕನು ಸೌಂದರ್ಯ ಧೈರ್ಯ ಶೌರ್ಯ ಪರಾಕ್ರಮಾದಿ ಲಕ್ಷಣಗಳಲ್ಲಿ ಶ್ರೀಕೃಷ್ಣನಿಗೆ ಸಮಾನನಾಗಿದ್ದನು. ಪಾರ್ಥನು ಇವನಿಗೆ ಭೂಲೋಕ ದೇವಲೋಕಗಳ ಶಸ್ತ್ರಾಸ್ತ್ರ ವಿದ್ಯೆಗಳನ್ನೂ ಸಮಗ್ರವಾಗಿ ಕಲಿಸಿದುದಲ್ಲದೆ, ಗುರುಗಳಿಂದ ವೇದಾಧ್ಯಯನವನ್ನೂ ಸಹ ಮಾಡಿಸಿ, ಎಲ್ಲ ವಿಷಯಗಳಲ್ಲಿಯೂ ತನ್ನ ಸಮಾನನಾಗುವಂತೆ ಶಿಕ್ಷಣವನ್ನು ಕೊಟ್ಟನು. ಇದರಿಂದ ಅಭಿಮನ್ಯುವು ಧನುರ್ವಿದ್ಯಾ ವಿಶಾರದನೂ, ವೇದಶಾಸ್ತ್ರ ಸಂಪನ್ನನೂ ರಣಭಯಂಕರನೂ ಆದನು.

ಹೀಗಿರುವಲ್ಲಿ ಕಾಲಕ್ರಮವಾಗಿ, ಪಾಂಚಾಲಿಯ ಉದರದಲ್ಲಿ ಪಂಚಪಾಂಡವರಿಗೂ ಕ್ರಮವಾಗಿ, ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂದು ಐದು ಮಂದಿ ಪ್ರಬಲ ಪ್ರತಾಪಶಾಲಿಗಳಾದ ಸುಪುತ್ರರು ಜನಿಸಿದರು. ಇವರೆಲ್ಲರೂ ವಯಸ್ಸಿನಲ್ಲಿ ಒಂದೊಂದೇ ವರ್ಷ ವ್ಯತ್ಯಾಸವಾಗಿ ಹುಟ್ಟಿ, ಪರಸ್ಪರ ವಿಶೇಷ ಪ್ರೀತಿ ವಿಶ್ವಾಸಗಳಿಂದ ಹೊಂದಿಕೊಂಡಿದ್ದರು. ಕಾಲಕ್ರಮವಾಗಿ ಪಾಂಡವರು ಇವರುಗಳಿಗೆ ಚೂಡಾಕರ್ಮ ಉಪನಯನ ಮೊದಲಾದ ಕರ್ಮಗಳನ್ನು ನಡೆಯಿಸಿದುದಲ್ಲದೆ, ಇವರನ್ನು ಸಕಲ ವೇದಶಾಸ್ತ್ರಗಳಲ್ಲಿಯೂ ಶಸ್ತ್ರಾಸ್ತ್ರಯುದ್ಧಾದಿ ಕಲೆಗಳಲ್ಲಿಯೂ ನಿಪುಣರನ್ನಾಗಿ ಮಾಡಿದರು.

ಅಧ್ಯಾಯ ೧೭

## ಖಾಂಡವ ದಹನ

ಹೀಗೆ ಪಾಂಡವರು ಧೃತರಾಷ್ಟ್ರ ಭೀಷ್ಮರ ಅಪ್ಪಣೆಯಂತೆ ಇಂದ್ರ ಪ್ರಸ್ಥಪುರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಸತ್ಯ ಧರ್ಮಗಳಿಂದ ಪ್ರಜೆಗಳನ್ನು ಪಾಲಿಸುತ್ತ ಕೀರ್ತಿವಂತರಾದರು. ಅವರು ತಮ್ಮ ಭುಜಬಲದಿಂದ ಅನೇಕಮಂದಿ ರಾಜರುಗಳನ್ನು ತಮ್ಮ ಸಾಮಂತ ರನ್ನಾಗಿ ಮಾಡಿಕೊಂಡು ಸುಖವಾಗಿರುತ್ತಿರಲು, ಬೇಸಗೆಯು ಬಂತು. ಆಗ ಶ್ರೀಕೃಷ್ಣಾರ್ಜುನರು ಒಂದು ದಿನ ಮಿತ್ರಪರಿವಾರ ಸಹಿತರಾಗಿ, ಯಮುನಾತೀರದಲ್ಲಿ ರಚಿಸಿದ್ದ ಅರಮನೆಗೆ ಬಂದು ನದಿಯಲ್ಲಿ ಜಲ ಕೇಳಿಯನ್ನಾಡಿ ದಿವ್ಯ ಭೋಜನಾನಂತರದಲ್ಲಿ ಸಂಗೀತ ನಾಟ್ಯಾದಿಗಳಲ್ಲಿ ವಿನೋದದಿಂದ ಕಾಲವನ್ನು ಕಳೆದರು. ತರುವಾಯ ಅವರಿಬ್ಬರೂ ತಮ್ಮ ವಿಜಯವೃತ್ತಾಂತಗಳನ್ನು ಕುರಿತು ಮಾತನಾಡುತ್ತ ಆ ವನ ಪ್ರಾಂತದಲ್ಲಿ ಸಂಚಾರ ಮಾಡುತ್ತಿರುವಾಗ ಅಲ್ಲಿಗೆ, ಜಟಾಧರನಾಗಿಯೂ ಬಾಲಭಾಸ್ಕರನಂತೆ ತೇಜೋಮಯನಾಗಿಯೂ ಇದ್ದ ಬ್ರಾಹ್ಮಣನೊಬ್ಬನು ಬಂದನು. ಆಗ ಆ ವೀರರಿಬ್ಬರೂ ಎದ್ದು ಮರ್ಯಾದೆಯಿಂದ ಆತನಿಗೆ ನಮಸ್ಕರಿಸಿ, ಆತನ ವೃತ್ತಾಂತವನ್ನು ಕೇಳಲು, ಆ ಬ್ರಾಹ್ಮಣನು, "ಎಲೈ, ವೀರ ಶ್ರೇಷ್ಠರೇ, ಈಗ ನೀವುಗಳಿಬ್ಬರೂ ಖಾಂಡವ ವನಕ್ಕೆ ಬಹಳ ಸಮೀಪವಾಗಿ ಬಂದಿರುವಿರಿ. ನಾನಾದರೋ ಬಹಳವಾಗಿ ಹಸಿದು ಬಂದಿರುವ ಬಲಾಹಾರಿಯಾದ ಬ್ರಾಹ್ಮಣನು. ಆದಕಾರಣ ನನಗೆ ನೀವು ತೃಪ್ತಿಯಾಗುವಂತೆ ಆಹಾರವನ್ನು ಕೊಟ್ಟು ನನ್ನನ್ನು ಸಂತೋಷ ಪಡಿಸಬೇಕು," ಎಂದನು. ಇದನ್ನು ಕೇಳಿ ಆಶ್ಚರ್ಯ ಭರಿತರಾದ ಕೃಷ್ಣಾ ರ್ಜುನರು, "ಸ್ವಾಮೀ, ತಾವು ಎಂತಹ ಆಹಾರವನ್ನಪೇಕ್ಷಿಸುವಿರಿ? ದಯೆಯಿಟ್ಟು ತಿಳಿಸಿದರೆ, ಅದನ್ನು ತಮಗೆ ಒದಗಿಸಿ ತಮ್ಮ ಸೇವೆ ಮಾಡಲು ಸಿದ್ಧವಾಗಿರುವೆವು," ಎಂದರು. ಆಗ ಆ ಬ್ರಾಹ್ಮಣನು, "ಅಯ್ಯಾ, ಕೇಳಿ, ನಾನು ಸಾಮಾನ್ಯಬ್ರಾಹ್ಮಣನಲ್ಲ. ಸರ್ವಭಕ್ಷಕ ನಾದ ಅಗ್ನಿಯು. ಅದರಿಂದ ನನಗೆ ತಕ್ಕ ಆಹಾರವನ್ನು ಈಗ ನೀವು ಕೊಡಬೇಕಾಗಿದೆ. ಹಿಂದೆ, ಶ್ವೇತಕಿಯೆಂಬ ಮಹಾರಾಜನು

ಅನೇಕ ಯಾಗಗಳನ್ನು ಮಾಡಿ, ಘೋರ ತಪಸ್ಸನ್ನಾಚರಿಸಿ, ಕಡೆಗೆ ಈಶ್ವ ರಾನುಗ್ರಹವನ್ನು ಪಡೆದು ಒಂದು ನೂರು ವರ್ಷಗಳ ಕಾಲ, ಒಂದು ಅದ್ಭುತವಾದ ಮಹಾಯಾಗವನ್ನು ಮಾಡಿದನು. ಅದರಲ್ಲಿ ಹನ್ನೆರಡು ವರ್ಷಗಳ ಕಾಲ ನಾನು ಅಪರಿಮಿತವಾದ ಆಜ್ಯಾಹುತಿಗಳನ್ನು ಅವಿಚ್ಛಿನ್ನ ವಾಗಿ ಸೇವಿಸಿದ ಕಾರಣ, ನನ್ನ ತೇಜಶ್ಶಕ್ತಿಗಳು ಕುಂದಿ ನಾನು ರೋಗ ಗ್ರಸ್ತನಾದೆನು. ಇದರಿಂದ ನಾನು ಬ್ರಹ್ಮದೇವನ ಸನ್ನಿಧಿಗೆ ಹೋಗಿ, ನನ್ನ ರುಜೆಗೆ ಪರಿಹಾರವೇನೆಂಬದಾಗಿ ಕೇಳಲು, ಆತನು, 'ಹುತಾಶನಾ, ಇಂದ್ರನ ಖಾಂಡವ ವನದಲ್ಲಿ ಅನೇಕವಿಧವಾದ ಪ್ರಾಣಿಗಳು ವಾಸ ವಾಗಿರುವವು. ನೀನು ಆ ವನವನ್ನು ದಹಿಸಿ ಆ ಪ್ರಾಣಿಗಳ ಕೊಬ್ಬನ್ನು ತಿಂದುಬಿಡುವುದಾದರೆ, ನಿನ್ನ ಈ ರೋಗವು ಸಂಪೂರ್ಣವಾಗಿ ಪರಿಹಾರ ವಾಗಿ ನೀನು ಮೊದಲಿನಂತೆ ತೇಜಃಪ್ರತಾಪಗಳಿಂದ ಶೋಭಿಸುವೆ,' ಎಂದು ಹೇಳಿದನು. ಇದರಂತೆ ನಾನು, ಅನೇಕಾವೃತ್ತಿ ಹೋಗಿ ಖಾಂಡವ ವನವನ್ನು ದಹಿಸುವುದಕ್ಕಾರಂಭಿಸಲು, ಅದರಲ್ಲಿದ್ದ ಅನೇಕ ಆನೆಗಳು ತಮ್ಮ ಸೊಂಡಿಲುಗಳಿಂದ ನೀರನ್ನು ತಂದೆರಚಿ ಬೆಂಕಿಯ ನ್ನಾರಿಸಿದುವಲ್ಲದೆ, ಅಲ್ಲಿದ್ದ ಬಹು ಹೆಡೆಗಳ ಸರ್ಪಗಳು, ತಮ್ಮ ಹೆಡೆ ಗಳಿಂದ ನೀರನ್ನುಗಿದು ಜ್ವಾಲೆಯನ್ನು ತಣ್ಣಗೆ ಮಾಡುತ್ತ ಬಂದವು. ಇದರಿಂದ ವಿಫಲನಾದ ನಾನು ಕೋಪದಿಂದ ಬ್ರಹ್ಮದೇವನ ಬಳಿಗೆ ಮತ್ತೆ ಹೋಗಿ ವಿಷಯವನ್ನು ತಿಳಿಸಲು, ಆತನು, 'ಹುತವಹನಾ, ನರ ನಾರಾಯಣರೆಂಬ ಇಬ್ಬರು ದೇವತೆಗಳು ಈಗ ಭೂಲೋಕದಲ್ಲಿ ಅರ್ಜುನ ಕೃಷ್ಣರೆಂಬ ನಾಮಧೇಯಗಳಿಂದ ಜನಿಸಿ ದೇವತೆಗಳ ಹಿತಕ್ಕಾಗಿ ಕಾರ್ಯ ಮಾಡತಕ್ಕವರಾಗಿರುವರು. ಅವರು ಈಗ ಖಾಂಡವವನದ ಬಳಿ ಯಲ್ಲಿಯೇ ಇರುವರು. ನೀನು ಅವರಬಳಿಗೆ ಹೋಗಿ ಪ್ರಾರ್ಥಿಸಿದರೆ, ಅವರ ಸಹಾಯದಿಂದ ನಿನಗೆ ಖಾಂಡವವನ್ನು ದಹಿಸುವ ಕಾರ್ಯವು ಸುಲಭವಾಗುವುದು. ದೇವತೆಗಳೇ ಪ್ರತಿಭಟಿಸಿದರೂ ಕೃಷ್ಣಾರ್ಜುನರು ಅವರೆಲ್ಲರನ್ನೂ ಪರಾಭವಿಸಿ ನಿನ್ನ ಇಷ್ಟಾರ್ಥವನ್ನು ನೆರವೇರಿಸುವರು,' ಎಂಬದಾಗಿ ಹೇಳಿದನು. ಆದರಿಂದ ನಾನು ನಿಮ್ಮ ಸಹಾಯವನ್ನು ಅಪೇಕ್ಷಿಸಿ ಬಂದಿರುವೆನು," ಎಂದನು.

ಇದನ್ನು ಕೇಳಿ ಅರ್ಜುನನು, "ಅಗ್ನಿದೇವಾ, ಇಂದ್ರನನ್ನಾದರೂ

ಗೆಲ್ಲಬಲ್ಲ ಅಸಂಖ್ಯಾತಬಾಣಗಳು ನನ್ನಲ್ಲಿರುವವಾದರೂ, ನನ್ನ ಆ ಬಾಣಗಳನ್ನು ಬಿಡಲು ನನ್ನ ಹಸ್ತಲಾಘವಕ್ಕೆ ತಕ್ಕಂತಹ ಧನುಸ್ಸೂ, ಅಕ್ಷಯ ಬಾಣಗಳನ್ನೊದಗಿಸುವಂತಹ ಬತ್ತಳಿಕೆಯೂ, ನನಗೆ ಬೇಕಾಗುವಷ್ಟು ಬಾಣಗಳನ್ನಿಟ್ಟುಕೊಳ್ಳಬಲ್ಲ ರಥವೂ ನನ್ನಲ್ಲಿ ಇಲ್ಲ. ಶುದ್ಧವಾದ ಬಿಳಿಯ ಬಣ್ಣದ ಕುದುರೆಗಳನ್ನು ಕಟ್ಟಿದ ದಿವ್ಯವಾದ ರಥವು ನನಗೆ ಬೇಕಾಗಿರುವುದು. ಅಲ್ಲದೆ, ನಮ್ಮ ಶ್ರೀಕೃಷ್ಣನ ಪರಾಕ್ರಮಕ್ಕೆ ತಕ್ಕಂತಹ ಆಯುಧವು ಆತನಲ್ಲಿಲ್ಲ. ಶಂಕರನು, ನಾಗ ಪಿಶಾಚಾದಿಗಳನ್ನು ನಿಗ್ರಹಿಸಲು ಉಪಯೋಗಿಸುವಂತಹ ಅದ್ಭುತಾಯುಧವೇ ಆತನಿಗೆ ಬೇಕಾಗಿದೆ. ಈಗ ನೀನು ನಮ್ಮ ಪರಾಕ್ರಮಕ್ಕೆ ತಕ್ಕಂತಹ ದಿವ್ಯಾಯುಧಗಳನ್ನೂ ರಥವನ್ನೂ ಒದಗಿಸಿಕೊಡುವುದಾದರೆ, ನಮ್ಮ ಧೈರ್ಯ ಶೌರ್ಯ ಪರಾಕ್ರಮಾದಿಗಳನ್ನು ತೋರಿಸಿ ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆವು," ಎಂಬದಾಗಿ ಹೇಳಿದನು.

ಇದನ್ನು ಕೇಳಿ ಅಗ್ನಿಯು, ಅದಿತಿಪುತ್ರನಾದ ವರುಣನನ್ನು ಸ್ಮರಿಸಿದ ಕೂಡಲೇ ಆತನು ಪ್ರತ್ಯಕ್ಷನಾದನು ಆಗ ಅಗ್ನಿಯು ಆತನಿಗೆ ವಿಚಾರವೆಲ್ಲವನ್ನೂ ತಿಳಿಸಿ, ಆತನಿಂದ ಗಾಂಡೀವವೆಂಬ ಮಹಾಧನುಸ್ಸನ್ನೂ, ಅಕ್ಷಯ ತೂಣೀರವನ್ನೂ, ಗಂಧರ್ವಲೋಕದ ವಾಯುವೇಗಗಳಾದ ಅಶ್ವಗಳನ್ನು ಕಟ್ಟಿದ ಮತ್ತು ಅಸಂಖ್ಯಾತ ದೇವಲೋಕಾಸ್ತ್ರ ಶಸ್ತ್ರಗಳಿಂದ ತುಂಬಿದ ಕಪಿಧ್ವಜದಿಂದ ಕೂಡಿದ ಮಹಾರಥವನ್ನೂ ತರಿಸಿ ಅರ್ಜುನನಿಗೂ, ಶತ್ರು ಸಂಹಾರಕವಾದ ಸುದರ್ಶನ ಚಕ್ರವನ್ನು ತರಿಸಿ ಶ್ರೀಕೃಷ್ಣನಿಗೂ ಕೊಟ್ಟನು. ಆ ರಥವು ಈಶ್ವರನು ರಾಕ್ಷಸರನ್ನು ಸಂಹರಿಸುವ ಕಾಲದಲ್ಲಿ ಉಪಯೋಗಿಸಿದ್ದ ಮಹಾರಥದಂತೆ ಅದ್ಭುತ ಪ್ರಕಾಶದಿಂದ ಕೂಡಿದುದಾಗಿದ್ದುದಲ್ಲದೆ, ಅದರ ಮೇಲಣ ಧ್ವಜದಲ್ಲಿ ಕುಳಿತಿದ್ದ ಕಪಿ ವೀರನು ಭಯಂಕರ ಸಿಂಹದಂತೆ ಕಾಣುತ್ತಿದ್ದನು.

ನರನಾರಾಯಣಾವತಾರರಾದ ಅರ್ಜುನನೂ ಶ್ರೀಕೃಷ್ಣನೂ ಯುದ್ಧ ಕವಚಗಳನ್ನು ಧರಿಸಿ, ತಮ್ಮ ತಮ್ಮ ದಿವ್ಯಾಯುಧಗಳನ್ನು ಹಿಡಿದು ಬಹಳ ಸಂತೋಷದಿಂದ ರಥವನ್ನೇರಿದರು. ಅರ್ಜುನನು ಗಾಂಡೀವ ಧನುಸ್ಸಿಗೆ ನಾರಿಯನ್ನೇರಿಸಿ ಟಂಕಾರಮಾಡಿದ ಧ್ವನಿಯನ್ನು ಕೇಳಿ ಅಗ್ನಿದೇವನೂ ಸಹ ಬೆಚ್ಚಿ ನಡುಗಿದನು. ವರುಣನು ಶ್ರೀಕೃಷ್ಣ

ನಿಗೆ ಚಕ್ರದ ಜೊತೆಗೆ ಕೌಮೋದಕಿ ಯೆಂಬ ಮಹಾ ಗದೆಯೊಂದನ್ನೂ ಸಹ ಕೊಟ್ಟನು. ಆಗ ವೀರರಿಬ್ಬರೂ ಅಗ್ನಿದೇವನಿಗೆ ಅಭಯವನ್ನು ಕೊಟ್ಟು ಖಾಂಡವ ವನದಮೇಲೆ ತಮ್ಮ ಬಾಣಗಳನ್ನು ಪ್ರಯೋಗಿಸಲು, ಅಗ್ನಿಯು ಖಾಂಡವ ವನವನ್ನು ಸುತ್ತಲೂ ಆವರಿಸಿ ಸುಡಲಾರಂಭಿಸಿದನು. ಮೇರು ಪರ್ವತವೇ ಉರಿದಂತೆ ಅದ್ಭುತ ಜ್ವಾಲೆಗಳಿಂದ ಧಗಧಗಿಸುತ್ತಿದ್ದ ಆ ವನದಲ್ಲಿದ್ದ ಅಸಂಖ್ಯಾತ ಪ್ರಾಣಿಗಳು ಭಯಂಕರವಾಗಿ ಚೀರುತ್ತ ದಿಕ್ಕು ದಿಕ್ಕುಗಳಿಗೂ ಓಡಲಾರಂಭಿಸಿದವು. ಕೋಟ್ಯಂತರ ಪ್ರಾಣಿಗಳು ಮರಗಳ ಸಹಿತವಾಗಿ ಸತ್ತು ಉರಿದುಹೋದವು. ಹೀಗೆ ಕೋಟಿ ಕೋಟಿಯಾಗಿ ಮೃಗ ಪಕ್ಷಿಗಳು ಬೆಂದು ಭಸ್ಮವಾದ ಆ ವನದ ಪಲ್ವಲ ಸರೋವರಗಳಲ್ಲಿದ್ದ ನೀರೆಲ್ಲವೂ ಕಾದು ಮರಳಿ ಅಗಣಿತವಾದ ಮತ್ಸ್ಯಕೂರ್ಮಾದಿಗಳು ಸತ್ತುಹೋದವು. ಆ ವನದಲ್ಲಿ ವಾಸಿಸುತ್ತಿದ್ದ ಜನರ ಆರ್ತಧ್ವನಿಯು ದೇವಲೋಕಕ್ಕೂ ಕೇಳಿ, ಇಂದ್ರನು ಅಲ್ಲಿದ್ದ ತನ್ನ ಮಿತ್ರನಾದ ತಕ್ಷಕನೆಂಬ ಸರ್ಪರಾಜನೇ ಮೊದಲಾದವರನ್ನು ಕಾಪಾಡುವ ಉದ್ದೇಶದಿಂದ ಪ್ರಬಲವಾದ ಮಳೆಯನ್ನು ಸುರಿಸಿದನು. ಆ ಮಳೆಯ ನೀರೆಲ್ಲವೂ, ಅದ್ಭುತವಾಗಿದ್ದ ಆ ಅಗ್ನಿಯಿಂದ ಹಬೆಯಾಯಿತಲ್ಲದೆ, ಬೆಂಕಿಯನ್ನಾರಿಸಲಾರದೆ ಹೋಯಿತು. ಆ ಸಮಯದಲ್ಲಿ ತಕ್ಷಕನು ಆ ವನದಲ್ಲಿರದೆ ಕುರುಕ್ಷೇತ್ರಕ್ಕೆ ಹೋಗಿದ್ದುದರಿಂದ ಬದುಕಿದನು. ಅವನ ಮಗನಾದ ಅಶ್ವಸೇನನೆಂಬ ಸರ್ಪಕಿಶೋರನಿಗೆ ಇಂದ್ರನು ಸಹಾಯಮಾಡಲು, ಅದ್ಭುತವಾದ ಬಿರುಗಾಳಿಯನ್ನೆಬ್ಬಿಸಿ ಅರ್ಜುನನಿಗೆ ಪ್ರಜ್ಞೆತಪ್ಪುವಂತೆ ಮಾಡಿದುದರಿಂದ ಅಶ್ವಸೇನನು ಬಹಳ ಕಷ್ಟಪಟ್ಟು ಉರಿಯಿಂದ ತಪ್ಪಿಸಿಕೊಂಡು ಹೋದನು. ಇದನ್ನು ನೋಡಿದ ಪಾರ್ಥನೂ ಶ್ರೀಕೃಷ್ಣನೂ ಮತ್ತು ಅಗ್ನಿಯೂ ಮಹಾ ಕೋಪದಿಂದ "ನಿನಗೆಂದೆಂದಿಗೂ ಕೀರ್ತಿ ಗೌರವಗಳು ಬಾರದಿರಲಿ," ಎಂಬದಾಗಿ ಅಶ್ವಸೇನನನ್ನು ಶಪಿಸಿದರು. ಇಂದ್ರನು ತನಗೆ ಪ್ರಜ್ಞೆ ತಪ್ಪಿಸಿ ಮೋಸಮಾಡಿದನೆಂಬ ಕೋಪವು ಅರ್ಜುನನಿಗೆ ಮಿತಿಮೀರಿತು. ಆಗ ಅವನು ಇಂದ್ರನಮೇಲೆ ಬಾಣಗಳನ್ನು ಪ್ರಯೋಗಿಸಿ ಅಂತರಿಕ್ಷವೆಲ್ಲವನ್ನೂ ಶರಮಯವನ್ನಾಗಿ ಮಾಡಿದನು. ಇದನ್ನು ನೋಡಿ ದೇವೇಂದ್ರನೂ ಸಹ ವಿಧ ವಿಧವಾದ ತನ್ನ ಅಸ್ತ್ರಗಳನ್ನು ಅರ್ಜುನನ

ಮೇಲೆ ಪ್ರಯೋಗಿಸಿ ಭಯಂಕರ ಯುದ್ಧವನ್ನಾರಂಭಿಸಿದುದಲ್ಲದೆ, ಆಕಾಶ ವೆಲ್ಲವನ್ನೂ ಮೇಘಗಳಿಂದ ಮುಚ್ಚಿ ಅಪರಿಮಿತವಾದ ಬಿರುಗಾಳಿ ಮಳೆ ಗಳನ್ನುಂಟುಮಾಡಿ, ಸಿಡಿಲು ಮಿಂಚು ಗುಡುಗುಗಳಿಂದ ಜಗತ್ತೇ ತಲ್ಲಣಿ ಸುವಂತೆ ಮಾಡಿದನು. ಆಗ ಅರ್ಜುನನು ಪ್ರಬಲವಾದ ವಾಯುವ್ಯಾಸ್ತ್ರ ವನ್ನು ಪ್ರಯೋಗಿಸಿ ಮೇಘಗಳೆಲ್ಲವನ್ನೂ ದಿಕ್ಕು ದಿಕ್ಕುಗಳಿಗೆ ಚದರಿಸಿ ಬೆಳಕುಮಾಡಿ, ಸಿಡಿಲು ಗುಡುಗು ಮಿಂಚುಗಳನ್ನು ನಿವಾರಿಸಿ ಮಳೆಯ ಹೆಸರೇ ಇಲ್ಲದಂತೆ ಮಾಡಿದನು. ಅಗ್ನಿಯು ಬಹು ಸಂತೋಷದಿಂದ ಖಾಂಡವವನ್ನು ದಹಿಸುತ್ತ, ಧಗದ್ಧಗಾಯಮಾನವಾದ ಉರಿಯ ವಿಧ ವಿಧವಾದ ಶಬ್ದಗಳಿಂದ ಜಗತ್ತನ್ನೇ ತುಂಬಿಸಿದನು. ಅನಂತರ ಇಂದ್ರನ ಪಕ್ಷವಾಗಿ ಖಾಂಡವ ವನವನ್ನು ಕಾಪಾಡಲು, ಅಗಣಿತವಾದ ಯಕ್ಷ ರಾಕ್ಷಸ ಗರುಡ ಗಂಧರ್ವ ನಾಗ ನಭಶ್ಚರರ ಗುಂಪುಗಳು ನುಗ್ಗಿ ಬಂದು ವಿಧ ವಿಧ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಶ್ರೀಕೃಷ್ಣಾ ರ್ಜುನರು ಯಾರನ್ನೂ ಲಕ್ಷಿಸದೆ ತಮ್ಮ ತೀಕ್ಷ್ಣಬಾಣಗಳಿಂದ ಅನೇಕ ಮಂದಿ ದೈತ್ಯದಾನವರ ತಲೆಗಳನ್ನು ಹಾರಿಸುತ್ತ ಬರಲು, ಇಂದ್ರಾ ದ್ಯಷ್ಟದಿಕ್ಪಾಲಕರೂ ಕಾರ್ತಿಕೇಯನೂ ಅಷ್ಟವಸುಗಳೂ ರುದ್ರರೂ ವಿಶ್ವೇದೇವತೆಗಳೂ ಸಾಧ್ಯರೇ ಮೊದಲಾದವರೆಲ್ಲರೂ ಅದ್ಭುತಾಯುಧ ಗಳನ್ನು ಧರಿಸಿ ಕೃಷ್ಣಾರ್ಜುನರೊಡನೆ ಯುದ್ಧಕ್ಕೆ ಬಂದರು. ಆದರೂ ಅವರಿಬ್ಬರೂ ಸ್ವಲ್ಪವೂ ಹೆದರಿ ಹಿಮ್ಮೆಟ್ಟದೆ ಪ್ರಳಯಕಾಲ ಭೈರವರಂತೆ ತಮ್ಮ ಶಸ್ತ್ರಾಸ್ತ್ರ ಪರಂಪರೆಗಳನ್ನು ಪ್ರಯೋಗಿಸುತ್ತ ಬರಲು, ದೇವಪಕ್ಷ ದವರೆಲ್ಲರೂ ಭಯಾಶ್ಚರ್ಯಗಳಿಂದ ನಡುಗುತ್ತ ರಣರಂಗವನ್ನು ಬಿಟ್ಟು ಹಿಂದಕ್ಕೆ ಪಾರಿದರು. ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರದ ಪೆಟ್ಟಿ ನಿಂದ ಲೆಕ್ಕವಿಲ್ಲದಷ್ಟು ಮಂದಿ ದೈತ್ಯದಾನವ ರಾಕ್ಷಸ ಪಿಶಾಚಾದಿ ಗಳನ್ನು ಲಕ್ಷ್ಯವಿಲ್ಲದೆ ವಧಿಸಿಬಿಟ್ಟನು. ಇಂದ್ರನು ಪುನಃ ಕೆರಳಿ ಅರ್ಜುನನನ್ನು ಕೊಂದೇಬಿಡಬೇಕೆಂದು ಮಂದರ ಪರ್ವತದ ಶಿಖರ ವೊಂದನ್ನು ಕಿತ್ತು ಅವನ ಮೇಲೆ ಉರುಳಿಸಿಬಿಟ್ಟನು. ಆದರೆ ವೀರ ಪಾರ್ಥನು ಅದನ್ನು ತನ್ನ ಪ್ರಬಲ ಬಾಣಗಳಿಂದ ಸಹಸ್ರ ಛಿದ್ರಗಳ ನ್ನಾಗಿ ಮಾಡಿಬಿಟ್ಟು ನಿರಪಾಯನಾಗಿ ನಿಂತನು. ಆ ಗುಂಡು ಉರುಳಿದ ರಭಸದಿಂದ ಸೂರ್ಯಚಂದ್ರರೇ ಭೂಮಿಗುರುಳಿದಂತಾದುದಲ್ಲದೆ ಅರ್ಜು

ನನು ಒಡೆದ ಅದರ ತುಂಡುಗಳಿಗೆ ಸಿಕ್ಕಿ, ಆ ಖಾಂಡವ ವನದ ಅಸಂಖ್ಯಾತ ಪ್ರಾಣಿಗಳು ನಾಮಾವಶೇಷವಾದವು. ಇದರಿಂದ ದೇವದಾನವರೆಲ್ಲರಿಗೂ ಶ್ರೀಕೃಷ್ಣಾರ್ಜುನರನ್ನು ಗೆಲ್ಲಲು ಸಾಧ್ಯವೇ ಇಲ್ಲವೆಂಬದಾಗಿ ಸ್ಪಷ್ಟ ವಾಯಿತು. ಅಲ್ಲದೆ, ಆ ಸಮಯದಲ್ಲಿ ಇಂದ್ರನನ್ನು ಕುರಿತು ಅಶರೀರ ವಾಣಿಯೊಂದು, " ಇಂದ್ರಾ, ಖಾಂಡವ ವನದಲ್ಲಿ ಅಗ್ನಿಪ್ರವೇಶವಾಗುವ ಮೊದಲೇ ನಿನ್ನ ಮಿತ್ರನಾದ ತಕ್ಷಕನು ಕುರುಕ್ಷೇತ್ರಕ್ಕೆ ಹೋಗಿದ್ದನಾದು ದರಿಂದ ಅವನು ಮೃತನಾಗಿಲ್ಲ. ಶ್ರೀಕೃಷ್ಣಾರ್ಜುನರಿಬ್ಬರೂ ಹಿಂದೆ ಪ್ರಖ್ಯಾತರಾಗಿದ್ದ ನರನಾರಾಯಣರೆಂಬ ಮಹರ್ಷಿಗಳು. ಅವರನ್ನು ಗೆಲ್ಲ ಬಲ್ಲವರು ಯಾವ ಲೋಕದಲ್ಲಿಯೂ ಇಲ್ಲ. ಅವರ ಮಹಿಮೆಯು ಮುಂದೆ ನಿನಗೆ ಗೊತ್ತಾಗುವುದು. ಅವರು ಸಮಸ್ತ ಸುರಾಸುರ ಗಂಧರ್ವ ಯಕ್ಷಕಿನ್ನರ ನಾಗನಭಶ್ಚರಾದಿಗಳಿಂದಲೂ ಪೂಜ್ಯರು. ನಿನ್ನ ಖಾಂಡವ ವನದ ದಹನವು ವಿಧಿ ನಿಶ್ಚಿತವಾದುದು. ಆದರಿಂದ ನೀನು ಇಲ್ಲಿಂದ ದೇವಲೋಕಕ್ಕೆ ಹೊರಡು," ಎಂಬದಾಗಿ ನುಡಿಯಿತು. ಇದನ್ನು ಕೇಳಿ ಇಂದ್ರನು ಕೋಪಾಸೂಯಾದಿಗಳನ್ನು ತ್ಯಜಿಸಿ ತನ್ನವರೊಡಗೂಡಿ ಸ್ವರ್ಗಲೋಕಕ್ಕೆ ಹಿಂದಿರುಗಿದನು.

ದೇವೇಂದ್ರನು ವಿಮುಖನಾಗಿ ಹೊರಟುಹೋದುದನ್ನು ನೋಡಿ ಶ್ರೀ ಕೃಷ್ಣಾರ್ಜುನರು ಅತ್ಯಂತಾನಂದದಿಂದ ಸಿಂಹನಾದವನ್ನು ಮಾಡಿ, ಖಾಂಡವ ವನವನ್ನು ತನ್ನ ಇಷ್ಟಾನುಸಾರವಾಗಿ ಸುಡಲು ಅಗ್ನಿದೇವನಿಗೆ ಸಹಾಯಮಾಡಿದರು. ಅರ್ಜುನನು ತನ್ನ ಬಾಣಪರಂಪರೆಗಳಿಂದ, ಬಿರುಗಾಳಿಯು ಮೇಘಗಳನ್ನು ಚದರಿಸುವಂತೆ, ಶತ್ರುಗಳೆಲ್ಲರನ್ನೂ ಓಡಿಸಿ, ವನದಲ್ಲಿದ್ದ ಅಸಂಖ್ಯಾತ ಪ್ರಾಣಿಗಳನ್ನು ವಧಿಸಿಬಿಟ್ಟನು. ಸಾವಿರಾರು ಭಯಂಕರ ಸಿಂಹ ಶಾರ್ದೂಲಗಳು, ವೀರಾವೇಶಯುಕ್ತನಾದ ಅರ್ಜುನನನ್ನು ಕಣ್ಣೆತ್ತಿ ಸಹ ನೋಡಲಾರದೆ, ಅವನ ಬಾಣಗಳಿಂದ ಹತವಾಗಿ ಅಗ್ನಿಗಾಹುತಿಯಾದವು. ಹೀಗೆ ಕೃಷ್ಣಾರ್ಜುನರಿಂದ ಹತವಾದ ಅಗಣಿತ ಪ್ರಾಣಿಗಳ ರಕ್ತಮಾಂಸ ಮೇದಸ್ಸುಗಳನ್ನು ತಿಂದು ಅಗ್ನಿಯು ಆನಂದಪಟ್ಟನು. ಹೀಗೆ ಆ ವೀರಾಗ್ರೇಸರರ ಸಹಾಯದಿಂದ ಅಗ್ನಿದೇವನು ಆ ವನವನ್ನು ಹದಿನೈದು ದಿನಗಳವರೆಗೆ ಸ್ವೇಚ್ಛೆಯಾಗಿ ದಹಿಸಿದನು. ಹೀಗೆ ದಹಿಸುತ್ತಿರುವ ಸಮಯದಲ್ಲಿ ತಕ್ಷಕನ ಮನೆಯಿಂದ

ಮಯನೆಂಬ ಅಸುರನು ತಟ್ಟನೆ ಹೊರಟು ಉರಿಯಿಂದ ತಪ್ಪಿಸಿಕೊಂಡು ಹೋಗುತ್ತಿರುವುದು ಶ್ರೀಕೃಷ್ಣನ ಕಣ್ಣಿಗೆ ಬಿತ್ತು. ಆ ಕೂಡಲೇ ಅವನನ್ನು ವಧಿಸಲು ವಾಸುದೇವನು ಸುದರ್ಶನ ಚಕ್ರವನ್ನೆತ್ತುವಷ್ಟರಲ್ಲಿ ಅಗ್ನಿಯು ಜಟಾಧರನಾದ ಒಬ್ಬ ಉರಿಯುತ್ತಿರುವ ಪುರುಷನಾಗಿ ಮಯನನ್ನು ಹಿಡಿಯಲು ಬಂದನು. ಆಗ ಮಯನು "ಓ ಅರ್ಜುನಾ, ನನ್ನನ್ನು ಕಾಪಾಡು," ಎಂಬದಾಗಿ ಗಟ್ಟಿಯಾಗಿ ಕೂಗಿಕೊಂಡನು. ಇದನ್ನು ಕೇಳಿದ ಅರ್ಜುನನು ಶರಣಾಗತ ರಕ್ಷಣೆಯೇ ಧರ್ಮವೆಂದು, "ಹೆದರ ಬೇಡ! ಹೆದರಬೇಡ! ನಾನು ನಿನ್ನ ಪ್ರಾಣವನ್ನುಳಿಸುವೆನು," ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಇದನ್ನು ಕೇಳಿದ ಶ್ರೀಕೃಷ್ಣನೂ ಅಗ್ನಿದೇವನೂ ಮಯನಿಗೆ ಅಪಾಯವಿಲ್ಲದಂತೆ ಬಿಟ್ಟು ಬಿಟ್ಟರು.

ಖಾಂಡವ ವನವನ್ನು ಸುಟ್ಟ ಅಗ್ನಿದೇವನು, ಒಟ್ಟಿನಲ್ಲಿ, ಅಶ್ವಸೇನ, ಮಯ, ಮತ್ತು ನಾಲ್ಕು ಸಾರಂಗಕಗಳೆಂಬ ಹಕ್ಕಿಗಳು, ಈ ಆರುಮಂದಿ ಯನ್ನು ಮಾತ್ರ ಸುಡದೆ ಬಿಟ್ಟು ಬಿಟ್ಟನು.

## ಮಂದಪಾಲೋಪಾಖ್ಯಾನ

ವೈಶಂಪಾಯನ ಮುನಿಯ ಮುಖದಿಂದ ಭಾರತಕಥೆಯನ್ನು ಕೇಳುತ್ತಿದ್ದ ಜನಮೇಜಯರಾಯನು, ಆ ಮುನಿಯನ್ನು ಕುರಿತು, "ಸ್ವಾಮೀ, ಖಾಂಡವವನದಹನದಲ್ಲಿ, ಅಶ್ವಸೇನನೂ ಮಯನೂ ಉರಿಯಿಂದ ತಪ್ಪಿಸಿಕೊಂಡ ವಿಚಾರವನ್ನೇನೋ ತಿಳಿಸಿದಿರಿ; ಮಿಕ್ಕ ನಾಲ್ಕು ಶಾರಂಗಕ ಪಕ್ಷಿಗಳನ್ನು ಅಗ್ನಿದೇವನು ಸುಡದೆ ಬಿಡಲು ಕಾರಣ ವೇನೆಂಬುದನ್ನು ಮಾತ್ರ ನೀವು ತಿಳಿಸಲಿಲ್ಲ ಆ ವಿಚಾರವನ್ನೂ ದಯೆ ಯಿಟ್ಟು ಹೇಳಬೇಕು," ಎಂಬದಾಗಿ ಕೇಳಲು, ವೈಶಂಪಾಯನ ಮುನಿಯು ಆ ಕಥೆಯನ್ನು ಈ ರೀತಿಯಾಗಿ ಹೇಳಿದನು :—

"ಪೂರ್ವಕಾಲದಲ್ಲಿ ಮಂದಪಾಲನೆಂಬ ಮಹರ್ಷಿಯು, ದಿವ್ಯಸಹಸ್ರ ವರ್ಷಗಳು ಬ್ರಹ್ಮಚರ್ಯನಿಷ್ಠೆಯಿಂದ ಅತ್ಯುಗ್ರತಪಸ್ಸನ್ನಾಚರಿಸಿ, ಯೋಗಾಭ್ಯಾಸವಶದಿಂದ ದೇಹತ್ಯಾಗಮಾಡಿ, ಊರ್ಧ್ವಲೋಕವನ್ನು ಸೇರಿದನು ಆದರೂ ಆತನಿಗೆ ಅಲ್ಲಿ ತನ್ನ ಪುಣ್ಯಕರ್ಮಗಳ ಫಲವು ಲಭಿಸಲೇ ಇಲ್ಲ. ಇದರಿಂದ ಮಂದಪಾಲನು ಆಶ್ಚರ್ಯಪಟ್ಟು, ಪಿತೃಲೋಕ

ದಲ್ಲಿ ಯಮಧರ್ಮರಾಜನನ್ನು ಬಳಸಿ ಕುಳಿತಿದ್ದ ದೇವತೆಗಳನ್ನು ಕುರಿತು, ತನಗೆ ತನ್ನ ಮಹಾತಪಸ್ಸಿನ ಫಲಗಳೇತಕ್ಕೆ ದೊರೆಯಲಿಲ್ಲವೆಂದು ಪ್ರಶ್ನೆಮಾಡಿದನು. ಅದಕ್ಕೆ ದೇವತೆಗಳು, 'ಅಯ್ಯಾ, ಎಷ್ಟು ತಪಸ್ಸನ್ನು ಮಾಡಿದರೇನು? ಸಂತಾನವಿಲ್ಲದವರಿಗೆ ಸದ್ಗತಿಯಿಲ್ಲ, ಎಂಬುದಾಗಿ ಹೇಳಿದರು. ಅದನ್ನು ಕೇಳಿ ವ್ಯಸನಾಕ್ರಾಂತನಾದ ಮಂದಪಾಲನು ಆ ಕೂಡಲೇ ಭೂಲೋಕಕ್ಕೆ ಬಂದು ಆಲೋಚಿಸಿ ಪಕ್ಷಿಗಳಿಗೆ ಬಹು ಬೇಗನೆ ಸಂತಾನವಾಗುವುದೆಂಬುದನ್ನು ಕಂಡು, ತಾನು ಶಾರ್ಙ್ಗಕ ಪಕ್ಷಿಯಾಗಿ ಜರಿತ ಎಂಬ ಲಾವನ ಹಕ್ಕಿಯಲ್ಲಿ ರಮಿಸಿ, ಜರತಾರಿ, ಸಾರಿಸೃಕ್ವ, ಸ್ತಂಬಮಿತ್ರ ಮತ್ತು ದ್ರೋಣ ಎಂಬ ನಾಲ್ವರು ಪುತ್ರರನ್ನು ಪಡೆದನು. ಅನಂತರ ಆ ಭಾರ್ಯಾ ಪುತ್ರರನ್ನು ಖಾಂಡವ ವನದಲ್ಲಿರಿಸಿ, ತನ್ನ ಪೂರ್ವ ಭಾರ್ಯೆಯಾದ ಲಪಿತೆಯೂ ತಾನೂ ವಿಹರಿಸುತ್ತಿರುವಲ್ಲಿ, ಖಾಂಡವ ದಹನೋದ್ಯುಕ್ತನಾಗಿ ಬರುತ್ತಿದ್ದ ಅಗ್ನಿದೇವನು ಗೋಚರನಾದನು. ಆಗ ಮಂದಪಾಲನು ಅಗ್ನಿದೇವನನ್ನು ಅಗ್ನಿಸೂಕ್ತಗಳಿಂದ ಸ್ತುತಿಸಿ ಕೈಮುಗಿದು, 'ಅಯ್ಯಾ ಅಗ್ನಿದೇವಾ, ನೀನು ಧರ್ಮಮೂರ್ತಿಯು. ಈ ವನದಲ್ಲಿ ನನ್ನಿಂದ ಜನಿಸಿದ ಜರತಾರಿ ಮೊದಲಾದ ನಾಲ್ವರು ಪುತ್ರರು ಲಾವನ ಹಕ್ಕಿಗಳ ರೂಪದಿಂದಿರುವರು. ನೀನು ದಯೆಯಿಟ್ಟು ಅವರನ್ನು ದಹಿಸದೆ ಕಾಪಾಡಿ ಉಪಕಾರವಮಾಡಬೇಕು' ಎಂಬುದಾಗಿ ಪ್ರಾರ್ಥಿಸಿಕೊಂಡನು. ಅದಕ್ಕೆ ಅಗ್ನಿದೇವನು ಸಂಮತಿಸಲು ಮಂದಪಾಲನು ವಂದಿಸಿ ಹೊರಟು ಹೋದನು.

ಇತ್ತಲಾ ಜರಿತೆಯೆಂಬ ಸ್ತ್ರೀಪಕ್ಷಿಯು, ಮುಂದೆ ಅಗ್ನಿಯು ಉರಿಯೇರಿಬರುತ್ತಿರುವುದನ್ನು ಕಂಡು, ತನ್ನ ಮಕ್ಕಳನ್ನು ರಕ್ಷಿಸಲು ದಿಕ್ಕೇತೋರದೆ ದುಃಖಿಸುತ್ತ ಅವರನ್ನು ನೋಡಿ, 'ಮಕ್ಕಳಿರಾ! ಪ್ರಳಯಾಗ್ನಿಯಂತೆ ಕಾಳ್ಗಿಚ್ಚು ಹತ್ತಿಕೊಂಡಿತ್ತಲೇ ಬರುತ್ತಿರುವುದು. ಅದರಿಂದ ನೀವು ನಾಲ್ವರೂ ಇಲ್ಲಿ ಕಾಣುವ ಆ ಬಿಲಕ್ಕೆ ಹೋಗಿ ಸೇರಿ ಪ್ರಾಣಗಳನ್ನುಳಿಸಿಕೊಳ್ಳಿ. ನಿಮ್ಮ ತಂದೆಯು ನಿಮಗಪಾಯವು ಬಾರದಂತೆ ಕಾಪಾಡೆಂದು ನನಗೆ ಹೇಳಿ ಎಲ್ಲಿಯೋ ಹೊರಟು ಹೋದರು. ಈಗ ನಮಗೆ ಅಗ್ನಿಪ್ರಳಯವೇ ಒದಗಿರುವುದು. ಅದರಿಂದ ನೀವುಗಳು ಮೊದಲು ಆ ಬಿಲವನ್ನು ಹೊಕ್ಕು ಉರಿಯಿಂದ ತಪ್ಪಿಸಿಕೊಳ್ಳಿ,' ಎಂಬು

ದಾಗಿ ದುಃಖಿಸುತ್ತ ಹೇಳಿದಳು. ಅದನ್ನು ಕೇಳಿ ಹಿರಿಯ ಮಗನಾದ ಜರಿತಾರಿಯು, 'ಅಮ್ಮಾ, ನಾವುಗಳು ಆ ಬಿಲವನ್ನು ಹೊಕ್ಕರೆ ಅಲ್ಲಿ ಇಲಿಯು ನಮ್ಮನ್ನು ಕೊಲ್ಲುವುದು. ಇಲ್ಲಿಯೇ ಇದ್ದು ಅಗ್ನಿಗೆ ತುತ್ತಾದರೆ ನಮಗೆ ಪುಣ್ಯಲೋಕವು ಲಭಿಸುವುದು; ಬಿಲವನ್ನು ಸೇರಿದರೆ ಇಲಿಗೆ ನಾವುಗಳು ಆಹಾರವಾಗಿ ಸಾಯುವುದೇ ನಿಜವು. ಅಗ್ನಿಯು ವಾಯುವಶವಾದುದರಿಂದ, ಅಗ್ನಿಗೆ ಸಿಕ್ಕಿದಾಗ ನಾವು ಬದುಕಿದರೂ ಬದುಕಬಹುದು. ಅದು ಹೇಗಾದರೂ ಆಗಲಿ. ನೀನು ನಮ್ಮ ಚಿಂತೆಯನ್ನು ಬಿಟ್ಟು ಮೊದಲು ಇಲ್ಲಿಂದ ಹಾರಿಹೋಗು. ಒಂದುವೇಳೆ ನಾವುಗಳು ಅಗ್ನಿಗೆ ಸಿಕ್ಕಿ ಮೃತರಾದರೂ, ನೀನು ಬೇರೆ ಪುತ್ರರನ್ನು ಪಡೆದು ಬದುಕಿರಬಹುದು. ಒಂದುವೇಳೆ ನಿನ್ನ ಪುಣ್ಯದಿಂದ ನಮಗೆ ಅಗ್ನಿ ಭಯವು ತೊಲಗಿದಲ್ಲಿ ಮತ್ತೆ ನೀನು ನಮ್ಮ ಬಳಿಗೇ ಬಂದು ಎಂದಿನಂತೆ ಸುಖ ಸಂತೋಷಗಳಿಂದಿರಬಹುದು,' ಎಂಬದಾಗಿ ಕೈ ಮುಗಿದು ಹೇಳಿದನು. ಅದನ್ನು ಕೇಳಿ ಜರಿತೆಯು, ತನಗೆ ಕೈಮುಗಿದ ಮಕ್ಕಳೆಲ್ಲರನ್ನೂ ನೋಡಿ ಕಣ್ಣೀರುಗರೆದು, ಮುಂದೆ ಧಗಧಗನೆ ಉರಿಯುತ್ತ ಬರುತ್ತಿದ್ದ ಅಗ್ನಿಯನ್ನು ನೋಡಿ, ಅನ್ಯೋಪಾಯವಿಲ್ಲದೆ, ಪ್ರಾಣಭಯದಿಂದ ಆಕಾಶಕ್ಕೆ ಹಾರಿಹೋಯಿತು. ಅನಂತರ ಆ ನಾಲ್ಕು ಹಕ್ಕಿ ಮರಿಗಳೂ 'ಅಗ್ನಿದೇವಾ, ನಮಗಭಯವನ್ನು ಕರುಣಿಸು, ಅಭಯವನ್ನು ಕರುಣಿಸು,' ಎಂಬುದಾಗಿ ಪ್ರಾರ್ಥಿಸುತ್ತಿದ್ದವು. ಅಗ್ನಿದೇವನು ಅದನ್ನು ಕೇಳಿ, ಮಂದಪಾಲಮುನಿಯ ಪ್ರಾರ್ಥನೆಯನ್ನು ಸ್ಮರಣೆಗೆ ತಂದುಕೊಂಡು, ಆ ಹಕ್ಕಿಗಳಿದ್ದ ವೃಕ್ಷವನ್ನು ಮುಟ್ಟದೆ ಶಾಂತನಾಗಿ ಮುಂದೆ ಹೋದನು. ಜರಿತೆಯು ಆಕಾಶಮಾರ್ಗದಿಂದ ಇದನ್ನು ನೋಡಿ ತನ್ನ ಮಕ್ಕಳಿಗೆ ಅಪಾಯವು ಪರಿಹಾರವಾದುದರಿಂದ ಅತ್ಯಾನಂದಪಟ್ಟು, ಹಿಂದಿರುಗಿ ಪುತ್ರರ ಬಳಿಗೆ ಬಂದು ಸುಖ ಸಂತೋಷಗಳಿಂದಿದ್ದಿತು. ಲಪಿತೆಯೊಡನಿದ್ದ ಮಂದಪಾಲನು ಖಾಂಡವ ದಹನದಲ್ಲಿ ತನ್ನ ಪತ್ನೀ ಪುತ್ರರು ದಗ್ಧರಾಗಿರಬೇಕೆಂದು ವ್ಯಸನಪಡುತ್ತ ಅಲ್ಲಿಗೆ ಬರಲು, ಜರಿತೆಯೂ ನಾಲ್ವರು ಮಕ್ಕಳೂ ಸುಖವಾಗಿದ್ದುದನ್ನು ಕಂಡು ಆನಂದ ಭರಿತನಾದನು.

ಹೀಗೆ ಕೃಷ್ಣಾರ್ಜುನರ ಸಹಾಯದಿಂದ ಅಗ್ನಿದೇವನು ಖಾಂಡವ

ವನವನ್ನು ದಹಿಸಿ, ಬ್ರಹ್ಮದೇವನು ಹೇಳಿದಂತೆ ರೋಗರಹಿತನಾಗಿ ಕೃಷ್ಣಾರ್ಜುನರನ್ನಾಶೀರ್ವದಿಸಿ ಹೊರಟು ಹೋದನು.

ಇತ್ತಲಾ ದೇವೇಂದ್ರನು, ಅಮಾನುಷವೂ ಅತಿದುಷ್ಕರವೂ ಅತ್ಯದ್ಭುತವೂ ಆದ ಶ್ರೀಕೃಷ್ಣಾರ್ಜುನರ ಸಾಹಸಕಾರ್ಯವನ್ನು ನೋಡಿ ಪರಮಾಶ್ಚರ್ಯಾನಂದಗಳಿಂದ ದೇವಗಣ ಸಹಿತನಾಗಿ ಅವರಬಳಿಗೆ ಬಂದು ಅವರಿಬ್ಬರನ್ನೂ ಕುರಿತು, 'ಅದ್ಭುತ ಪರಾಕ್ರಮಿಗಳಾದ ಶ್ರೀಕೃಷ್ಣಾರ್ಜುನರೇ, ದೇವತೆಗಳಿಗೂ ಅಸಾಧ್ಯವಾದ ಮಹತ್ಕಾರ್ಯವನ್ನು ನೀವು ಮಾಡಿ ಜಯಶೀಲರಾಗಿರುವಿರಿ. ನಿಮ್ಮ ಶೌರ್ಯ ಸಾಹಸ ಶರಶಸ್ತ್ರಕಲಾ ಕೌಶಲಗಳನ್ನು ನೋಡಿ ನನಗತ್ಯಾನಂದವಾಯಿತು. ನಿಮಗೆ ಬೇಕಾದ ವರಗಳನ್ನು ಕೇಳಿ, ಕೊಡುವೆನು,' ಎಂದು ಅವರನ್ನಾಲಿಂಗಿಸಿ ಭುಜಗಳನ್ನು ತಟ್ಟಿದನು. ಆಗ ಅರ್ಜುನನು, ಇಂದ್ರನಲ್ಲಿಯು ಸರ್ವಾಸ್ತ್ರಗಳನ್ನೂ ಕೇಳಲು, ಆತನು 'ಅರ್ಜುನಾ, ಮುಂದೆ ಮಹಾದೇವನು ನಿನ್ನ ತಪಸ್ಸಿಗೆ ಮೆಚ್ಚಿ ನಿನಗೆ ಅಮೋಘಾಸ್ತ್ರಗಳನ್ನು ಕರುಣಿಸುವನು. ಆಗ ನಾನೂ ಸಹ ನಿನಗೆ ನನ್ನಲ್ಲಿರುವ ಸಕಲಾಸ್ತ್ರಗಳನ್ನೂ ಕೊಡುವೆನು,' ಎಂದು ಹೇಳಿದನು. ಅನಂತರ ಶ್ರೀಕೃಷ್ಣನು, ದೇವೇಂದ್ರನನ್ನು ನೋಡಿ, 'ಮಹೇಂದ್ರಾ! ಪಾರ್ಥನಲ್ಲಿ ನನ್ನ ಮೈತ್ರಿಯು ಅವಿಚ್ಛಿನ್ನವಾಗಿ ಬೆಳೆದು ಶಾಶ್ವತವಾಗಿರುವಂತೆ ವರವನ್ನನುಗ್ರಹಿಸಬೇಕು,' ಎಂದನು. ಇಂದ್ರನು ಅದಕ್ಕೆ ಸಂತೋಷಪಟ್ಟು ಉಭಯರ ಇಷ್ಟಾರ್ಥಗಳನ್ನೂ ಕರುಣಿಸಿ, ತನ್ನಜೊತೆಯಲ್ಲಿ ಬಂದಿದ್ದ ಸಕಲ ದಿವಿಜ ಮರುದ್ಗಂಧರ್ವಾದಿಗಳಿಂದ ಸೇವಿತನಾಗಿ ವಿಮಾನವನ್ನೇರಿ ದೇವಲೋಕವನ್ನು ಕುರಿತು ಪ್ರಯಾಣಮಾಡಿದನು."

ಎಂಬುದಾಗಿ ವೈಶಂಪಾಯನ ಮುನೀಂದ್ರನು ಜನಮೇಜಯರಾಯನಿಗೆ ಹೇಳಿದನೆಂದು ಸೂತಪುರಾಣಕನು ನೈಮಿಶಾರಣ್ಯದ ಸನಕಾದಿ ಮಹರ್ಷಿಗಳಿಗೆ ಮಹಾಭಾರತದ ಆದಿಪರ್ವದ ಕಥೆಯನ್ನು ಹೇಳಿದನು.

**ಆ ದಿ ಪ ರ್ವ ಂ**

**ಸಂಪೂರ್ಣಂ.**

---

